# ಮುನ್ನುಡಿ

ಇತ್ತೀಚಿನ ವರ್ಷಗಳಲ್ಲಿ ಜ್ಯೋತಿಷವನ್ನು ಕುರಿತು ಹಲವು ಪುಸ್ತಕಗಳು ಹೊರಬಂದಿವೆ. ಆದರೆ ಅವುಗಳಲ್ಲಿ ಬಹುತೇಕ ಫಲ ಜ್ಯೋತಿಷವನ್ನು ಕುರಿತವು. ಮುಹೂರ್ತ ಶಾಸ್ತ್ರವು ಜ್ಯೋತಿಷ ಸಾಹಿತ್ಯದಲ್ಲಿ ಒಂದು ಮುಖ್ಯವಾದ ಭಾಗ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಅದರದೇ ಒಂದು ವಿಶಿಷ್ಟ ಸ್ಥಾನವಿದೆ. ಆಧುನಿಕ ಕಾಲದಲ್ಲೂ ಮನುಷ್ಯನ ಕಾರ್ಯಭಾರವೂ, ಪ್ರಯತ್ನವೂ ಮುಹೂರ್ತದ ನೆರವನ್ನು ಕೋರದೆ ಇರುವುದಿಲ್ಲ. ಆದಕಾರಣ ಮನುಷ್ಯನು ಸಕಾಲದಲ್ಲಿ ಸತ್ಪ್ರಯತ್ನವನ್ನು ಮಾಡಬೇಕಾದುದು ಎಷ್ಟು ಮುಖ್ಯ ಎಂಬುದು ಜ್ಯೋತಿಷದ ಹವಣಿಕೆಯಾಗಿದೆ — ಎಂಬ ಈ ಅಂಶವನ್ನು ಸಮರ್ಥಿಸಿಕೊಡುವುದೇ ಈ ಪುಸ್ತಕದ ಉದ್ದೇಶವಾಗಿದೆ.

ಈ ಪುಸ್ತಕದ ಮುಖ್ಯ ಗುರಿ ಒಂದು ಖಚಿತ ರೂಪದಲ್ಲಿ ಮುಹೂರ್ತಕ್ಕೆ ಸಂಬಂಧಪಟ್ಟ ಎಲ್ಲ ಮುಖ್ಯಾಂಶಗಳನ್ನೂ ವಾಚಕರಿಗೆ ಒದಗಿಸಿಕೊಡುವುದೇ ಆಗಿದೆ. ಇದರಿಂದ ವಾಚಕರು ಬದುಕಿನ ಎಲ್ಲ ಸಂದರ್ಭಗಳಲ್ಲೂ ಅದನ್ನು ಉಪಯೋಗಿಸಿಕೊಳ್ಳುವಂತಾಗಲಿ ಎಂದು ಆಶಿಸಿದೆ.

ಮುಹೂರ್ತವನ್ನು ಕುರಿತು ಸಂಸ್ಕೃತದಲ್ಲಿ ವಿಪುಲ ಸಾಹಿತ್ಯವು ಲಭ್ಯವಿದೆ. ಈ ಆಧಾರ-ಗ್ರಂಥಗಳಿಂದ ಸಾರಭೂತವಾದ ತತ್ವಗಳನ್ನು ಸಂಗ್ರಹಿಸಿ ಈ ಮೂಲಕ ನಿವೇದಿಸಲು ನಾನು ಪ್ರಯತ್ನಿಸಿದ್ದೇನೆ. ಆಧಾರ-ಗ್ರಂಥಗಳೆರಡರಲ್ಲಿ ಗಮನಾರ್ಹವಾದ ವ್ಯತ್ಯಾಸಗಳು ಕಂಡುಬಂದಾಗ ನನ್ನ ಸ್ವಂತ ಅಭಿಪ್ರಾಯಗಳನ್ನು ಮುಂದಿಟ್ಟಿದ್ದೇನೆ. ಇದಕ್ಕೆ ಒಂದು ನಮ್ರವಾದ ಸಮರ್ಥನೆ ಏನೆಂದರೆ ನನ್ನ ಅನುಭವ: ಸುಮಾರು ಅರವತ್ತು ವರ್ಷಗಳಿಗೂ ಹೆಚ್ಚಾಗಿ ಈ ದಿಶೆಯಲ್ಲಿ ನಾನು ಮನುಷ್ಯನ ಎಲ್ಲ ಚಟುವಟಿಕೆಗಳಿಗೂ ನೂರಾರು ಸಂದರ್ಭಗಳಲ್ಲಿ, ಸರಿಯಾದ ಮುಹೂರ್ತಗಳನ್ನು ನಿರ್ಣಯಿಸಿ ಕೊಟ್ಟಿದ್ದೇನೆ. ಇದರಿಂದ ನಾನು ಪಡೆದುಕೊಂಡ ಅನುಭವಗಳು ವಾಚಕರಿಗೆ ಅಂಗೀಕಾರಾರ್ಹವಾಗಿಲ್ಲ ಎಂದು ಕಂಡು ಬಂದರೆ ಆ ನನ್ನ ಅನುಭವಗಳನ್ನು ವಾಚಕರು ನಿರಾಕರಿಸಬಹುದು.

ಜ್ಯೋತಿಶ್ಶಾಸ್ತ್ರದ ಪರಮೋದ್ದೇಶ ಕಾಣದ ಭವಿಷ್ಯವನ್ನು ಕುರಿತ ಭಯ -ಸಂಶಯಗಳನ್ನು ನಿವಾರಿಸಿಕೊಟ್ಟು ಮನುಷ್ಯನ ಸ್ವಂತ ಪ್ರಯತ್ನಕ್ಕೆ ಅವಕಾಶ

ಒದಗಿಸಿಕೊಡುವುದೇ ಆಗಿದೆ. ಈ ಅವಶ್ಯಕತೆಯನ್ನು ಈ 'ಮುಹೂರ್ತ' ಗ್ರಂಥ ಪೂರೈಸಲು ಪ್ರಯತ್ನಿಸಿದೆ. ಈ ಗ್ರಂಥ ಸಂಪೂರ್ಣವೇನಲ್ಲ. ವಿಷಯ ವಿಸ್ತಾರವಾಗಿದೆ. ಆದರೆ ನಾನು ಹಲವಾರು ಅಂಗೀಕೃತ ಮೂಲಗಳಿಂದ ವಿಷಯ ಸಂಗ್ರಹ ಮಾಡಿಕೊಟ್ಟಿದ್ದೇನೆ. ಆಧುನಿಕರಿಗೆ ಅದು ಅತ್ಯಂತ ಉಪಯುಕ್ತವಾಗುತ್ತದೆ ಎಂದುಕೊಂಡಿದ್ದೇನೆ.

ಇದರ ಸಹಾಯದಿಂದ, ವಾಚಕರು ಮುಹೂರ್ತವನ್ನು ನಿರ್ಣಯಿಸಿಕೊಡಿ ಎಂದು ಕೇಳುವ ಒಂದು ಕಂದಾಚಾರವನ್ನು ಕೈಗೊಳ್ಳುವಂತಾಗದೆ, ಹಣ ಕೀಳುವ ಜ್ಯೋತಿಷವೇಷಿಗಳಿಗೆ ಮುಗಿಬೀಳದಂತಾಗದೆ ಸ್ವತಃ ತಮ್ಮ ಕಾರ್ಯಗಳು ಪ್ರಕೃತಿ ನಿಯಮಗಳಿಗೆ ಅನುಕೂಲವಾಗಿ, ಸುಸೂತ್ರವಾಗಿ ನೆರವೇರುವಂತೆ ಸ್ವತಃ ನಿಷ್ಕರ್ಷಿಸಿ ಕೊಳ್ಳುವಂತಾಗಲಿ ಎಂಬುದು ನನ್ನ ಪರಮೋದ್ದೇಶವಾಗಿದೆ.

ಆಂಗ್ಲ ಭಾಷೆಯಲ್ಲಿ 'ಮುಹೂರ್ತ' ಎಂಬ ನನ್ನ ಗ್ರಂಥವು ಈ ವರೆಗೆ ಹನ್ನೊಂದು ಮುದ್ರಣಗಳನ್ನು ಕಂಡಿದೆ.

ಜ್ಯೋತಿಷ ಪಂಡಿತರೂ, ಜ್ಞಾನಾರ್ಥಿಗಳೂ ಈ ಕನ್ನಡ ಮುದ್ರಣವನ್ನು ಕೂಡ ನನ್ನ ಇತರೇ ಪುಸ್ತಕಗಳನ್ನು ಸ್ವಾಗತಿಸಿರುವಂತೆ ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

ಈ ಪುಸ್ತಕವನ್ನು ಆಕರ್ಷಕವಾದ ರೀತಿಯಲ್ಲಿ ಹೊರತಂದಿರುವ 'ಯು. ಬಿ. ಎಸ್. ಪಬ್ಲಿಷರ್ಸ್ ಮತ್ತು ಡಿಸ್ಟ್ರಿಬ್ಯೂಟರ್ಸ್' ಪ್ರಕಾಶನದ ಶ್ರೀ ಬಲರಾಮ್ ಸಾದ್ವಾನಿಯವರಿಗೂ ನಾನು ಆಭಾರಿಯಾಗಿದ್ದೇನೆ.

೧೭-೪-೧೯೯೭
ಬೆಂಗಳೂರು

ಬಿ.ವಿ. ರಾಮನ್

ಮೊದಲನೆಯ ಅಧ್ಯಾಯ

# ಮುಹೂರ್ತದ ಪ್ರಾಮುಖ್ಯತೆ

ಕಾಲದ ಮೌಲ್ಯವು ಅಗಣಿತವಾದುದು. ಪ್ರಕೃತಿಯಲ್ಲಿರುವ ಸಮಸ್ತ ವಸ್ತುಗಳೂ ಕಾಲದಲ್ಲಿ ಉದ್ಭವಿಸಿ, ಬೆಳೆದು ವಿನಾಶವಾಗುತ್ತವೆ. ಈ ಸತ್ಯಾಂಶಕ್ಕೆ ಬೇರೆ ಸಾಕ್ಷ್ಯ ಬೇಕಾಗಿಲ್ಲ. ಇದಕ್ಕೆ ಆಕ್ಷೇಪವೇ ಇಲ್ಲ. ಇಲ್ಲಿ ನಾವು ಉದಹರಿಸಬೇಕಾದ ಒಂದು ಘನ ಪ್ರಶ್ನೆಯಿದೆ. ಸೃಷ್ಟಿ, ಸ್ಥಿತಿ, ಲಯಕಾರಕವಾದ ಶಕ್ತಿಗಳೆಲ್ಲ ಮಹತ್ತರವಾದ ಕಾಲದ –ಜ್ಯೋತಿಷ ಸಾಹಿತ್ಯದಲ್ಲಿ ಇದನ್ನು ಕಾಲಪುರುಷ ಎನ್ನುತ್ತಾರೆ–ಗರ್ಭದಲ್ಲಿ ಅಡಗಿರುವುದಾದರೆ, ಅಗ್ನಿ ಸೌರಗೋಳದಿಂದ ಹೊರಹೊಮ್ಮುವ ಶಕ್ತಿ ಪ್ರಭಾವಗಳನ್ನೂ, ಮತ್ತು ತಮ್ಮ ಎಲ್ಲ ಚೈತನ್ಯಭೂತವಾದ ಪ್ರಭಾವಗಳಿಗೂ ಸೂರ್ಯನನ್ನೇ ಅವಲಂಬಿಸಿರುವ ಇತರೆ ಖಗೋಳ ಕಾರ್ಯಗಳಿಂದ ಪ್ರತಿಬಿಂಬಿತವಾಗಿ ವಿವಿಧ ಪ್ರಕಾರವಾದ ಮಾರ್ಪಾಡುಗಳ ತರುವಾಯ ಹೊರಹೊಮ್ಮುವ ನಾನಾ ರೀತಿಯ ಶಕ್ತಿ ಪ್ರಭಾವಗಳನ್ನು ಕುರಿತು ಚಿಂತನೆ ಮಾಡುವುದು ಉಚಿತವಾಗುವುದಷ್ಟೆ. ಸೂರ್ಯನಿಂದ ಉಂಟಾಗುವ ಕಾಲವನ್ನು ಮತ್ತು ಅಗಹನವಾದ ಉಪಾದಿಯಲ್ಲಿ ಅಡಗಿರುವ ಎಲ್ಲ ವೈಭವೋಪೇತವಾದ ವ್ಯಾಪಾರಗಳನ್ನೂ ಕುರಿತಂಥ ವಿಜ್ಞಾನವೇ ಜ್ಯೋತಿಷ. ವೈಜ್ಞಾನಿಕ ಸಂಶೋಧನೆಗಳ ಮೂಲಕ, "ನಾವು ಕಾಣುತ್ತಿರುವುದೆಲ್ಲ ನಿಯತಿಯ ವಿಶ್ವರೂಪ" ಎಂಬುದು ನಿಶ್ಚಯಪಡುತ್ತದೆ. ಜ್ಯೋತಿಷವು, "ಒಂದು ಅಖಂಡ ದರ್ಶನ. ಅದಕ್ಕೆ ಭೌತ ವಿಜ್ಞಾನದ ನೆರವಾಗಲಿ ತತ್ತ್ವ ಶಾಸ್ತ್ರದ ನೆರವಾಗಲಿ ಅವಶ್ಯಕವಿಲ್ಲ. ವಿಸರಣ ಕ್ರಿಯೆಯ ಎಲ್ಲ ಭೌಗೋಳಿಕ ವ್ಯಾಪಾರಗಳಿಗೂ ನಿರ್ಮಾಣಕಾರಕ ಎಂಬ ಅನುಭವ ಸಿದ್ಧವಾದ ಕಲ್ಪನೆಯ ಕ್ರಮಬದ್ಧವಾದ ಶಾಸ್ತ್ರ ವ್ಯವಸ್ಥೆ ಈ ವಿಜ್ಞಾನ. ಈ ಕಲ್ಪನೆಯು ಪ್ರಾರಂಭದಲ್ಲಿ ಎಷ್ಟು ಯಥೋಚಿತವಾಗಿತ್ತೋ ಇವತ್ತಿಗೂ ಅಷ್ಟೇ ಸಿಂಧುವಾಗಿದೆ. ಆಧುನಿಕ ವೈಜ್ಞಾನಿಕ ಸಂಶೋಧನೆಗಳು, ಈ ಕಲ್ಪನೆ ಎಷ್ಟು ಸಮಂಜಸವಾಗಿದೆ ಎಂಬುದನ್ನು ಊರ್ಜಿತಪಡಿಸಿಕೊಟ್ಟಿವೆ. ಜೀವ ವಿಜ್ಞಾನಕ್ಕೆ ಗಣಿತ ವಿಜ್ಞಾನವನ್ನು ಅನ್ವಯಿಸುವ ಪ್ರಥಮ ಮನುಷ್ಯ

ಪ್ರಯತ್ನವಿದಾಗಿರುವ ಕಾರಣ, ಜ್ಯೋತಿಷದ ತೀರ್ಮಾನಗಳೂ ಸಿದ್ಧಾಂತಗಳೂ ಹೊಚ್ಚ ಹೊಸ ವೈಜ್ಞಾನಿಕ ತತ್ತ್ವ ಪ್ರತಿಜ್ಞೆಗಳಿಂದ ದೃಢೀಕೃತವಾಗುತ್ತಿವೆ. *

ಗ್ರಹಗಳು ಮನುಷ್ಯರನ್ನು ಹೇಗೆ ಪ್ರಭಾವಿಸುತ್ತವೆ ಎಂಬುದನ್ನು ಈ ಪುಟಗಳಲ್ಲಿ ನಾವು ವಿಚಾರಿಸುವ ಗೋಜಿಗೆ ಹೋಗುವುದಿಲ್ಲ. ಈ ವಿಷಯವನ್ನು ***"ಆನ್ ಇಂಟ್ರೊಡಕ್ಷನ್ ಟು ಸ್ಟಡಿ ಆಫ್ ಆಸ್ಟ್ರಾಲಜಿ"*** ಎಂಬ ಆಂಗ್ಲ ಗ್ರಂಥದಲ್ಲಿ ಪ್ರೊ.ಬಿ. ಸೂರ್ಯನಾರಾಯಣರಾಯರೂ ಮತ್ತು **"ಮಾನವನ ಮೇಲೆ ಗ್ರಹಗಳ ಪ್ರಭಾವ"** ಎಂಬ ಆಂಗ್ಲ ಗ್ರಂಥದಲ್ಲಿ ನಾನೂ ಸವಿಶದವಾಗಿ ಪ್ರಸ್ತಾಪಿಸಿದ್ದೇನೆ. ಜ್ಯೋತಿಷದ ಮೂಲಭೂತವಾದ ಸಿದ್ಧಾಂತಗಳನ್ನು ತಿಳಿಯಲು ಅಪೇಕ್ಷಿಸುವವರು ಯಥಾನುಕೂಲವಾಗಿ ಆ ಎರಡು ಗ್ರಂಥಗಳನ್ನು ಪರಿಶೀಲಿಸಬಹುದು. ಇಲ್ಲಿ ಇಷ್ಟು ಹೇಳಿದರೆ ಸಾಕಾದೀತು. ನಮ್ಮ ಈ ಚಿಕ್ಕ ಪ್ರಪಂಚದೊಳಗಣ ಬದುಕನ್ನೂ ಅದರ ಎಲ್ಲ ಚಟುವಟಿಕೆಗಳನ್ನು ಸೃಷ್ಟಿಸಿ ರಕ್ಷಿಸಿ ವಿನಾಶಗೊಳಿಸಬಲ್ಲ ಸಾಧನೋಪಾಯಗಳನ್ನು ತಪ್ಪದೆ ಸಮನಾದ ರೀತಿಯಲ್ಲಿ ಒದಗಿಸುತ್ತಿರುವಂಥ ಸ್ಪಂದಕ ಶಕ್ತಿಗಳ ಒಂದು ಸಮುದ್ರದೊಳಗೆ ನಾವೆಲ್ಲ ವಾಸಿಸುತ್ತಿದ್ದೇವೆ. ಗ್ರಹಗಳ ಕ್ಷ-ಕಿರಣಗಳು ಅಗೋಚರವಾದ ಸ್ಪಂದನಗಳು. ಅವು ಜೈವಿಕ, ಮಾನಸಿಕ ಪ್ರಕ್ರಿಯೆಗಳನ್ನು ಪ್ರಭಾವಿಸುತ್ತವೆ.

ಸೂರ್ಯನು ಸರ್ವ ಜೀವಗಳಿಗೂ ಜೈವಿಕ ವ್ಯಾಪಾರಗಳಿಗೂ ಮೂಲ ಎಂಬುದನ್ನು ನಾವು ಅಂಗೀಕರಿಸಿದರೆ, ಅಗ ಕಾಲದಲ್ಲಿ ಅಂದರೆ ಸೂರ್ಯನಲ್ಲಿ ಸೃಷ್ಟಿ, ಸ್ಥಿತಿ, ಲಯಗಳಿಗೆ ಬೇಕಾಗುವ ಎಲ್ಲ ಶಕ್ತಿ ಚೈತನ್ಯಗಳೂ ಅಡಗಿವೆ ಎಂಬುದು ಸಿದ್ಧವಾಗುತ್ತದೆ. ಈ ಶಕ್ತಿ ಚೈತನ್ಯಗಳನ್ನು ನಮ್ಮ ಪ್ರಾಚೀನ ಮಹರ್ಷಿಗಳು ಕಂಡುಕೊಂಡು, ಜ್ಯೋತಿಷದ ಒಂದು ಮುಖ್ಯ ಅಂಗವಾದ ಮುಹೂರ್ತ ಶಾಸ್ತ್ರದಲ್ಲಿ ವಿಸ್ತಾರವಾಗಿ ವಿಪುಲವಾಗಿ ಸೂತ್ರಗಳ ರೂಪದಲ್ಲಿ ಈ ಅಂಶವನ್ನು ಒದಗಿಸಿಕೊಟ್ಟಿದ್ದಾರೆ. ಕಾಲವೇ ಎಲ್ಲಕ್ಕೂ ಸಾರ–ಎಲ್ಲದರ ಸೃಷ್ಟಾರ, ರಕ್ಷಕ, ವಿಧ್ವಂಸಕ. ಯಾವ ಪ್ರಕೃತಿನಿಯಮದ ಅನುಸಾರ ವರ್ಷವು ಋತುಗಳಾಗಿ ವಿಂಗಡವಾಗಿವೆಯೋ, ಆ ನಿಯತಿಯು ಸೂರ್ಯನ ಅಯನಗಳ ವಿಂಗಡನೆಯಲ್ಲಿ ವ್ಯಕ್ತಪಡುತ್ತವೆ. ಬಿತ್ತನೆ ಸಾಗುವಳಿ, ಸುಗ್ಗಿ, ಪರಿಪಕ್ವತೆ, ಕ್ಷೀಣತೆ ಇವು ಈ ಚಟುವಟಿಕೆಗಳ ಎಲ್ಲ ಒಳವಿಭಾಗಗಳಿಗೂ ಸಾಮಾನ್ಯವಾಗಿರುವ ಅವಧಿ ಲಕ್ಷಣಗಳು. ಕಾಲಕ್ಕೆ ವಿಶಿಷ್ಟವಾದ

* "ಜ್ಯೋತಿಷ ಮತ್ತು ಆಧುನಿಕ ವಿಜ್ಞಾನ" ಎಂಬುದನ್ನು ಕುರಿತು ಓ.ಬಿ.ವಿಜಯಮುನಿ ಅವರು "ದಿ ಅಸ್ಟ್ರಾಲಜಿಕಲ್ ಮ್ಯಾಗಜೈನ್" (1946ನೇ ಜನವರಿ) ನಲ್ಲಿ ಬರೆದಿರುವ ಲೇಖನ.

ಲಕ್ಷಣಾಗಳಿವೆ. ಕಾಲದ ಪ್ರಥಮ ಸತ್ವ ಎಂದರೆ ನಾಕ್ಷತ್ರಿಕ ಚಲನದಿಂದ ಉಂಟಾಗುವ ಚೈತನ್ಯ. ಅದು ಪ್ರಕೃತಿ ಗೋಲಾಕಾರವಾದಾಗ ಪರಿಣಾಮಕಾರಿ ರೂಪ ತಾಳುತ್ತದೆ. ಪ್ರಕೃತಿಗೆ ಅಗೋಚರವಾದಾಗ ಅದರದು ಸ್ಥಿತ ಶಕ್ತಿ ರೂಪ. ಆದಕಾರಣ , ಜ್ಯೋತಿಷದಲ್ಲಿ ಕಾಲವು ಮೂಲಭೂತವಾದ ಕ್ರಿಯಾ ಸತ್ವ. ಇದು ಮುಹೂರ್ತ ಶಾಸ್ತ್ರದಲ್ಲಿ ವಿಶೇಷತಃ ಅನ್ವಯವಾಗುತ್ತದೆ. ಏಕೆಂದರೆ, ಯಾವ ಉದ್ದೇಶಕ್ಕಾಗಿ ಮುಹೂರ್ತವನ್ನು ನಿಷ್ಕರ್ಷಿಸಲಾಗುತ್ತದೆಯೋ ಆ ಅವಧಿಯಲ್ಲಿ ಎಲ್ಲಾ ಸತ್ವಭಾವಗಳೂ ಸಾಂದ್ರೀಕೃತವಾಗಿ ದುಷ್ಪ್ರಭಾವಗಳನ್ನು ನಿವಾರಿಸಿ, ಹಿಡಿದ ಕಾರ್ಯವು ಯಶಸ್ವಿಯಾಗುವಂತೆ ಖಚಿತಪಡಿಸಬೇಕಾಗುತ್ತದೆ.

ಮುಹೂರ್ತ ಎಂದರೇನು? ಅದು ಜ್ಯೋತಿಷದ ಜಾತಕ ವಿಭಾಗಕ್ಕಿಂತ ಎಷ್ಟು ಶ್ರೇಷ್ಠ ? ಈ ಅಧ್ಯಾಯದಲ್ಲಿ ಈ ಮುಖ್ಯ ಪ್ರಶ್ನೆಗಳಿಗೆ ಉತ್ತರ ಕೊಡಲು ಪ್ರಯತ್ನಿಸುತ್ತೇನೆ. ಜಾತಕ ಎಂದರೆ ಪೂರ್ವ ಜನ್ಮಗಳ ಕರ್ಮಫಲವನ್ನು ಸೂಚಿಸುವಂಥ ಜನ್ಮಕಾಲದ ಗ್ರಹಗಳ ಪರಿಸ್ಥಿತಿಯ ನಕ್ಷೆ. ಅಂದರೆ ವ್ಯಕ್ತಿಯು ಪಡೆದುಕೊಂಡು ಬಂದಿರುವ ದೈಹಿಕ, ಮಾನಸಿಕ, ಭೌತಿಕ ಪೂರ್ವಾರ್ಜಿನವನ್ನು ಕುರಿತದ್ದು. ಅಂದರೆ ಗ್ರಹಗಳ ಸ್ಥಿತಿಗತಿಗಳ ಚಿಹ್ನೆಗಳನ್ನು ಒಳಗೊಂಡ ಪಾರಿಭಾಷಿಕ ಬರವಣಿಗೆಯ ತತ್ವವೊಂದನ್ನು ನಾವು ಜಾತಕದಲ್ಲಿ ಓದುತ್ತೇವೆ, ಅಷ್ಟೆ. ಮುಹೂರ್ತವಾದರೋ ಹೆಚ್ಚು ಪ್ರಾಮುಖ್ಯವುಳ್ಳದ್ದು. ಜಾತಕನ ಕುಂಡಲಿಯು ಸೂಚಿಸುವ ಕೆಡಕುಗಳನ್ನು ನಿವಾರಿಸುವ, ನಿಷ್ಕ್ರಿಯಗೊಳಿಸುವ, ವಿರೋಧಿಸುವ ಅಥವಾ ಜಯಿಸುವ ಅಮೂಲ್ಯ ಮಾರ್ಗೋಪಾಯಗಳನ್ನು ಅದು ಸೂಚಿಸುತ್ತದೆ. ಜಾತಕವು ನಿರೂಪಣೆಯ ಭಾಗ. ಇರುವ ಕೆಡಕುಗಳನ್ನು ಅದು ಸೂಚಿಸುತ್ತದೆ ಮಾತ್ರ, ನಿವಾರಣೆಗಳನ್ನು ಸೂಚಿಸುವುದಿಲ್ಲ. ಮುಹೂರ್ತವಾದರೋ ನಿರೂಪಕವೂ ಹೌದು, ನಿವಾರಕವೂ ಹೌದು. ಯಾವ ಶುಭವಾದ ವೇಳೆಯಲ್ಲಿ ಕಾರ್ಯ ಕೈಗೊಂಡರೆ ಅದು ನಿರ್ವಿಘ್ನವಾಗಿ ಕೈಗೂಡುತ್ತದೆ ಎಂಬುದನ್ನು ತಿಳಿಸುತ್ತದೆ. ಉದಾಹರಣೆಗೆ, ಜಾತಕನಿಗೆ ವಿದ್ಯಾಭಂಗದ ಸೂಚನೆಗಳಿವೆ ಎನ್ನಿ : ಅಂದರೆ ಲಗ್ನದಿಂದ ನಾಲ್ಕನೇ ಮನೆಯಲ್ಲಿ ಅಶುಭ ಗ್ರಹಗಳು, ವಿದ್ಯಾಕಾರಕ ಗುರು ಮತ್ತು ಬುದ್ಧಿಕಾರಕ ಬುಧ ಇವರಿಗೆ ಊಹೆ ಕಾಣುತ್ತದೆ ಅನ್ನೋಣ. ಈ ಜಾತಕ ಪರಿಸ್ಥಿತಿಯು ವ್ಯಕ್ತಿಗೆ ಪೂರ್ವಕರ್ಮದ ಫಲವಾಗಿ ಶಿಕ್ಷಣ ಭಂಗವಾಗುವುದನ್ನು ಸೂಚಿಸುತ್ತವೆ. ಮುಹೂರ್ತ ಶಾಸ್ತ್ರ ಏನು ಹೇಳುತ್ತದೆ ಅಂದರೆ ಅಕ್ಷರಾಭ್ಯಾಸಕ್ಕೆ ಒಳ್ಳೆಯ ಮುಹೂರ್ತವನ್ನು ಆರಿಸಿಕೊಳ್ಳುವುದರಿಂದ ಜನ್ಮಕಾಲದ ಗ್ರಹಲಕ್ಷಣಗಳು ಸೂಚಿಸುವಂತೆ ವಿದ್ಯಾಭ್ಯಾಸಕ್ಕೆ ಒದಗಿಬರಬಹುದಾದ ತೊಡಕುಗಳನ್ನು ಸಾಧ್ಯವಾದಷ್ಟು ಕಡಿಮೆ ಮಾಡಿಕೊಳ್ಳಬಹುದು.

ಏದಸೇ ಮನೆಯಲ್ಲಿ ಪಾಪಗ್ರಹಗಳಿದ್ದು ಮಕ್ಕಳಿಗೆ ಉಳಿಗಾಲವಿಲ್ಲವೆಂದು ಸೂಚಿಸುತ್ತವೆ ಅನ್ನಿ. ಅಂಥ ಸಂದರ್ಭದಲ್ಲಿ ಮುಹೂರ್ತ ಶಾಸ್ತ್ರವು ಜಾತಕನ ನೆರವಿಗೆ ಬಂದು, ಒಳ್ಳೆಯ ಮುಹೂರ್ತದಲ್ಲಿ ಮದುವೆಯಾಗುವುದರಿಂದ, ಆ ವೇಳೆಯಲ್ಲಿ ಗ್ರಹಗಳಿಂದ ಹೊರಬರುವ ಪ್ರಭಾವ ಶಕ್ತಿಗಳು ಪ್ರಬಲವಾಗಿದ್ದು ದೋಷ ನಿವಾರಣ ಮಾಡಬಹುದು ಅಥವಾ ದೋಷದ ಪ್ರಾಬಲ್ಯವನ್ನು ಕುಗ್ಗಿಸಿ, ಕಡೆಯ ಪಕ್ಷ ಕೆಲವು ಮಕ್ಕಳಾದರೂ ಹುಟ್ಟಿ ಬದುಕುವಂತೆ ಮಾಡಬಹುದು. ಈ ರೀತಿ ಮುಹೂರ್ತ ಶಾಸ್ತ್ರವು ಪೂರ್ವಕರ್ಮದ ಕೆಡುಕನ್ನು ಸಾಕಷ್ಟು ಕಡಿಮೆ ಮಾಡಲೋ ಮಾರ್ಪಡಿಸಲೋ ನೆರವಾಗುತ್ತದೆ. ಮುಹೂರ್ತ ಶಾಸ್ತ್ರವು ಎಲ್ಲ ಸುಖ ಸೌಭಾಗ್ಯಗಳಿಗೂ ನಾಯಕ ಕೀಲಿ ಎಂದು ಭಾವಿಸಕೂಡದೆಂದು ವಾಚಕರಿಗೆ ಎಚ್ಚರ ನೀಡಬೇಕಾಗಿದೆ. ವೈಫಲ್ಯವನ್ನು ನಿವಾರಿಸಿಕೊಳ್ಳಬೇಕಾದರೆ ಕೆಲಸವನ್ನು ಯಾವ ಸಕಾಲದಲ್ಲಿ ಕೈಕೊಳ್ಳಬೇಕು ಎಂದು ಮುಹೂರ್ತ ಹೇಳುತ್ತದೆ.

ನಾವು ಸೃಷ್ಟಿ, ಸ್ಥಿತಿ, ಲಯ ಶಕ್ತಿಗಳು ಕಾಲಗರ್ಭದಲ್ಲಿ ಅಡಗಿವೆ ಎಂದು ಮೇಲೆ ಹೇಳಿದ್ದೇವಷ್ಟೆ. ಸೂರ್ಯನೂ ಗ್ರಹಗಳೂ ಕಾಲದ ರುಜುಗಳು ಇದ್ದಂತೆ. ಎಲ್ಲ ಶಕ್ತಿ ಎಲ್ಲ ಚೈತನ್ಯಗಳಿಗೂ ಸೂರ್ಯನೇ ಮೂಲವಾದುದರಿಂದಲೂ, ಗ್ರಹಗಳ ಚಲನವಲನಗಳು ಸರ್ವಥಾ ವಿಸರಣಗಳೇ ಆಗಿದ್ದು ಈ ಸೃಷ್ಟಿಕಾರಕ, ಲಯಕಾರಕ ಶಕ್ತಿಗಳು ಯಾವಾಗ ಹೊರಬರುತ್ತವೆ ಎಂಬುದನ್ನು ಸೂಚಿಸುತ್ತವೆ.

ದಿನನಿತ್ಯದ ಒಂದು ಉದಾಹರಣೆ: ಒಂದೇ ದಿವಸದ ಅವಧಿಯಲ್ಲಿ ಸೂರ್ಯ ಪ್ರಭಾವವು ಏಕಪ್ರಕಾರವಾಗಿರುತ್ತದೆ ಎಂದು ಯಾರೂ ಹೇಳಲಾರರು. ಪ್ರಾತಃ ಕಾಲದ ಸೂರ್ಯ, ಮಧ್ಯಾಹ್ನದ ಸೂರ್ಯ, ಸಾಯಂಕಾಲದ ಸೂರ್ಯ, ಮಧ್ಯರಾತ್ರಿ ಸೂರ್ಯ ಶಾಖಃ ಮುಂತಾದ ಅಂದರೆ ಬೆಳಕು, ಕಾಂತತ್ವ, ವಿದ್ಯುತ್ ಶಕ್ತಿ ಮುಂತಾದ ಲಕ್ಷಣಗಳೆಲ್ಲ ಒಂದೇ ಬಗೆಯಾಗಿರುವುದಿಲ್ಲ. ಒಮ್ಮೆ ವ್ಯಕ್ತಿ ವನ ಭೋಜನವನ್ನು ಏರ್ಪಡಿಸುತ್ತಾನೆ ಎಂದು ಇಟ್ಟುಕೊಳ್ಳೋಣ. ನಾವು ಅವನಿಗೆ ಬೆಳಗ್ಗೆ ಅಥವಾ ಸಂಜೆ ಸೂರ್ಯ ತಂಪಾಗಿರುವಾಗ ಇಟ್ಟುಕೋ ಎಂದು ಹೇಳುತ್ತೇವೆ. ಸುಖಾನುಭವಕ್ಕೆ ಮಧ್ಯಾಹ್ನ ತಕ್ಕುದಲ್ಲ ಎಂದು ತಿರಸ್ಕರಿಸುವಂತೆ ನಾವು ಹೇಳಿದಂತಾಯಿತು. ಈ ಸಂದರ್ಭದಲ್ಲಿ ದೈಹಿಕವಾದ ಪರಿಣಾಮಗಳನ್ನು ಕಾರಣವಾಗಿ ನಾವು ತೋರಿಸಿಕೊಡಬಹುದು. ಇದೇ ರೀತಿಯಾಗಿ, ಒಬ್ಬ ಸಂತೋಷ ಸಮಾರಂಭವನ್ನು ಇಟ್ಟುಕೊಳ್ಳಲು ಅಪೇಕ್ಷಿಸುತ್ತಾನೆ. ನಾವು ಅವನಿಗೆ ಯುಕ್ತವಾದ ವೇಳೆಯಲ್ಲಿ ಅದನ್ನು ಇಟ್ಟುಕೊಳ್ಳೆಂದೂ, ಅದು ಮಳೆಗಾಲವಾದರೂ ಆಗ ಮಳೆಯು ಬರುವ ಸಂಭವವಿಲ್ಲವೆಂದೂ ಸೂಚಿಸುತ್ತೇವೆ. ಇದೇ ತರ್ಕ ನಿರೂಪಣೆಯ

ಮೇರೆಗೆ ನಮ್ಮ ವಿವಿಧ ಕಾರ್ಯಕಲಾಪಗಳಿಗೆ ಶುಭ ವೇಳೆಯನ್ನು ಆರಿಸಿಕೊಳ್ಳಬೇಕೆಂಬ ಭಾವನೆಯು ನಮಗೆ ವಿಹಿತವೆನಿಸಿತು. ಬಿತ್ತನೆಗೆ ಒಂದು ಕಾಲವಿದೆ, ಸುಗ್ಗಿಗೆ ಒಂದು ಕಾಲವಿದೆ. ನಾವೇಕೆ ಬಿತ್ತನೆ ಕೆಲಸವನ್ನು ಸುಗ್ಗಿಯ ಕಾಲದಲ್ಲಿ ಮಾಡಕೂಡದು ? ಹಾಗೆ ಮಾಡಿದರೆ ಪ್ರಕೃತಿಯು ನಮಗೆ ವಿರುದ್ಧವಾಗುತ್ತದೆ. ಇದನ್ನು ಸೂರ್ಯನ ಸ್ಥಿತಿಯು ತೋರಿಸುತ್ತದೆ. ಬಿತ್ತನೆ ಕಾಲದಲ್ಲಿ ಸೃಷ್ಟಿ ಶಕ್ತಿಗಳು ಪ್ರಸಕ್ತವಾಗಿರುತ್ತವೆ. ಯಾವುದೇ ಮುಖ್ಯ ಕಾರ್ಯವನ್ನು ಕೈಗೊಂಡಾಗ ವಿಧ್ವಂಸಕ ಶಕ್ತಿಗಳನ್ನು ನಿವಾರಿಸಿಕೊಳ್ಳಬೇಕು. ಎಲ್ಲ ಗ್ರಹಗಳೂ ಸತತವಾಗಿ ಚಲಿಸುತ್ತ ನಾನಾ ರೀತಿಯ ಶಕ್ತಿಗಳನ್ನು ಬಿಡುಗಡೆ ಮಾಡುತ್ತವೆ. ಭವ್ಯವಾದ ಸೃಷ್ಟಿ, ಶಕ್ತಿಗಳು ಪ್ರಕೃತಿಯಲ್ಲಿ ಕೆಲಸ ಮಾಡುತ್ತಿರುವಾಗ ಅವುಗಳ ಪೂರ್ಣ ಪ್ರಯೋಜನವನ್ನು ಪಡೆದುಕೊಂಡು ಜಯಪ್ರದರಾಗುವಂತೆ ಹೇಗೆ ನಡೆದುಕೊಳ್ಳತಕ್ಕದ್ದು ಎಂಬುದನ್ನು ಕುರಿತು ನಮ್ಮ ಮಹರ್ಷಿಗಳು ನಮಗೆ ಸುಳಿವುಗಳನ್ನು ಕೊಟ್ಟು ಹೋಗಿದ್ದಾರೆ.

ಪ್ರಾಣಿಗಳೂ ಪ್ರಕೃತಿಯೊಡನೆ ಹೊಂದಿಕೊಂಡು ಸುಗಮವಾಗಿ ನಡೆದುಕೊಳ್ಳಬೇಕೆಂದು ತಾವೇ ತಾವಾಗಿ ತಿಳಿದುಕೊಳ್ಳುತ್ತವೆ. ಉದಾಹರಣೆಗೆ ಫಿಜಿ ದ್ವೀಪಗಳ ಸುತ್ತ ಮುತ್ತ ಸಮುದ್ರದಲ್ಲಿರುವ ಪಲೋಮೋ ಎಂಬ ಕ್ರಿಮಿಯು ಸೂರ್ಯ ಚಂದ್ರನ ಚಲನದ ಆವೃತ್ತಗಳಿಗೆ ತಕ್ಕಂತೆ ವಿಶಿಷ್ಟವಾದ ರೀತಿಯಲ್ಲಿ ನಡೆದುಕೊಳ್ಳುತ್ತವೆ. ಈ ಕ್ರಿಮಿ ತನ್ನ ಬದುಕಿನ ಬಹುಭಾಗ ಸಮುದ್ರದಾಳದಲ್ಲಿ ಹವಳದ ಬಂಡೆಗಳ ನಡುವೆ ಇರುತ್ತದೆ. ನವಂಬರ್ ಹೊತ್ತಿಗೆ ಅದರ ಹಿಂಭಾಗವು ಮೊಟ್ಟೆಗಳಿಂದ ತುಂಬಿ ಉಬ್ಬಿಕೊಳ್ಳುತ್ತದೆ. ನವಂಬರ್ ತಿಂಗಳ ಹುಣ್ಣಿಮೆ ಕಳೆದು ಒಂದು ವಾರಕ್ಕೆ ಸರಿಯಾಗಿ ಬೆಳ್ಳಗಾಗುತ್ತದೆ. ಈ ಕ್ರಿಮಿಯ ಹಿಂಭಾಗವು ಕ್ರಿಮಿಯ ಮೈಯಿಂದ ಪ್ರತ್ಯೇಕಗೊಂಡು ಜನನ ಕ್ರಿಯೆ ನಡೆಸುವ ವ್ಯಕ್ತಿಯಾಗಿ ನೀರಿನ ಮೇಲು ಭಾಗವನ್ನು ಸೇರುತ್ತದೆ ಮತ್ತು ತನ್ನಲ್ಲಿರುವ ತತ್ತಿಗಳನ್ನು ಹೊರಚಲ್ಲುತ್ತ ಸಿಡಿದೊಡೆದು ಸಾಯುತ್ತದೆ. ಆದ ಕಾರಣ ಈ ಕ್ರಿಮಿಗೆ ಚಂದ್ರನ ಪ್ರಭಾವಗಳ ಅರಿವು ಒಂದಲ್ಲೊಂದು ರೀತಿಯಲ್ಲಿ ಉಂಟಾಗುತ್ತದೆ ಮತ್ತು ಗ್ರಹಗತಿಗಳು ಯಥಾನುಕೂಲವಾಗಿರುವಾಗ ತನ್ನ ತತ್ತಿಗಳನ್ನು ಹೊರಚೆಲ್ಲಬೇಕೆಂದೂ ತಿಳಿಯುತ್ತದೆ. ಹೀಗಿರುವಾಗ, ಮನುಷ್ಯ ವ್ಯಕ್ತಿಗೆ ತನ್ನ ಮೇಲ್ಮೆಗೆ ಸಾಧಕವೂ ಮಾರಕವೂ ಆದ ಶಕ್ತಿಗಳಾವುವು ಎಂಬ ಅರಿವೂ ಯಾವ ಶುಭ ಮುಹೂರ್ತವನ್ನು ಆರಿಸಿಕೊಳ್ಳಬೇಕೆಂದೂ ಅರಿವು ವಿಶೇಷವಾಗಿರುವುದರಿಂದ ಪ್ರಕೃತಿಯಲ್ಲಿ ಪ್ರವಹಿಸುವ ಸೃಷ್ಟಿ, ಶಕ್ತಿಗಳ ಪ್ರಯೋಜನವನ್ನು ಪಡೆದುಕೊಳ್ಳಬಹುದಾಗಿದೆ.

ಪ್ರತಿ ಕ್ಷಣಕ್ಕೂ ಒಂದು ಸ್ವಕೀಯವಾದ ಸಾಮರ್ಥ್ಯವಿದೆ. ಕಾರ್ಲ್ ಯೂಂಗ್ ಎಂಬ ಆಸ್ಟ್ರಿಯದ ಮನೋವಿಜ್ಞಾನಿಯು ಹೇಳುವಂತೆ, "ಒಂದು ಕ್ಷಣದಲ್ಲಿ ಹುಟ್ಟಿದ ಅಥವಾ ನಡೆದ ಯಾವುದಕ್ಕಾದರೂ ಆ ವೇಳೆಯ ಲಕ್ಷಣಗಳುಂಟಾಗುತ್ತವೆ." ಆದ ಕಾರಣ, ಜನನದ ವೇಳೆಯಾಗಲಿ ಯಃಕಶ್ಚಿತ್ ಆದ ಸಮಯವಲ್ಲ. ಆ ವೇಳೆಯಲ್ಲಿ ಹೊರ ವಿಶ್ವದಿಂದ ಬಂದು ಸುರಿಯುವ ವಿಶ್ವವಿಸರಣಗಳೂ ಗ್ರಹ ನಕ್ಷತ್ರಗಳಿಂದ ಹೊರಹೊಮ್ಮುವ ಶಕ್ತಿ ಪ್ರಭಾವಗಳೂ ನಮ್ಮ ಮಿದುಳಿನ ಕೋಶಗಳ ಮೇಲೆ ಪ್ರಭಾವ ಬೀರುತ್ತವೆ ಮತ್ತು ಈ ವಿಶ್ವಕಿರಣಗಳನ್ನು ಚೈತನ್ಯಯುಕ್ತವಾದ ವಿದ್ಯುತ್ ಶಕ್ತಿಯನ್ನಾಗಿ ಮಾರ್ಪಡಿಸುತ್ತವೆ. ನಾವು ಕೈಗೊಳ್ಳುವ ಎಲ್ಲ ಉಪಕ್ರಮಗಳಲ್ಲೂ ನಮ್ಮ ನುಡಿ, ನಮ್ಮ ನಡೆ, ನಮ್ಮ ವಿಚಾರಗಳು ಮತ್ತು ನಮ್ಮ ಕಾರ್ಯವಿಧಾನಗಳು ಅಗೋಚರವಾದ ಶಕ್ತಿಗಳನ್ನು ಪ್ರವಹಿಸುವುವಂತೆ ಮಾಡುತ್ತವೆ. ಅಗೋಚರ ಶಕ್ತಿಗಳನ್ನು ವಿದ್ಯುತ್ ಎಂದಾಗಲಿ, ಅಪಾರ್ಥಿವ ಶಕ್ತಿ ಎಂದಾಗಲಿ, ವಿದ್ಯುತ್ – ಕಾಂತಶಕ್ತಿ ಎಂದಾಗಲಿ, ಅಥವಾ ವಿಶ್ವ ವಿಕರಣವೆಂದಾಗಲಿ ಹೇಗಾದರೂ ಕರೆಯಬಹುದು. ಮನುಷ್ಯನೇ ವಿವಿಧ ರೀತಿಯ ವಿದ್ಯುತ್ ಸಾಮರ್ಥ್ಯಗಳನ್ನು ತನ್ನ ದೇಹದಿಂದ ಹೊರಗೆಡಹುತ್ತಾನೆ. ಆದಕಾರಣ ಅವನ ಜಯಾಪಜಯಗಳು ತನಗೂ ತಾನೂ ದಿನವಹೀ ನಡವಳಿಕೆಗಳಲ್ಲಿ ಯಾವ ವಸ್ತು, ವ್ಯಕ್ತಿಗಳ ಸಂಗಡ ವ್ಯವಹರಿಸುತ್ತಾನೋ ಅವುಗಳಿಗೂ ನಡುವೆ ಒದಗುವ ಆಕರ್ಷಣೆ ಅಪಕರ್ಷಣೆಗಳಾಗಿ ಮಾತ್ರ ಇರುತ್ತವೆ.

ಆದ ಕಾರಣ ಮುಹೂರ್ತವನ್ನು ಹೀಗೆ ಸ್ಪಷ್ಟೀಕರಿಸಬಹುದು. ಅದೊಂದು ಶ್ರೇಷ್ಠವಾದ ವೇಳೆ. ಆ ವೇಳೆಯು ಮನುಷ್ಯನು ವಿಕಿರಣಗೊಳಿಸುವ ಕಂಪನಗಳನ್ನು ಗ್ರಹ ನಕ್ಷತ್ರಗಳಿಂದ ಹೊರಸೂಸುವ ಅದೇ ಬಗೆಯ ವಿಕಿರಣವೇ ಅದಕ್ಕನುಗುಣವಾಗಿ ಅನುರಣನಗೊಳ್ಳುವಂತೆ ತಕ್ಕ ವಿಶಿಷ್ಟ ತರಂಗಾಂತರಕ್ಕೆ ಮಾರ್ಪಡಿಸುತ್ತದೆ.

# ಸಾಮಾನ್ಯ ಸೂಚನೆಗಳು

ಶುಭ ಮುಹೂರ್ತಗಳನ್ನು ನಿಷ್ಕರ್ಷಿಸುವುದರಲ್ಲಿ ಚಂದ್ರನ ಪಾತ್ರಕ್ಕೆ ಭಾರತೀಯ ಜ್ಯೋತಿಷದಲ್ಲಿ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಚಂದ್ರನು ಮನಸ್ಸನ್ನು ಆಳುತ್ತಾನೆ. ನಮ್ಮೆಲ್ಲ ಮನೋ ವ್ಯಾಪಾರಗಳನ್ನೂ ಆಳುತ್ತಾನೆ. ಮುಹೂರ್ತದ ಕುಂಡಲಿಯಲ್ಲಿ ಅವನ ಸ್ಥಿತಿಯು ಘನವತ್ತಾಗಿರಬೇಕು. ಅಷ್ಟೇ ಅಲ್ಲದೆ, ಯಾವುದೇ ಮುಹೂರ್ತವನ್ನು ನಿಷ್ಕರ್ಷಿಸುವುದಕ್ಕಾಗಲಿ ಜನ್ಮ ಕುಂಡಲಿಗೆ ಅದು ಅನುಗುಣವಾಗಿ ಹೊಂದಿಕೊಳ್ಳುವಂತೆ ಏರ್ಪಡಿಸಬೇಕು. ಜನ್ಮ ಕುಂಡಲಿಯಲ್ಲಿ ಪ್ರಬಲವಾದ ಪೀಡೆಗಳಿದ್ದರೆ, ಎಂಥ ಮೂಹೂರ್ತವನ್ನು ಗೊತ್ತುಪಡಿಸಿದರೂ ಅದು ಜಯಪ್ರದವಾಗಲಾರದು. ವಾಸ್ತವವಾಗಿ, ಜನ್ಮ ಕುಂಡಲಿಯು ತನ್ನ ಪ್ರಾಬಲ್ಯದಿಂದ ಶುಭ ಮುಹೂರ್ತದ ಪ್ರಯೋಜನವನ್ನು ಪಡೆದುಕೊಳ್ಳುವುದಕ್ಕೂ ಆಗದಂತೆ ನಿವಾರಿಸಬಹುದು. ಉತ್ತಮ ಪಕ್ಷವೆಂದರೆ, ಅಪಜಯದ ಸಂಭವಗಳನ್ನು ಕೊಂಚ ಕಡಿಮೆ ಮಾಡಬಹುದು. ಆದಕಾರಣ ನಾವು ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ, ಮುಹೂರ್ತ ಕುಂಡಲಿಯಲ್ಲಿ ಕಾಣುವ ಜಯ ಸೂಚನೆಗಳನ್ನು ನಿವಾರಿಸುವಷ್ಟು ಜನ್ಮ ಕುಂಡಲಿಯ ಪೀಡೆಗಳು ಪ್ರಬಲವಾಗಿವೆಯೇ ಎಂಬುದನ್ನು ನಾವು ಪರಿಶೀಲಿಸಬೇಕು. ಜನ್ಮ ಕುಂಡಲಿಯಿಲ್ಲದವರ ನಾಮ ನಕ್ಷತ್ರವನ್ನು (ಪುಸ್ತಕದ ಕಡೆಯಲ್ಲಿ ಕೊಟ್ಟಿರುವ ಪರಿಶಿಷ್ಟವನ್ನು ನೋಡಿ) ಗೊತ್ತುಪಡಿಸಿಕೊಂಡು ಆ ವೇಳೆಯಲ್ಲಿ ಸಲ್ಲುವ ಗೋಚಾರ ಪ್ರಭಾವಗಳನ್ನು ಪರಿಶೀಲಿಸತಕ್ಕದ್ದು. ಜನ್ಮ ಕುಂಡಲಿಯು ಪ್ರಬಲವಾಗಿರಲಿ ಇಲ್ಲದಿರಲಿ, ಒಂದೂ ಜ್ಯೋತಿಷವು ಗಟ್ಟಿಪಡಿಸಿಕೊಡುವ ಸಂಗತಿ ಒಂದಿದೆ. ಅದೇನೆಂದರೆ ಜನ್ಮತಾರೆ (ಜನನ ಕಾಲದಲ್ಲಿ ಚಂದ್ರನಿರುವ ನಕ್ಷತ್ರ)ಗೂ ನಾಮತಾರೆಗೂ ಸಂಬಂಧವಿದ್ದೇ ಇರುತ್ತದೆ.

ಜನ್ಮ ಕುಂಡಲಿಯ ಮೇರೆಗೆ ನಡೆಯುತ್ತಿರುವ ದಶಾಭುಕ್ತಿಗಳ ಶುಭಾಶುಭ ಲಕ್ಷಣಗಳು ಮುಹೂರ್ತ ಕುಂಡಲಿಯನ್ನು ಪ್ರಭಾವಿಸುತ್ತವೆ. ಎಂಬಷ್ಟನ್ನು

ಮನಸ್ಸಿನಲ್ಲಿಟ್ಟುಕೊಂಡಿದ್ದರೆ ಸಾಕು. ಅದನ್ನು ಸವಿಸ್ತಾರವಾಗಿ ವಿವೇಚಿಸಬೇಕಾಗಿರುವುದಿಲ್ಲ. ಜನ್ಮ ಪ್ರಭಾವಗಳಿಂದ ಪ್ರತ್ಯೇಕವಾಗಿ ಮುಹೂರ್ತ ಕುಂಡಲಿಯನ್ನು ಫಲದಾಯಕವಾಗುವುವಂತೆ ಮಾಡಬಲ್ಲ ಕೆಲವು ಯೋಗಗಳನ್ನು ಪ್ರಾಚೀನ ಶಾಸ್ತ್ರಗಳಲ್ಲಿ ಹೇಳಿದೆ. ಇವುಗಳ ವಿವರಗಳನ್ನು ಯಥೋಚಿತವಾಗಿ ಮುಂದೆ ವಿವರಿಸುತ್ತೇನೆ.

ಮುಹೂರ್ತದ ವಿಷಯವನ್ನು ಎತ್ತಿಕೊಳ್ಳುವುದಕ್ಕೆ ಮುಂಚೆ, ಭಾರತೀಯರ ಪಂಚಾಂಗದ ವಿಶದೀಕರಣ ಕೊಂಚ ಅಗತ್ಯ. ಏಕೆಂದರೆ ಮುಹೂರ್ತವನ್ನು ಗೊತ್ತುಪಡಿಸುವುದಕ್ಕೆ ಅವಶ್ಯಕವಾದ ಅಂಶಗಳೆಲ್ಲ ಪಂಚಾಂಗದಲ್ಲಿ ಅಡಕವಾಗಿರುತ್ತವೆ. ಪಂಚಾಂಗ ಎಂದರೆ ಐದು ಅಂಶಗಳು ಅಥವಾ ಅಂಶಗಳು ಅಂದರೆ ತಿಥಿ, ವಾರ, ನಕ್ಷತ್ರ, ಯೋಗ (ಸೌರ–ಚಾಂದ್ರಮಾನದಿವಸ) ಮತ್ತು ಕರಣ (ಚಾಂದ್ರಮಾನ ತಿಥಿಯ ಅರ್ಧ). ಈ ಪಾರಿಭಾಷಿಕಗಳನ್ನು ವಾಚಕರು ತಿಳಿದುಕೊಳ್ಳಬೇಕಾದರೂ ಇವುಗಳ ಪೈಕಿ ಮುಖ್ಯವಾದವು ತಿಥಿ, ವಾರ, ನಕ್ಷತ್ರ. ಪಂಚಾಂಗವೆಂದರೆ ಐದು ಅಂಶಗಳೆಂದು ಹೇಳಿದೆನಷ್ಟೆ. ಇವು ಐದೂ ಬಗೆಯ ಗೋಚರಾಗೋಚರವಾದ ಅಪಾರ್ಥಿವ ಶಕ್ತಿಗಳ ಮೂಲಗಳನ್ನು ಪ್ರತಿನಿಧಿಸುತ್ತವೆ. ಈ ಶಕ್ತಿಗಳನ್ನು ಯಥಾವತ್ತಾಗಿ ಉಪಯೋಗಿಸಿಕೊಂಡರೆ ಅವು ಮಾನವ ಕುಲದ ಆರೋಗ್ಯ ಐಶ್ವರ್ಯ ಸೌಭಾಗ್ಯಗಳನ್ನು ವೃದ್ಧಿಪಡಿಸುತ್ತವೆ ಎನ್ನುತ್ತಾರೆ.

***ತಿಥಿ*** : ಸೂರ್ಯ ಚಂದ್ರರ ಪರಸ್ಪರ ಸ್ಫುಟದ ಅಂತರದಲ್ಲಿ ವೃದ್ಧ್ಯಂಶದ ವ್ಯತ್ಯಾಸವು $12^0$ ಗಳಷ್ಟಾಗುವ ಕಾಲ ಪ್ರಮಾಣವೇ ಒಂದು ತಿಥಿ. ತಿಥಿಯು ಹಿಂದೂಗಳ ವ್ಯವಹಾರಕ್ಕೆ ಅತ್ಯಂತ ಪ್ರಾಮುಖ್ಯವುಳ್ಳದ್ದು. ಏಕೆಂದರೆ ತಿಥಿಯ ಮೇರೆಗೆ ಅವರ ಹಲವಾರು ಧಾರ್ಮಿಕ ಆಚರಣೆಗಳನ್ನು ನಿಷ್ಕರ್ಷಿಸಲಾಗುತ್ತದೆ ಮತ್ತು ಮುಹೂರ್ತ ನಿಷ್ಕರ್ಷೆಗೂ ತಿಥಿಯೂ ಮುಖ್ಯವಾದ ಪರಿಗಣನೆ. ಅಂದರೆ ತಿಥಿಯು ಚಾಂದ್ರಶಕ್ತಿಯನ್ನು ಪ್ರತಿನಿಧಿಸುತ್ತದೆ ಮತ್ತು ಚಾಂದ್ರಶಕ್ತಿಯು ಮಾನಸಿಕ ಶಕ್ತಿಗೆ ಸಮಾನವೆನಿಸಿದೆ. ಆದಕಾರಣ ಚಂದ್ರನ ಯಾವ ಚಲನವಲನಗಳು ತಿಥಿ ಎನಿಸುತ್ತವೆಯೋ ಅವುಗಳ ಸೂಕ್ಷ್ಮ ಪರಿಜ್ಞಾನವು ನಮಗೆ ಸಂವತ್ಸಾಧಕ ಎನ್ನುತ್ತಾರೆ.

ಪ್ರತಿ ತಿಥಿಯೂ (ಪಟ್ಟಿಯನ್ನು ನೋಡಿ) ಅರ್ಥಾತ್ ಪ್ರತಿ ಚಾಂದ್ರ ದಿವಸವು ಸೌರ ದಿವಸಾವಧಿಯ 0.9483 ಕ್ಕೆ ಸಮ. ಇದರಿಂದ ಚಾಂದ್ರಮಾಸವು 29-53 ದಿವಸಗಳಷ್ಟಾಗುತ್ತದೆ. ತಿಥಿಯು ಮುಗಿಯುವ ವೇಳೆ ಅಂದರೆ ಸೂರ್ಯನಿಂದ ಚಂದ್ರನು $12^0$ ಗಳಷ್ಟು ಅಥವಾ ಅದರ ಗುಣಕದಷ್ಟು ದೂರ ಸರಿಯುವ ವೇಳೆ. ಹೇಗೆಂದರೆ, ಸೂರ್ಯನಿಂದ ಚಂದ್ರನು $12^0$ ದೂರವಿರುವಾಗ

ಪ್ರಥಮ ತಿಥಿಯು ಅರ್ಥಾತ್ ಪಾಡ್ಯಮಿಯು ಮುಗಿಯುತ್ತದೆ. 24° ದೂರವಿರುವಾಗ ದ್ವಿತೀಯ ತಿಥಿಯು ಅರ್ಥಾತ್ ಬಿದಿಗೆಯು ಮುಗಿಯುತ್ತವೆ. ಇತ್ಯಾದಿಯಾಗಿ ಸೂರ್ಯ ಚಂದ್ರರಿಬ್ಬರೂ ಒಟ್ಟುಗೂಡಿದಾಗ ಅಮಾವಾಸ್ಯೆಯೂ 180° ಅಂತರದಲ್ಲಿ ಅರ್ಥಾತ್ ತೃತಿಯೋಗದಲ್ಲಿದ್ದಾಗ ಹುಣ್ಣಿಮೆಯೂ ಮುಗಿಯುತ್ತದೆ.

ಜನ್ಮ ಕಾಲದಲ್ಲಿ ಯಾವ ತಿಥಿಯಿತ್ತು ಎಂದು ತಿಳಿದುಕೊಂಡರೆ ಜ್ಯೋತಿಷೋದ್ದೇಶಗಳಿಗೆ ಸಾಕು.

ತಿಥಿ ಯಾವುದೆಂದು ಗೊತ್ತುಪಡಿಸಿಕೊಳ್ಳಲು ಚಂದ್ರನ ಸ್ಪುಟದಿಂದ ಸೂರ್ಯನ ಸ್ಪುಟವನ್ನು ಕಳೆಯಿರಿ. ಈ ವ್ಯತ್ಯಾಸವು 180° ಗಳಿಗಿಂತ ಕಡಿಮೆಯಿದ್ದರೆ ಅದು ಶುಕ್ಲಪಕ್ಷ ; 180° ಕ್ಕಿಂತ ಹೆಚ್ಚಾಗಿದ್ದರೆ, ಅದು ಕೃಷ್ಣಪಕ್ಷ.

ಈ ಅಂತರವನ್ನು (ಚಂದ್ರ–ಸೂರ್ಯ) 12° ಗಳಿಂದ ಅಂದರೆ 720° ಗಳಿಂದ ಭಾಗಿಸಿ ಭಾಗಲಬ್ಧವು ಎಷ್ಟು ತಿಥಿಗಳು ಕಳೆದಿದೆ ಎಂಬುವನ್ನು ಸೂಚಿಸುತ್ತದೆ. ಭಾಗಶೇಷವು ಚಾಲ್ತಿ ತಿಥಿಯಲ್ಲಿ ಎಷ್ಟು ಭಾಗ ಕಳೆದಿದೆ ಎಂಬುದನ್ನು ತಿಳಿಸುತ್ತದೆ.

ಹೇಗೆಂದರೆ, 8-8-1895ರಂದು ಬೆಂಗಳೂರಿನಲ್ಲಿ ಸ್ಥಳೀಯ ಕಾಲ 4 ಗಂಟೆ 10 ನಿಮಿಷಗಳು 20 ಸೆಕೆಂಡುಗಳ ವೇಳೆಯಲ್ಲಿ ಯಾವ ತಿಥಿ ಸಲ್ಲುತ್ತದೆ, ತಿಳಿಯೋಣ. ಮೊದಲು ಸೂರ್ಯನ ಸ್ಪುಟವಾದ 114° 40' ಅರ್ಥಾತ್ 6880' ನ್ನು ಚಂದ್ರನ ಸ್ಪುಟವಾದ 326° ಅಂದರೆ 19560' ರಿಂದ ಕಳೆಯೋಣ. ಶೇಷವು 211° 20' (12680') ಆಗುತ್ತದೆ. ಇದು 180° ಗಿಂತ ಹೆಚ್ಚಾಗಿದೆಯಾಗಿ ಕೃಷ್ಣಪಕ್ಷವಾಗುತ್ತದೆ. 12°ಗಳಿಂದ (720') ಭಾಗಿಸಿದರೆ, ಭಾಗಲಬ್ಧ 17 ಆಗುವ ಕಾರಣ ೧೮ನೆಯ ತಿಥಿಯಾಗುತ್ತದೆ. ಅಂದರೆ ಕೃಷ್ಣಪಕ್ಷದ ತೃತೀಯ ಅಥವಾ ತದಿಗೆ. ಈ ತಿಥಿಯಲ್ಲಿ 440° (7° 20') ಗಳಷ್ಟು ಭಾಗ ಕಳೆದಿದೆ. 280' (4° 40') ರಷ್ಟು ಉಳಿದಿದೆ. ಈ ಶೇಷವನ್ನು 24 ರಿಂದ ಗುಣಿಸಿ, ಗುಣಲಬ್ಧವನ್ನು ಸೂರ್ಯಚಂದ್ರರ ಅಂತರದಿಂದ ಭಾಗಿಸಿದರೆ ನಮಗೆ ಎಷ್ಟು ಗಂಟೆ (ಜನನ ಕಾಲದಿಂದ ಅಥವಾ ಪ್ರಶ್ನೆಕಾಲದಿಂದ) ಆ ತಿಥಿ ಮುಗಿಯಲು ಕಳೆಯಬೇಕಾಗಿದೆ. ಎಂಬುದು ತಿಳಿಯುತ್ತದೆ.

ಜನನದ ದಿವಸ ಚಂದ್ರನ ದೈನಿಕ ಚಲನ್ಗ 11° 47'

---

* 30 ಕ್ಕಿಂತ ಹೆಚ್ಚಾಗಿದ್ದರೆ 1' ಎಂದೂ ಕಡಿಮೆಯಿದ್ದರೆ ತ್ಯಾಜ್ಯವೆಂದೂ ಪರಿಗಣಿಸುವುದು ಅನುಕೂಲ.

ಸೂರ್ಯನ ದೈನಿಕ ಚಲನ 57'

ವ್ಯತ್ಯಾಸ $10^0\ 50'$

$= 650'$

$280^0$ ಗಳನ್ನು 24 ರಿಂದ ಗುಣಿಸಿ, ಬಂದ ಗುಣಲಬ್ಧವನ್ನು 650 ರಿಂದ ಭಾಗಿಸಿದರೆ 10ಗಂ 57ನಿಮಿಷ ಲಭಿಸುತ್ತದೆ.

$$\frac{280 \times 24}{650}$$

ಇದನ್ನು ದತ್ತವಾದ ಕಾಲಕ್ಕೆ ಸೇರಿಸಿದರೆ 3 ಗಂಟೆ 27 ನಿಮಿಷ.

3 ಗಂಟೆ ಬೆಳಗಿನ ಜಾವ (9ನೇ ಆಗಸ್ಟ್) ಆಗುತ್ತದೆ. ಅದು ಬಹುಳ ತದಿಗೆಯು ಮುಗಿಯುವ ವೇಳೆಯಾಗುತ್ತದೆ.

*ವಾರ :* ಇದು ಕುರಿತ ದಿವಸ ಯಾವ ವಾರ ಎಂಬುದು. ವಾರದ ಹೆಸರುಗಳನ್ನು ಕೆಲವು ಖಗೋಳೀಯ ಕಾರಣಗಳಿಗಾಗಿ ಕೊಟ್ಟಿದೆ. ಆದ್ದರಿಂದ ಯಾವ ಗ್ರಹದ ಹೆಸರನ್ನು ಆ ವಾರ ಹೊತ್ತಿರುತ್ತದೆಯೋ ಆವತ್ತು ಆ ಗ್ರಹದ ಪ್ರಭಾವವು ಪ್ರಮುಖವಾಗಿರುತ್ತದೆ.

ವಾರದ ದಿವಸಗಳಿಗೆ ಈ ರೀತಿ ಸಂಖ್ಯೆಗಳನ್ನು ಕೊಡಲಾಗಿದೆ. ಭಾನುವಾರ 1, ಸೋಮವಾರ 2, ಮಂಗಳವಾರ 3, ಬುಧವಾರ 4, ಗುರುವಾರ 5, ಶುಕ್ರವಾರ 6, ಶನಿವಾರ 7.

*ನಕ್ಷತ್ರ :* ಆಕಾಶಮಂಡಲದ ರಾಶಿ ಚಕ್ರವನ್ನು 27 ನಕ್ಷತ್ರಗಳಾಗಿ ವಿಂಗಡಿಸಿ, ಅವನ್ನು ಚಂದ್ರನ ತಂಗುದಾಣಗಳೆಂದು ಕರೆಯುವುದುಂಟು. ರಾಶಿಚಕ್ರದ ಪ್ರಾರಂಭ ಬಿಂದುವಿನಿಂದ ಮೊದಲುಗೊಂಡು ಕ್ರಾಂತಿ - ವೃತ್ತದಲ್ಲಿ ಚಂದ್ರನು ೧೩° ೨೦' ರಷ್ಟು ಆಕಾಶವನ್ನು ಸಂಕಲಿಸಲು ತೆಗೆದುಕೊಳ್ಳುವ ಕಾಲವನ್ನು ನಕ್ಷತ್ರ ಸ್ಥಾನವು ಅವಲಂಬಿಸುತ್ತದೆ. ನಕ್ಷತ್ರ ಪುಂಜಗಳು ಬೃಹತ್ ಗಾತ್ರದ ವಿದ್ಯುತ್ ಕಾಂತ ಕಾಯಗಳೇ ಆದ ಪಕ್ಷಕ್ಕೆ ಅವು ಆಕಾಶದಲ್ಲಿ ಶಕ್ತಿಯನ್ನು ವಿಕಿರಿಸುತ್ತವೆಂದೂ ಈ ವಿಕಿರಣ ಶಕ್ತಿಗಳ ಸಂಪರ್ಕವನ್ನು ಪಡೆದಾಗ ಚಂದ್ರನು ವಿಶೇಷ ಪ್ರಭಾವಗಳನ್ನು ಬೀರುತ್ತಾನೆಂದೂ ಬಗೆದರೆ ಅದು ಸಮಂಜಸವೇ ಎನಿಸುತ್ತದೆ. ಜನ್ಮತಾರೆ ದಿನತಾರೆಗಳನ್ನು ಹೀಗೆ ಕಂಡುಹಿಡಿಯಬಹುದು.

ಕ್ರಾಂತಿ ವೃತ್ತವನ್ನು ತಲಾ $13^0\ 20'$ (800' ಗಳಷ್ಟು ಚಾಪ) ಪ್ರಮಾಣವುಳ್ಳ 27 ನಕ್ಷತ್ರಗಳನ್ನಾಗಿ (ಪರಿಶಿಷ್ಟ 3ನ್ನು ನೋಡಿ) ವಿಂಗಡಿಸಲಾಗಿದೆ. ಚಂದ್ರನ ಸ್ಫುಟವನ್ನು ಅಂಶಗಳಿಂದ ನಿಮಿಷಗಳಿಗೆ ಪರಿವರ್ತಿಸಿ, ಅದನ್ನು 800 ರಿಂದ

ಭಾಗಿಸಿ. ಬರುವ ಭಾಗಲಬ್ಧವು ಎಷ್ಟು ನಕ್ಷತ್ರಗಳು ಕಳೆದಿವೆ ಎಂಬುದನ್ನು ಸೂಚಿಸುತ್ತದೆ. ಶೇಷವು ಚಾಲ್ತಿ ನಕ್ಷತ್ರದಲ್ಲಿ ಚಂದ್ರ ಯಾವ ಭಾಗದಲ್ಲಿದ್ದಾನೆ ಎಂಬುದನ್ನು ಸೂಚಿಸುತ್ತದೆ. ತಿಥಿಗೆ ಕೊಟ್ಟಿರುವ ದತ್ತಾಂಶದ ಪ್ರಕಾರ:

ಚಂದ್ರ ಕುಂಭದಲ್ಲಿದ್ದಾನೆ $25^0$ 59' 46"

10 ರಾಶಿಗಳು $25^0$ 59' 46"

$325^0$ 59' 46"

$195^0$ 559' 46"

800 ರಿಂದ ಭಾಗಿಸಿ $\frac{19559\ 46''}{800}$

ಭಾಗಲಬ್ಧ 24

ಭಾಗಶೇಷ 359' 46"

ನಡೆಯುತ್ತಿರುವ ನಕ್ಷತ್ರ 25ನೆಯದು ಅಂದರೆ ಪೂರ್ವಾಭಾದ್ರ. ಇದರಲ್ಲಿ 359' 46" ರಷ್ಟು ಕಳೆದಿದೆ. ಉಳಿದ ಭಾಗ (800' 359' 46').

***ಯೋಗ*** : ಸೂರ್ಯ ಚಂದ್ರರ ಚಲನೆಗಳ ಜಂಟಿ ಸ್ಫುಟವು $13^0$ 20' ಗಳಷ್ಟಾಗಲು ತೆಗೆದುಕೊಳ್ಳುವ ಕಾಲಕ್ಕೆ ಯೋಗ ಎಂದು ಹೆಸರು. ಪ್ರತಿಯೊಂದು ಪಂಚಾಗದಲ್ಲೂ ಆಯಾ ದಿನದ ಯೋಗ ಯಾವುದು, ಅದು ಮುಗಿಯುವ ವೇಳೆ ಯಾವುದು ಎಂಬ ವಿವರವನ್ನು ಕೊಟ್ಟಿರುತ್ತದೆ. ಒಟ್ಟು 27 ಯೋಗಗಳಿರುತ್ತವೆ. (ಪರಿಶಿಷ್ಟ 4ನ್ನು ನೋಡಿ).

ಯೋಗವು ಸೂಕ್ಷ್ಮ ಪ್ರಭಾವಗಳ ಸಮ್ಮಿಳನ. ಅದು ನಮ್ಮ ದೇಹಗಳಿಗೆ ದಾರ್ಢ್ಯ ಕೊಟ್ಟು, ರೋಗ ಕ್ರಿಮಿಗಳನ್ನು ನಿವಾರಿಸಿ, ಆರೋಗ್ಯವಂತರಾಗಿ ಬದುಕಿನ ಎಲ್ಲ ಪ್ರಾಕಾರಗಳಲ್ಲೂ ಸುಖಾನುಭವವನ್ನು ಪಡೆಯುವಂತೆ ನೆರವಾಗುತ್ತವೆ.

### ಯೋಗ

ಸೂರ್ಯ ಸಿದ್ಧಾಂತದ ಪ್ರಕಾರ ಯೋಗವನ್ನು ಕಂಡುಹಿಡಿಯುವುದಕ್ಕಿರುವ ಸೂತ್ರ ಹೀಗಿದೆ:

$$\frac{\text{ಸೂರ್ಯಸ್ಫುಟ + ಚಂದ್ರನ ಸ್ಫುಟ}}{13^0\ 20'\ (\text{ಅಥವಾ } 800')}$$

ತಿಥಿಗೆ ಕೊಟ್ಟಿರುವ ಉದಾಹರಣೆಯ ದಿವಸವನ್ನು ತೆಗೆದುಕೊಂಡರೆ,

| | |
|---|---|
| ಸೂರ್ಯಸ್ಫುಟ | $114^0$ 40' |
| ಚಂದ್ರನ ಸ್ಫುಟ | 326 0 |
| ಮೊತ್ತ | $440^0$ 40' |

$80^0$ 40'

4840'

4840ನ್ನು 800 ರಿಂದ ಭಾಗಿಸಿದರೆ ಭಾಗಲಬ್ಧ 6, ಭಾಗಶೇಷ 40 ದೊರಕುತ್ತವೆ. ಅಂದರೆ 6 ಯೋಗಗಳು ಕಳೆದಿವೆ ಮತ್ತು 7ನೆಯದು ಅಂದರೆ ಸುಕರ್ಮನ್ ಯೋಗ ನಡೆಯುತ್ತಿದೆ. ಸುಕರ್ಮದಲ್ಲೂ 40 ಕಳೆದಿದೆ. ಇನ್ನು ಉಳಿದಿರುವ ಯೋಗ ಶೇಷ 760, ಈ ಚಾಲ್ತಿಯಲ್ಲಿರುವ ಯೋಗವು ಯಾವಾಗ ಮುಗಿಯುತ್ತದೆ ಎಂದು ತಿಳಿಯಲು 760' ನ್ನು ಸೂರ್ಯ ಚಂದ್ರರ ದೈನಿಕ ಚಲನಗಳ ಮೊತ್ತದಿಂದ (0' 57'+$11^0$ 47'=$12^0$ 44' ಅಥವಾ 764' ) ಭಾಗಿಸಿ 24 ರಿಂದ ಗುಣಿಸಿದರೆ ಕಾಲವನ್ನು ಗಂಟೆಗಳಿಗೆ ಇಳಿಸಿದಂತೆ ಆಗುತ್ತದೆ.

$$\frac{760 \times 24}{764} \quad - 23\text{ಗಂಟೆ } 50 \text{ ನಿಮಿಷ.}$$

ಸುಕರ್ಮನ್ ಯೋಗವು ಜನನ ಕಾಲದಿಂದ ಅಥವಾ ಕುರಿತುಕೊಂಡ ಕಾಲದಿಂದ 23 ಗಂಟೆ 50 ನಿಮಿಷಗಳ ವೇಳೆಗೆ ಮುಗಿಯುತ್ತದೆ.

ಯೋಗಗಳ ಪಟ್ಟಿ (ಪರಿಶಿಷ್ಟ 5) ಯಿಂದ ಸೂರ್ಯ ಚಂದ್ರರ ಜಂಟಿ ಚಲನಗಳ ಮೊತ್ತದ ಆಧಾರದ ಮೇಲೆ ಯೋಗ ಯಾವುದು ಎಂದು ತಿಳಿಯಬಹುದು.

ಹೇಗೆಂದರೆ, ಉದಾಹರಣೆಯಲ್ಲಿ ಕೊಟ್ಟಿರುವ ಸೂರ್ಯ ಚಂದ್ರರ ಜಂಟಿ ಚಲನದ ಮೊತ್ತ $80^0$ 40' . ಪರಿಶಿಷ್ಟ 4ರ ಪ್ರಕಾರ ಸುಕರ್ಮನ್ ಯೋಗ $80^0$ ಗಳಲ್ಲಿ ಪ್ರಾರಂಭವಾಗಿ $93^0$ 20' ಗಳವರೆಗೆ ನಡೆಯುತ್ತದೆ.

***ಕರಣ :*** ಕೊನೆಯದಾಗಿ ಕರಣಕ್ಕೆ ಬರೋಣ. ಕರಣ ಅಂದರೆ ಅರ್ಧ ತಿಥಿ ಅಂದರೆ ಸೂರ್ಯ ಚಂದ್ರರ ನಡುವಣ ಅಂತರವನ್ನು ಸಾಗಲು ತೆಗೆದುಕೊಳ್ಳುವ ಕಾಲವು 6ರ ಗುಣಕವಾಗಿರಬೇಕು. ಕರಣಗಳು 11. ಯಾವುವೆಂದರೆ (1) ಬವ (2) ಬಾಲವ (3) ಕೌಲವ (4) ತೈತುಲ (5) ಗರಿಜ (6) ವಣಿಜ (7) ವಿಷ್ಟಿ (8) ಶಕುನ (9) ಚತುಷ್ಪಾದ (10) ನಾಗ ಮತ್ತು (11) ಕಿಂಸ್ತುಘ್ನ.

ಮೊದಲ ಏಳು ಕರಣಗಳೂ ಚಾಂದ್ರಮಾನದ ಮೊದಲನೆ ತಿಥಿಯ ದ್ವಿತೀಯಾರ್ಧದಿಂದ ಪ್ರಾರಂಭವಾಗಿ ಒಂದು ಚಾಂದ್ರಮಾನ ಮಾಸದ ಅವಧಿಯಲ್ಲಿ ಎಂಟು ಆವರ್ತ ಬರುತ್ತವೆ. ಕಡೆಯ ನಾಲ್ಕು ಕರಣಗಳೂ ಶಾಶ್ವತವಾದವು. ಚಾಂದ್ರಮಾನದ 29ನೆಯ ತಿಥಿಯ ದ್ವಿತೀಯಾರ್ಧದಿಂದ ಹಿಡಿದು ಕ್ರಮವಾಗಿ ಆವರ್ತಿಸಿ ಬರುತ್ತವೆ.

ಶುಭ ಮುಹೂರ್ತವನ್ನು ಇಡುವಾಗ, ಯಾವಾಗಲೂ ಲಗ್ನವನ್ನೂ, ಚಂದ್ರನನ್ನೂ ಬಲಪಡಿಸುವುದು ಅಪೇಕ್ಷಣೀಯ. ಆದಕಾರಣ ಈ ಎಲ್ಲ ಸೂಕ್ಷ್ಮ ಪ್ರಭೇದಗಳನ್ನೂ ಜೋಪಾನವಾಗಿ ಗ್ರಹಿಸತಕ್ಕದ್ದು ಅಗತ್ಯ.

ಮೇಷ ವೃಷಭ ಧನುಸ್ ಕನ್ಯ ರಾಶಿಗಳಲ್ಲಿ ಮೊದಲ ಮೂರು ಡಿಗ್ರಿಗಳನ್ನು ಬಿಡಬೇಕು. ಅದು ಭುಜಂಗ ಸಂಕೇತವುಳ್ಳದ್ದು. ಆದ ಕಾರಣ ವಿನಾಶಕಾರಿ. ಮೀನ ಮಕರ ಕರ್ಕಾಟಕ ವೃಶ್ಚಿಕಗಳಲ್ಲಿ ಕಡೆಯ ಮೂರು ಡಿಗ್ರಿಗಳನ್ನು ಬಿಡತಕ್ಕದ್ದು. ಅದು ರಾಹು ಅಂಕಿತವುಳ್ಳದ್ದು. ನಡುವಣ ಅರ್ಧಗಳಿಗೆ ($13^0$ 30' ರಿಂದ $16^0$ 30' ರವರೆಗೆ)ಯನ್ನು ಮಿಥುನ ತುಲಾ ಸಿಂಹ ಕುಂಭಗಳಲ್ಲಿ ಬಿಡತಕ್ಕದ್ದು. ಅದು ಗೃಧ್ರಸೂಚಕ.

ಮಂಗಳವಾರ ಶನಿವಾರಗಳನ್ನು ಎಲ್ಲ ಶುಭಕಾರ್ಯಗಳಿಗೂ ಬಿಟ್ಟು ಬಿಡತಕ್ಕದ್ದು.

ಚೌತಿ ಅಷ್ಟಮಿ ದ್ವಾದಶಿ* ಚತುರ್ದಶಿಗಳು ಶುಕ್ಲಪಕ್ಷದಲ್ಲೂ ಕೃಷ್ಣಪಕ್ಷದಲ್ಲೂ ಶುಭಕಾರ್ಯಗಳನ್ನು ಆರಂಭ ಮಾಡಲು ತಕ್ಕ ದಿವಸಗಳಲ್ಲ.

ಪ್ರತಿ ನಕ್ಷತ್ರಕ್ಕೂ ತ್ಯಾಜ್ಯ ಕಾಲವುಂಟು. ಆ ಕಾಲವನ್ನು ತಪ್ಪದೆ ಕೈಬಿಡಬೇಕು. ಈ ತ್ಯಾಜ್ಯ ಕಾಲವು ಪ್ರತಿ ನಕ್ಷತ್ರಕ್ಕೂ 4 ಗಳಿಗೆಗಳಷ್ಟು (1 ಗಂಟೆ 36 ನಿಮಿಷ) ಇರುತ್ತದೆ. ಮುಂದೆ ಸೂಚಿಸಿರುವಂತೆ ಪ್ರತಿ ನಕ್ಷತ್ರಕ್ಕೂ ಕೊಟ್ಟಿರುವ ವೇಳೆಯಿಂದ ಇದು ಚಾಲ್ತಿಯಾಗಿರುತ್ತದೆ.

ಅಶ್ವಿನಿ 50; ಭರಣಿ 4; ಕೃತ್ತಿಕ 30; ರೋಹಿಣಿ 40; ಮೃಗಶಿರ14; ಆರಿದ್ರ 21; ಪುನರ್ವಸು 30; ಪುಷ್ಯಮಿ 20; ಆಶ್ಲೇಷ 32; ಮಖ 30; ಪುಬ್ಬ 20; ಉತ್ತರ 1;ಹಸ್ತ 21; ಚಿತ್ತ 20; ಸ್ವಾತಿ14; ವಿಶಾಖಾ 14; ಅನೂರಾಧ 10; ಜ್ಯೇಷ್ಠ 14; ಮೂಲ 20; ಪೂರ್ವಾಷಾಡಾ 20; ಉತ್ತರಾಷಾಢಾ 20; ಶ್ರವಣ 10; ಧನಿಷ್ಠ 10; ಶತಭಿಷ18; ಪೂರ್ವಾಭಾದ್ರ 16; ಉತ್ತರಾಭಾದ್ರ ಮತ್ತು ರೇವತಿ 30.

* ನಮ್ಮ ಅನುಭವದಲ್ಲಿ ದ್ವಾದಶಿಯು ಶುಭ ದಿವಸ, ಇತರೆ ಲಕ್ಷಣಗಳು ಪ್ರಬಲವಾಗಿದ್ದರೆ, ದ್ವಾದಶಿಯಂದು ಶುಭಕಾರ್ಯ ಮಾಡಬಹುದು.

ನಾವು ಅವಲಂಬಿಸುತ್ತಿರುವ ಕ್ರಮದ ಆಕಾರ, ಪ್ರತಿ ಹಿಂದುವೂ ತನ್ನ ಜೀವನ ಯಾತ್ರೆಯಲ್ಲಿ ಪಡೆಯಬೇಕಾದ ಜನನ ಪೂರ್ವವೂ ಜನನೋತ್ತರವೂ ಆಗಿ ಒಟ್ಟು 16 ಸಂಸ್ಕಾರಗಳನ್ನು (ಷೋಡಶ ಕರ್ಮಗಳನ್ನು) ತೆಗೆದುಕೊಂಡಿದ್ದೇವೆ. ಈ ಪೈಕಿ ನಾಮಕರಣ, ಅನ್ನಪ್ರಾಶನ, ಮದುವೆ ಮುಂತಾದವು ಎಲ್ಲ ಧರ್ಮೀಯರಿಗೂ ಸಾಮಾನ್ಯವಾಗಿರುವ ಕಾರಣ, ಹಿಂದುವೇತರರೂ ಇವುಗಳಿಂದ ಏಕಪ್ರಕಾರವಾದ ಪ್ರಯೋಜನ ಪಡೆಯಬಹುದು.

ಷೋಡಶಕರ್ಮಗಳೆಂಬ ಸಂಸ್ಕಾರಗಳು ಮನುಷ್ಯನಿಗೆ ತನ್ನ ಜೀವಿತಕಾಲದ ಕೆಲವು ನಿರ್ದಿಷ್ಟ ಘಟ್ಟಗಳಲ್ಲಿ ಒದಗುವ ದೈಹಿಕವೂ ಮಾನಸಿಕವೂ ಆದ ವಿಷಮ ಸಂಧಿಯ ಬೆಳವಣಿಗೆಗಳನ್ನು ಆಧರಿಸಿದುದಾಗಿ ಕಾಣುತ್ತವೆ. ಮನುಷ್ಯ ಶಿಶುವು ಎದ್ದು ನಿಲ್ಲುವುದು, ಮಾತನಾಡಲು ಪ್ರಾರಂಭಿಸುವುದೇ ಮುಂತಾದವನ್ನು ಪ್ರಾರಂಭಿಸುವ ಕಾಲಗಳು ಕ್ಲಿಪ್ತವಾಗಿ ಒದಗುವ ಬೆಳವಣಿಗೆಯ ಲಕ್ಷಣಗಳಾಗಿರುತ್ತವೆ. ಆಯಾ ಕಾಲಕ್ಕೆ ತಕ್ಕಂತೆ ಮಗುವು ನಡೆಯುವುದಕ್ಕಾಗಲಿ ಮಾತನಾಡುವುದಕ್ಕಾಗಲಿ ಪ್ರಾರಂಭಿಸದಿದ್ದರೆ, ತಂದೆ ತಾಯಿಗಳಿಗೆ ಆತಂಕವುಂಟಾಗುತ್ತದೆ. ಹಲ್ಲು ಹುಟ್ಟುವುದೂ, ಹಲ್ಲು ಬಿದ್ದು ಮತ್ತೆ ಹುಟ್ಟುವುದೂ ಇಂಥದೇ ಒಂದು ಅವಸ್ಥಾಂತರ. ಹುಟ್ಟಿದ ಏಳು ವರ್ಷಗಳಲ್ಲಿ ಗಟ್ಟಿ ಹಲ್ಲುಗಳು ಬರುತ್ತವೆ. ಇದಾದ ಏಳು ವರ್ಷಗಳಿಗೆ ಮತ್ತೊಂದು ಅವಸ್ಥಾಂತರವುಂಟಾಗುತ್ತದೆ. ಅದೇ ಪ್ರಾಯಾವಸ್ಥೆ. ಮತ್ತೊಂದು ಬದಲಾವಣೆಯು 21ನೇ ವಯಸ್ಸಿನಲ್ಲಿ ಉಂಟಾಗುತ್ತದೆ. ಇದೇ ರೀತಿಯಲ್ಲಿ 49 ಅಥವಾ 50 (7 x 9) ಹೆಂಗಸರಿಗೆ ಮುಟ್ಟು ನಿಲ್ಲುವ ವಿಷಮ ಕಾಲ, 63ನೆಯ ವಯಸ್ಸಿಗೆ ಒದಗುವ ಗಂಡಕಾಲಗಳೂ ಉಂಟು. ಗಂಡಕಾಲದಲ್ಲಿ ಮೃತ್ಯುವೂ ಸಂಭವನೀಯ. ಮನುಷ್ಯನ ದೇಹದಲ್ಲಿರುವ ಪ್ರತಿ ಕಣವೂ ಏಳು ವರ್ಷಕ್ಕೊಂದು ಸಲ ನವೀಕರಿಸುತ್ತದೆ ಎಂದು ಹೇಳಲಾಗಿದೆ. ಅಂದರೆ ಈ ಮಾತು ಎಲ್ಲ ಕಣಗಳಿಗೂ ಅನ್ವಯವಾಗುವುದಿಲ್ಲವೆನ್ನಿ. ಈ ರೀತಿ ಷೋಡಶ ಕರ್ಮಗಳು ಮನುಷ್ಯನ ದೇಹವನ್ನೂ ಮನಸ್ಸನ್ನೂ ವಿಷಮ ಸಂಧಿಗಳಲ್ಲಿ ಭದ್ರಪಡಿಸಿಕೊಡುತ್ತವೆಂದು ಭಾವಿಸಲಾಗಿದೆ. ಬಹುಶಃ ಈ ವಿಷಯವನ್ನು ಮತ್ತಷ್ಟು ಆಳವಾಗಿ ಪರಾಮರ್ಶಿಸಿದರೆ ಈ ಕರ್ಮಗಳ ತತ್ತ್ವಾಧಾರ ಯಾವುದೆಂಬುದು ಮನವರಿಕೆಯಾಗಬಹುದು.

# ಜನ್ಮ ನಕ್ಷತ್ರ ಮತ್ತು ಜನ್ಮ ಚಂದ್ರ.

ಶುಭ ಮುಹೂರ್ತವನ್ನು ಇಟ್ಟುಕೊಡುವಾಗ, ನಿರ್ದಿಷ್ಟವಾದ ಉದ್ದೇಶಗಳಿಗೆ ತಕ್ಕಂತೆ ವಿಶೇಷ ಗ್ರಹಯೋಗಗಳನ್ನು ಆರಿಸಿಕೊಳ್ಳಬೇಕಾಗುವುದಲ್ಲದೆ, ಎಲ್ಲ ಮುಹೂರ್ತಗಳಿಗೂ ಸಮಾನವಾದ ಮತ್ತು ಜ್ಯೋತಿಷಿಯಾದವನು ಅತ್ಯಂತ ಜೋಪಾನವಾಗಿ ಪರಿಗಣಿಸಬೇಕಾದ ಮೂರು ಅಂಶಗಳಿವೆ. ಅವು ಯಾವುದೆಂದರೆ (1) ತಾರಾಬಲ ಅಥವಾ ನಕ್ಷತ್ರದ ಬಲ. (2) ಚಂದ್ರಬಲ ಮತ್ತು (3) ಪಂಚಕ ಅಥವಾ ಅದು ಪ್ರಭಾವಮೂಲಗಳ ಬಲ. ಇವು ಮೂರನ್ನೂ ಸಮರ್ಪಕವಾಗಿ ಅಳವಡಿಸಿಕೊಳ್ಳಬೇಕು. ಇಲ್ಲವಾದರೆ ಮುಹೂರ್ತದ ಪ್ರಾಮುಖ್ಯ ನಷ್ಟವಾಗುತ್ತದೆ.

*ತಾರಾಬಲ :*

ವ್ಯಕ್ತಿಯು ಹುಟ್ಟುವ ಕಾಲದಲ್ಲಿದ್ದ ನಕ್ಷತ್ರವೇ ಜನ್ಮತಾರೆ. ಜನನ ಕಾಲದಲ್ಲಿ ಯಾವ ರಾಶಿಯಲ್ಲಿ ಚಂದ್ರನಿರುತ್ತಾನೋ A ರಾಶಿಯ ಜನ್ಮ ರಾಶಿ ಆಥವಾ ಜನ್ಮ ಚಂದ್ರ. ಇವು ಅತ್ಯಂತ ಪ್ರಾಮುಖ್ಯವುಳ್ಳವು. ಹೊಸ ಕೆಲಸವನ್ನು ಪ್ರಾರಂಭಿಸುವ ಅಥವಾ ಕೈಗೊಳ್ಳುವ, ಪ್ರವಾಸ ಮಾಡುವ ದಿನ ನಕ್ಷತ್ರದವರೆಗೆ ಜನ್ಮ ನಕ್ಷತ್ರದಿಂದ ಎಣಿಸಿ. A ಸಂಖ್ಯೆಯನ್ನು 9 ರಿಂದ ಭಾಗಿಸಿ. ಭಾಗಿಸಲು ಸಾಧ್ಯವಾಗದಿದ್ದರೆ, A ಸಂಖ್ಯೆಯನ್ನು ಹಾಗೇ ಇಟ್ಟುಕೊಳ್ಳಿ. ಶೇಷವು 1 ಆದರೆ ಅದು ಜನ್ಮತಾರೆ ಆಗುತ್ತದೆ. ಅದರಿಂದ ದೇಹಕ್ಕೆ ಹಾನಿ ಸೂಚಿತವಾಗುತ್ತದೆ. 2 ಆದರೆ ಅದು ಸಂಪತ್ ತಾರೆ : ಸಂಪತ್ತು ಸಮೃದ್ಧಿ ಸೂಚಕ. 3 ಆದರೆ ವಿಪತ್ ತಾರೆ; ಅಪಾಯ, ನಷ್ಟ, ಅಪಘಾತ ಸೂಚಕ. 4 ಆದರೆ ಕ್ಷೇಮ ತಾರೆ ; ಸಮೃದ್ಧಿಸೂಚಕ. ೫ ಆದರೆ ಪ್ರತ್ಯಕ ತಾರೆ; ಅಡಚಣೆಗಳ ಸೂಚಕ. 6 ಆದರೆ ಸಾಧನ ತಾರೆ; ಇಷ್ಟಾರ್ಥ ಸಿದ್ಧಿ ಸೂಚಕ. 7 ಆದರೆ ನೈಧನ (ವಧ) ತಾರೆ; ಅಪಾಯ ಸೂಚಕ. ೮ ಆದರೆ ಮೈತ್ರ ತಾರೆ ; ಒಳ್ಳೆಯ ಸೂಚಕ. ಆದರೆ ಪರಮ ಮೈತ್ರ ತಾರೆ; ತುಂಬ ಶುಭಸೂಚಕ. ಮೇಲೆ ಹೇಳಿರುವ ಶುಭಾಶುಭ ಸೂಚನೆಗಳಿಗೆ ಕೆಲವು ವಿನಾಯಿತಿಗಳಿವೆ. ತಕ್ಕ ಕಡೆ ಅವನ್ನು ಪ್ರಸ್ತಾಪಿಸುತ್ತೇನೆ.

*ಉದಾಹರಣೆ :*

ಅಶ್ವಿನಿ ನಕ್ಷತ್ರದಲ್ಲಿ ಹುಟ್ಟಿದ ವ್ಯಕ್ತಿ ಶ್ರವಣ ನಕ್ಷತ್ರದ ದಿವಸ ಪ್ರಯಾಣ ಕೈಕೊಳ್ಳುತ್ತಾನೆ. ಜನ್ಮ ನಕ್ಷತ್ರದಿಂದ ಪ್ರಯಾಣ ದಿವಸದ ನಕ್ಷತ್ರದವರೆಗೆ ಎಣಿಸಿದರೆ, 22 ಆಗುತ್ತದೆ. ಅದನ್ನು 9 ರಿಂದ ಭಾಗಿಸಿದರೆ, ಶೇಷ 4 ಉಳಿಯುತ್ತದೆ. ಇದು ಕ್ಷೇಮ ತಾರೆ; ಶುಭಕರ. ಆದುದರಿಂದ ತಾರಾ ಬಲ ಸಮರ್ಪಕವಾಗಿದೆ.

ದಿನ ನಕ್ಷತ್ರವು ಮೊದಲನೆಯ ಪರ್ಯಾಯದಲ್ಲಿ, ಅಂದರೆ ಮೊದಲನೆ ಒಂಭತ್ತು ನಕ್ಷತ್ರಗಳ ಒಳಗೆ, ಇದ್ದರೆ, ಮೇಲೆ ಹೇಳಿರುವಂಥ ಕೆಡಕುಗಳು – 3ನೇ ವಿಪತ್, 5ನೇ ಪ್ರತ್ಯಕ್ ಮುಂತಾದವು ಪೂರ್ಣಪ್ರಮಾಣದಲ್ಲಿ ಇರುತ್ತವೆ.

ಎರಡನೇ ಪರ್ಯಾಯದಲ್ಲಿ, ಅಂದರೆ ಜನ್ಮ ನಕ್ಷತ್ರವೇ ಮುಂತಾದವು 10 ರಿಂದ 18ರವರೆಗೆ ಇದ್ದರೆ, ಸೂಚಿತವಾದ ಕೆಡಕು ಶೇಕಡ 50ರಷ್ಟು ಬರುತ್ತದೆ. ಇರುವಷ್ಟು ಕೆಡಕೂ ಕೂಡ 3ಗೆ (ವಿಪತ್) ತಾರೆಯ ಮೊದಲ ಪಾದದಲ್ಲೂ, 5ನೇ (ಪ್ರತ್ಯಕ್) ತಾರೆಯ ನಾಲ್ಕನೇ ಪಾದದಲ್ಲೂ 7ನೇ (ನೈಧನ) ತಾರೆಯು 19ರಿಂದ ಮೂರನೇ ಪಾದದಲ್ಲೂ ಕೇಂದ್ರೀಕೃತವಾಗಿರುತ್ತದೆ.

ಮೂರನೇ ಪರ್ಯಾಯದಲ್ಲಿ ಅಂದರೆ ಜನ್ಮ ವಿಪತ್ ಮುಂತಾದವು 19ರಿಂದ 22ರವರೆಗೆ ಇದ್ದರೆ ಕೆಡಕು ಕಡೆಗಾಣುವಷ್ಟು ಇರುತ್ತದೆನ್ನಬಹುದು. ಜನ್ಮ ನಕ್ಷತ್ರ ರೋಹಿಣಿ ಮತ್ತು ದಿನ ನಕ್ಷತ್ರ ಶತಭಿಷ ಅನ್ನಿ. ಜನ್ಮ ನಕ್ಷತ್ರದಿಂದ ದಿನ ನಕ್ಷತ್ರದವರೆಗೆ ಎಣಿಸಿದರೆ 21 ಆಗುತ್ತದೆ. ಅಂದರೆ ಇದು ಮೂರನೇ ಪರ್ಯಾಯದಲ್ಲಿ ಮೂರನೇ ನಕ್ಷತ್ರವಾಗುತ್ತದೆ. ಅಂದರೆ ವಿಪತ್ ತಾರೆ. ಆದರೂ ಯಾವ ಕೆಡಕನ್ನು ಸೂಚಿಸುವುದಿಲ್ಲ.

ನನ್ನ ಅನುಭವದಲ್ಲಿ, ಎಲ್ಲ ಶುಭಸಮಾರಂಭಗಳಿಗೂ, ದೀರ್ಘ ಪ್ರಯಾಣ, ಮದುವೆ ಹೊಸ ಉದ್ಯಮಾರಂಭಗಳಿಗೆ ವಿಪತ್ ತಾರೆ ನೈಧನ ತಾರೆಗಳನ್ನು ಬಿಡುವುದು ಉತ್ತಮ ಪಕ್ಷ. ಮೂರನೇ ಪರ್ಯಾಯದಲ್ಲಾದರೂ ಬೇರೆ ನಿವಾರಕ ಗ್ರಹಸ್ಥಿತಿಗಳಿದ್ದರೆ ವಿನಾ ಕೈ ಬಿಡುವುದು ಒಳ್ಳೆಯದು.

ಶಾಸ್ತ್ರಕಾರರ ಪ್ರಕಾರ, 22ನೇ ಮತ್ತು 27ನೇ ನಕ್ಷತ್ರಗಳು ಯಾವಾಗಲೂ ಕೆಟ್ಟವು. ಆದರೆ ನಮ್ಮ ಅನುಭವ ಇದಕ್ಕೆ ವಿರುದ್ಧವಾಗಿವೆ. 22ನೆಯದು ಯಾವಾಗಲೂ ಸಾಧನ ತಾರೆ. 27ನೆಯದು ಯಾವಾಗಲೂ ಪರಮ ಮೈತ್ರತಾರೆ.

*ಚಂದ್ರಬಲ :*

ಮೇಲೆ ತಿಳಿಸಿರುವಂತೆ, ಮುಹೂರ್ತದ ಉದ್ದೇಶಗಳಿಗೆ ಚಂದ್ರನೂ ಅವನಿರುವ ನಕ್ಷತ್ರವೂ ತುಂಬ ಪ್ರಾಮುಖ್ಯವುಳ್ಳವು. ಮುಹೂರ್ತವು ಪ್ರಶಸ್ತವಾಗಿರಬೇಕಾದರೆ ಮುಹೂರ್ತ ಕುಂಡಲಿಯಲ್ಲಿ ಚಂದ್ರನಿರುವ ಸ್ಥಾನವು ಸಂಬಂಧಪಟ್ಟ ವ್ಯಕ್ತಿಯ ಜನ್ಮ ತಾರೆಯಿಂದ 6ನೇ, 8ನೇ ಅಥವಾ 12ನೇ ಸ್ಥಾನದಲ್ಲಿರಕೂಡದು.

ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಮೃಗಶಿರ ನಕ್ಷತ್ರದಲ್ಲಿ (ಜನ್ಮರಾಶಿ ವೃಷಭ) ಹುಟ್ಟಿದ ವ್ಯಕ್ತಿಯು ಭರಣಿ ನಕ್ಷತ್ರವಿರುವ ದಿವಸ (ಚಂದ್ರ ಮೇಷದಲ್ಲಿರುವ ದಿವಸ) ಮದುವೆಯಾಗಲಪೇಕ್ಷಿಸುತ್ತಾನೆ. ಆದರೆ ಆ ದಿವಸ ಅವನಿಗೆ ತಾರಾಬಲವೂ (ಮೃಗಶಿರದಿಂದ ಭರಣಿಯು ನೈಧನ ತಾರೆಯಾಗುತ್ತದೆ). ಚಂದ್ರಬಲವೂ (ಚಂದ್ರನು ಮೇಷದಲ್ಲಿದ್ದು ಜನ್ಮ ತಾರೆಯಿಂದ 12ನೇ ನಕ್ಷತ್ರದಲ್ಲಿರುತ್ತಾನೆ) ಇರುವುದಿಲ್ಲ, ಆದಕಾರಣ ಆ ದಿವಸ ಅಶುಭ. ಕೆಲವು ನಕ್ಷತ್ರಗಳು ಸ್ವತ ಏವ ಕೆಡುಕಿನ ನಕ್ಷತ್ರಗಳಾದ ಕಾರಣ, ಆಯಾ ವ್ಯಕ್ತಿಯ ಜನ್ಮ ನಕ್ಷತ್ರದ ಅಪೇಕ್ಷ್ಮ ಶುಭ ಸೂಚಕವಾಗಿದ್ದರೂ ಕೂಡ ಕೈಬಿಡತಕ್ಕದ್ದು. ವಾಸ್ತವವಾಗಿ, ಭರಣಿ ನಕ್ಷತ್ರವನ್ನು ಎಲ್ಲ ಶುಭ ಕಾರ್ಯಗಳಿಗೂ ನಿಷೇಧಿಸಿದೆ. ಅದು ಸರ್ವಥಾ ತ್ಯಾಜ್ಯ.

*ಪಂಚಕ : (ಐದು ಶಕ್ತಿ ಮೂಲಗಳು)*

ದಿನ ನಿತ್ಯದ ಸಾಧಾರಣ ಪ್ರಕರಣಗಳಾದ ಹಿರಿಯರ ಸಂದರ್ಶನ, ಕ್ಲಿಪ್ತ ಕಾಲದ ಪ್ರಯಾಣ ಮುಂತಾದವುಗಳಿಗೆ ತಾರಾಬಲ ಅನುಕೂಲವಾಗಿದ್ದರೆ ಸಾಕು. ಪಂಚಕವನ್ನು ನೋಡಬೇಕಾದ ಪ್ರಮೇಯವಿಲ್ಲ. ಆದರೆ ಮುಖ್ಯ ಸಮಾರಂಭಗಳಾದ ಮದುವೆ, ಪ್ರಸ್ತ , ಗೃಹಪ್ರವೇಶ ಮುಂತಾದವುಗಳಿಗೆ, ಪಂಚಕವನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು. ಪಂಚಕವನ್ನು ನೋಡುವ ನಾನಾ ಬಗೆಗಳಿವೆ. ಸರ್ವೇಸಾಧಾರಣವಾದ ಕ್ರಮವನ್ನು ನಾನಿಲ್ಲಿ ಸೂಚಿಸುತ್ತೇನೆ. ಪಂಚಕ ನಿರ್ಣಯ ಮಾಡುವುದಕ್ಕೆ ಕಂಡಂತೆ ಐದು ಗ್ರಹ ಪ್ರಭಾವಗಳೂ, ನಕ್ಷತ್ರ ರಾಶಿ ಪ್ರಭಾವಗಳೂ ಒಳಗಾಗಿರುತ್ತವೆ. ಚಾಂದ್ರಮಾನ ತಿಥಿ (ಪ್ರಥಮದಿಂದ), ವಾರದ ಸಂಖ್ಯೆ (ಭಾನುವಾರ 1, ಸೋಮವಾರ 2 ಇತ್ಯಾದಿ). ನಕ್ಷತ್ರದ (ಅಶ್ವಿನಿಯಿಂದ) ಸಂಖ್ಯೆ ಲಗ್ನದ, ಸಂಖ್ಯೆ (ಮೇಷದಿಂದ) ತೆಗೆದುಕೊಳ್ಳಿ. ಇವನ್ನು ಕೂಡಿ ಮೊತ್ತವನ್ನು 9 ರಿಂದ ಭಾಗಿಸಿ. ಶೇಷವು 1 ಆದರೆ ಮೃತ್ಯು ಪಂಚಕ ಅಪಾಯಸೂಚಕ. 2 ಆದರೆ ಅಗ್ನಿ ಪಂಚಕ, ಬೆಂಕಿಯ ಭೀತಿ. 4 ಆದರೆ ರಾಜ ಪಂಚಕ, ದುಷ್ಫಲಗಳು; 6 ಆದರೆ ಚೋರ ಪಂಚಕ, ಕೆಡಕು; 8 ಆದರೆ ರೋಗ ಪಂಚಕ ; ಶೇಷವು 3,5,7 ಅಥವಾ ಸೊನ್ನೆ ಆದರೆ

ಅದು ಒಳ್ಳೆಯದು. ಉದಾಹರಣೆಗೆ, ಒಬ್ಬಾನೊಬ್ಬ ತನ್ನ ಉದ್ಯಮವನ್ನು ಇಂಥ ದಿವಸ ಇಂಥ ಹೊತ್ತಿಗೆ ಪ್ರಾರಂಭ ಮಾಡುವುದಕ್ಕೆ ಮುಹೂರ್ತ ಕೇಳುತ್ತಾನೆನ್ನಿ. ಅದು ಬೇರೆ ದೃಷ್ಟಿಯಿಂದ ಒಳ್ಳೆಯ ಮುಹೂರ್ತವಾಗಿರಬಹುದು ನಕ್ಷತ್ರ ಆಶ್ಲೇಷ. ತ್ರಯೋದಶಿ ತಿಥಿ. ಕನ್ಯಾರಾಶಿ ಮತ್ತು ಭಾನುವಾರ. ಇದಕ್ಕೆ ಪಂಚಕವನ್ನು ನೋಡೋಣ.

| | |
|---|---|
| ತಿಥಿಯ ಸಂಖ್ಯೆ | 13 |
| ನಕ್ಷತ್ರ ಸಂಖ್ಯೆ | 9 |
| ವಾರದ ಸಂಖ್ಯೆ | 1 |
| ರಾಶಿ ಸಂಖ್ಯೆ | 6 |
| ಮೊತ್ತ | 29 |

ಇದನ್ನು 9 ರಿಂದ ಭಾಗಿಸಿದರೆ, 29  9 = 3 $\frac{2}{9}$ ಆಗುತ್ತದೆ. ಅಂದರೆ ಶೇಷ ೨. ಇದು ವಹ್ನಿ ಅಥವಾ ಅಗ್ನಿಸೂಚಕ. ಆದಕಾರಣ ಶುಭತರವಲ್ಲ. ಈ ವಿಷಯವನ್ನು ಕುರಿತು ಪ್ರೊ.ಬಿ ಸೂರ್ಯನಾರಾಯಣರಾಯರು ತಮ್ಮ ಪ್ರಖ್ಯಾತ ಗ್ರಂಥವಾದ "ಅಸ್ಟ್ರಾಲಾಜಿಕಲ್ ಮಿರರ್" ಎಂಬ ಗ್ರಂಥದಲ್ಲಿ ಹೀಗೆ ವಿವೇಚಿಸುತ್ತಾರೆ.

"ವೈದ್ಯದಲ್ಲಿರುವಂತೆ ಜ್ಯೋತಿಷದಲ್ಲೂ ಹಲವು ಐತಿಹ್ಯಗಳಿದ್ದು ಅವನ್ನು ಸರಿಯಾಗಿ ಅರ್ಥ ಮಾಡಿಕೊಂಡು ಅವಲಂಬಿಸಿದರೆ ಗ್ರಹ, ನಕ್ಷತ್ರ ತಿಥಿ ರಾಶಿಗಳು ಸೂಚಿಸುವ ಕೆಟ್ಟ ಪ್ರಭಾವಗಳನ್ನು ತಗ್ಗಿಸಿಕೊಂಡು ಹೋಗಲು ಸಾಧ್ಯವಾಗುತ್ತದೆ. ಈ ಎಲ್ಲ ಪ್ರಕರಣಗಳಲ್ಲೂ ಕಂಡು ಬರುವ ಉದ್ದೇಶವೇನೆಂದರೆ, ಕಾಲದಲ್ಲಿ ಅಡಗಿರುವ ಸೂಕ್ಷ್ಮ ಪ್ರಭಾವಗಳ ಪರಸ್ಪರ ಮಿಳನ ಅಥವಾ ಆಕರ್ಷಣೆಗಳಿಂದಲೂ ಮತ್ತು ಕೆಲವು ಗೋಚರವಾದ, ಹಲವು ಅಗೋಚರವಾದ ನಿಗೂಢ ಪ್ರಾಕೃತಿಕ ಶಕ್ತಿಗಳ ಆಕರ್ಷಣೆ ವಿಕರ್ಷಣೆಗಳಿಂದ ಉಂಟಾಗುವ ರಾಸಾಯನಿಕ ಬದಲಾವಣೆಗಳ ದೆಸೆಯಿಂದಲೂ ಕೆಡಕುಗಳುಂಟಾಗುವುದನ್ನು ನಿವಾರಿಸಿಕೊಳ್ಳತಕ್ಕದ್ದು ಎಂಬುದೇ ಆಗಿದೆ".

ಅಶುಭ ಪಂಚಕಗಳನ್ನು ನಿವಾರಿಸಿಕೊಳ್ಳುವುದಕ್ಕಿರುವ ವಿಧಾನಕ್ಕೆ ಕೆಲವು ವಿನಾಯಿತಿಗಳಿವೆ. ವಸತಿಗೆ ಸಂಬಂಧವಾದ ಮುಹೂರ್ತವಾದರೆ, ರಾಜ ಪಂಚಕವನ್ನು ನಿವಾರಿಸಿಕೊಳ್ಳತಕ್ಕದ್ದು. ಮನೆ ಕಟ್ಟುವ ಮುಹೂರ್ತಕ್ಕೆ ರಾಜ ಪಂಚಕ ಅಗ್ನಿ ಪಂಚಕಗಳೆರಡನ್ನೂ ನಿವಾರಿಸಿಕೊಳ್ಳಬೇಕು. ಪ್ರಯಾಣ ಲಗ್ನಕ್ಕೆ ಚೋರ ಪಂಚಕವನ್ನು ಬಿಡತಕ್ಕದ್ದು. ಮದುವೆ ಮುಂಜಿಗಳಿಗೆ ರೋಗ ಪಂಚಕ ಮೃತ್ಯು ಪಂಚಕಗಳನ್ನು ಬಿಡಬೇಕು. ಇದಕ್ಕೆ ಪ್ರತಿಯಾಗಿ, ಯಾವುದೇ ವಿಶಿಷ್ಟೋದ್ದೇಶಕ್ಕಾಗಿ ತ್ಯಾಜ್ಯವಾದ ಪಂಚಕ ಬೇರೆ ಕಾರ್ಯಗಳಿಗೆ ಇದ್ದರೂ ಬಾಧಕವಿಲ್ಲವೆಂದಾಗುತ್ತದಷ್ಟೆ. ಹೀಗೆಂದೂ

ಯಾವ ಶಾಸ್ತ್ರಕಾರನೂ ನೇರವಾಗಿ ಹೇಳಿಲ್ಲವಾದರೂ ಪ್ರಕಾರಾಂತರವಾಗಿ ದೋಷವಿಲ್ಲ ಎಂದು ನಾವು ಭಾವಿಸಬಹುದು. ಉದಾಹರಣೆಗೆ, ಪ್ರಯಾಣಕ್ಕೆ ಅಥವಾ ಮದುವೆಗೆ ರಾಜ ಪಂಚಕವನ್ನೂ ಮನೆ ಕಟ್ಟಲಾರಂಭಿಸುವುದಕ್ಕೆ ರೋಗ ಪಂಚಕವನ್ನು ಕಡೆಗಾಣಬಹುದು. ಸಾಧ್ಯವಾದಷ್ಟು ಮಟ್ಟಿಗೂ ಪಂಚಕ ಬಾಧೆಯನ್ನು ನಿವಾರಿಸಿಕೊಳ್ಳುವುದೇನೋ ಒಳ್ಳೆಯದೆ. ಮುಹೂರ್ತ ಯಾವುದಕ್ಕಾದರೂ ಸರಿಯೆ. ಆದರೆ ಪ್ರಶಸ್ತವಾದ ಬೇರೆ ಯಾವ ದಿವಸವೂ ಇಲ್ಲವಾದಾಗ, ಕೆಟ್ಟದ್ದರಲ್ಲಿ ಮಧ್ಯಸ್ಥವಾದುದನ್ನು ಆರಿಸಿಕೊಳ್ಳಬೇಕಾಯಿತು.

ತಾರಾಬಲವನ್ನು ಕುರಿತು ಮೇಲೆ ವಿವರಿಸಿರುವಂತೆ 1ನೇ,3ನೇ,5ನೇ, ಅಥವಾ 7ನೇ ನಕ್ಷತ್ರಗಳಿರುವ ದಿವಸವನ್ನು ನಿವಾರಿಸಿಕೊಳ್ಳುವುದು ಅಪೇಕ್ಷಣೀಯ. ಆದರೆ ಬೇರೆ ರೀತಿಯಲ್ಲಿ ದಿನವು ಅನುಕೂಲವಾಗಿದ್ದರೆ, ಈ ನಕ್ಷತ್ರಗಳ ತ್ಯಾಜ್ಯ ಕಾಲಗಳನ್ನು ಮಾತ್ರ ನಿವಾರಿಸಿಕೊಳ್ಳತಕ್ಕದ್ದು. ಹೇಗೆಂದರೆ, ಜನ್ಮ ವಿಪತ್, ಪ್ರತ್ಯಕ್, ನೈಧನ ತಾರೆಗಳಲ್ಲಿ ಮೊದಲ 7,3,8 ಮತ್ತು 6 ಘಳಿಗೆಗಳು ಕ್ರಮವಾಗಿ ಕೆಟ್ಟವು. ಅವನ್ನು ನಿವಾರಿಸಿಕೊಂಡರೆ ಆಯಿತು. ನಿದರ್ಶನಾರ್ಥವಾಗಿ, ಪುಷ್ಯಮಿ ಜನ್ಮ ನಕ್ಷತ್ರದ ವ್ಯಕ್ತಿ ಮಖ(ವಿಪತ್) ನಕ್ಷತ್ರವಿರುವ ದಿವಸ ಪ್ರಯಾಣವನ್ನು ಕೈಕೊಳ್ಳಬೇಕಾದರೆ ಆ ನಕ್ಷತ್ರದ ಮೊದಲ ಏಳು ಘಳಿಗೆಗಳನ್ನು ಬಿಡಬೇಕು. ಆಗ ವಿಪತ್ ತಾರೆಯೆಂಬ ಕಳಂಕ ಆ ನಕ್ಷತ್ರಕ್ಕೆ ಇಲ್ಲವಾಗುತ್ತದೆ. ಕಡ್ಡಾಯವಾಗಿ ಕೂಡಲೇ ಬೇಕಾಗಿ ಬಂದಾಗ ಮತ್ತು ಮುಂದೆ ಹಾಕಲು ಯತ್ನವೇ ಇಲ್ಲದಿರುವಾಗ – ಇಂಥ ವಿಶೇಷ ಸಂದರ್ಭಗಳಲ್ಲಿ ಮಾತ್ರ ಈ ವಿನಾಯಿತಿ ಮಾರ್ಗಗಳನ್ನು ಅವಲಂಬಿಸಬೇಕಾಗುತ್ತದೆ.

ಯಾವುದೇ ಮುಹೂರ್ತಕ್ಕೆ ಆದರೂ ಜನ್ಮ ನಕ್ಷತ್ರವು ಸಾಧಾರಣವಾಗಿ ಒಳ್ಳೆಯದಲ್ಲವೆಂದು ಭಾವನೆಯಿದೆ. ಆದರೆ ಪ್ರಸ್ತ, ಯಜ್ಞ ಯಾಗಗಳು , ಅನ್ನಪ್ರಾಶನ, ಬೇಸಾಯ, ಉಪನಯನ, ಪಟ್ಟಾಭಿಷೇಕ, ಜಮೀನುಗಳನ್ನು ಕೊಳ್ಳುವುದು, ಅಕ್ಷರಾಭ್ಯಾಸ ಇವುಗಳಿಗೆ ಜನ್ಮ ನಕ್ಷತ್ರ ತುಂಬ ಪ್ರಶಸ್ತವಾದುದು. ಇದಕ್ಕೆ ವಿನಾಯಿತಿಯೇ ಇಲ್ಲ. ಆದರೆ ಯುದ್ಧ, ಸ್ತ್ರೀ ಪುರುಷ ಸಂಗಮ, ಔಷಧಾರಂಬ, ಪ್ರಯಾಣ, ವಿವಾಹಗಳಿಗೆ ಜನ್ಮತಾರೆ ಅಶುಭ. ಸ್ತ್ರೀಯರಿಗೆ ಜನ್ಮ ನಕ್ಷತ್ರವು ವಿವಾಹಕ್ಕೆ ಶ್ರೇಷ್ಠವಾದುದು.

ಮುಹೂರ್ತ ಕಾಲವನ್ನು ನಿಷ್ಕರ್ಷಿಸುವಾಗ ಗಮನಿಸಬೇಕಾದ ಹಲವಾರು ಕ್ಲಿಷ್ಟವಾದ ಶಾಸ್ತ್ರ ಪ್ರಕರಣಗಳಿವೆ. ಈ ವಿಷಯವಾಗಿ ಶಾಸ್ತ್ರಕಾರರು ವಿಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿರುತ್ತಾರಾದರೂ ನಾನು ನನ್ನ ನಮ್ರ ಅನುಭವದಲ್ಲಿ ಅತ್ಯಂತ ವಿಶ್ವಾಸಾರ್ಹವೆನಿಸಿರುವ ಸುಲಭ ತತ್ವಗಳನ್ನು ಈ ವಿಷಯ ಕುರಿತು ಕೊಡಲೆತ್ನಿಸಿದ್ದೇನೆ.

ನಾಲ್ಕನೇ ಅಧ್ಯಾಯ

# ನಕ್ಷತ್ರ ಪ್ರಭಾವಗಳು

ಇಡೀ ಮುಹೂರ್ತ ಶಾಸ್ತ್ರವು, ಅಷ್ಟೇಕೆ, ಇಡೀ ಜ್ಯೋತಿಷ ಶಾಸ್ತ್ರವು ನಕ್ಷತ್ರಗಳ ಅಪೇಕ್ಷ ಗ್ರಹಗಳ ಚಲನವಲನಗಳನ್ನು ಕುರಿತದ್ದಾಗಿದೆ. ಪ್ರಾಚೀನ ಭಾರತೀಯರು ಫಲಜ್ಯೋತಿಷದ ಉದ್ದೇಶಗಳಿಗಾಗಿ ನಿರಯಣ ಬಚಕ್ರವನ್ನು ಆಧರಿಸಿಕೊಂಡಿರುವುದು ವಿಜ್ಞಾನಿಗಳ ಪ್ರಶಂಸೆಗೆ ಹೆಚ್ಚು ಹೆಚ್ಚಾಗಿ ಒಳಗಾಗುತ್ತಿದೆ. ಇಲ್ಲಿ ಏಳುವ ಪ್ರಶ್ನೆ ಏನೆಂದರೆ: ಬಚಕ್ರದ ಅಥವಾ ರಾಶಿ ಚಕ್ರದ ಪ್ರಭಾವಗಳು ಯಾವುದನ್ನು ಅವಲಂಬಿಸಿವೆ ಎಂದರೆ, ನಕ್ಷತ್ರ ಸ್ಥಾನಗಳು ದಿನವಹಿ ಸೂರ್ಯನ ಸಂಪರ್ಕ ನೇರಕ್ಕೆ ಬಂದು ಆ ಶಕ್ತಿ ಕಾಯ ಮೂಲಕ ತಮ್ಮ ಪ್ರಭಾವವನ್ನು ಪಡೆದುಕೊಳ್ಳುತ್ತದೆಯೆ ಅಥವಾ ಸೂರ್ಯನ ಬದಲಾಗುತ್ತಿರುವ ಸ್ಥಾನ ಯಾವುದೇ ಆಗಿದ್ದರೂ ಈ ನಕ್ಷತ್ರ ಸ್ಥಾನಗಳದೇ ಆದಂಥ ವಿಶಿಷ್ಟ ಲಕ್ಷಣ ಯಾವುದಾದರೂ ಇದೆಯೆ ? ಅಸ್ಟ್ರಲಾಜಿಕಲ್ ಮ್ಯಾಗಜೈನ್ ಪತ್ರಿಕೆಯ ಹಲವು ಲೇಖನಗಳಲ್ಲಿ ನಕ್ಷತ್ರಗಳು ಮನುಷ್ಯನ ವ್ಯವಹಾರಗಳ ಮೇಲೆ ನಿರ್ಧಾರವಾದ ಪ್ರಭಾವ ಬೀರುತ್ತವೆಂದು ನಿರ್ವಿವಾದವಾದ ಸಾಕ್ಷ್ಯವೊದಗಿಸಿಕೊಟ್ಟು ತೋರಿಸಿದ್ದೇವೆ. ಹಲವಾರು ಸಲ, ನಕ್ಷತ್ರಗಳು ನಮ್ಮಿಂದ ಅರ್ಬುದನ್ಯರ್ಬುದ ಮೈಲಿಗಳಷ್ಟು ದೂರವಿರುವ ಕಾರಣ ಆ ಅನಾಥ ಪ್ರಮಾಣದ ನಿರ್ಜೀವ ಕಾರ್ಯಗಳಿಗೂ ಭೂಮಿಯ ಮೇಲಿರುವ ಜೀವಂತ ಮಾನವರಿಗೂ ಯಾವ ಸಂಬಂಧವೂ ಇರಲಾರದು ಎಂದು ವಿಜ್ಞಾನಿಗಳೆಂದುಕೊಳ್ಳುತ್ತಿರುವವರು ಹೇಳುತ್ತಿರುವ ಅಭಿಪ್ರಾಯಗಳನ್ನೂ ನಾವು ಇಲ್ಲಗಳೆಯಲಿದ್ದೇವೆ. ಈ ವಿದ್ಯುತ್ ಕಾಂತ ಕಾಯಗಳು ವಿವಿಧ ರೀತಿಯ ಶಕ್ತಿಗಳನ್ನು ಹೊರಸೂಸುತ್ತವೆ. ಆ ಶಕ್ತಿಗಳು ವಿವಿಧ ರೀತಿಯಲ್ಲಿ ವ್ಯಕ್ತಗೊಳ್ಳುತ್ತವೆ. ಭರಣಿ ನಕ್ಷತ್ರವು ಕೆಲವು ಸತ್ಕಾರ್ಯಗಳಿಗೆ ಅಶುಭ ಎಂದು ಹೇಳುವಾಗ, ಆ ನಕ್ಷತ್ರದಿಂದ ಬರುವ ವಿಕಿರಣ ಕಂಪನಗಳು ವಿನಾಶಕಾರಿಯಾದವು ಎಂದು ಅರ್ಥ ಮಾಡಿಕೊಳ್ಳಬೇಕು.

ಇಲ್ಲಿ ನಾನು ವಿವಿಧ ನಕ್ಷತ್ರಗಳ ಪ್ರಭಾವಗಳನ್ನು ಕುರಿತು ಜ್ಯೋತಿಷ ಶಾಸ್ತ್ರದ ಅಪೇಕ್ಷ್ಯ ವಿವರಿಸಲು ಇಚ್ಛಿಸುವುದಿಲ್ಲ. ಬೃಹತ್ ಸಂಹಿತ ಗ್ರಂಥವನ್ನು ಆಧರಿಸಿ ಕೆಲವು ಮುಖ್ಯವಾದುವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುತ್ತೇನೆ. ಹೆಚ್ಚು ಅಪೇಕ್ಷಿಸುವ ವರು ಮುಹೂರ್ತ ಶಾಸ್ತ್ರ ಕುರಿತ ಉದ್ಗ್ರಂಥಗಳನ್ನು ಅವಲೋಕಿಸತಕ್ಕುದೆಂದು ಹೇಳಿ ಅವರವರ ಅಪೇಕ್ಷೆಗೆ ಬಿಡುತ್ತೇನೆ.

ಇಪ್ಪತ್ತೆಂಟು ನಕ್ಷತ್ರಗಳಿಗೆ (ದಿನನಿತ್ಯದ ಜ್ಯೋತಿಷ ಪ್ರಕರಣಗಳಲ್ಲಿ ಅಭಿಜಿತ್ ನಕ್ಷತ್ರವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ) ಯಾವುವು ದೇವತೆಗಳೆಂದರೆ ಅಶ್ವಿನಿ, ಯಮ, ಅಗ್ನಿ, ಪ್ರಜಾಪತಿ, ಚಂದ್ರ, ಮದ್ರ, ಅದಿರೆ, ಗುರು, ಸರ್ಪ, ಪಿತ್ಯ, ಭಗ, ಆರ್ಯಮಾನ್, ಸವಿತ, ಸ್ವಸ್ತ, ವಾಯು, ಇಂದ್ರಾಗ್ನಿ, ಮಿತ್ರ, ಇಂದ್ರ, ನಿರುತ, ವಿಶ್ವೇದೇವ, ಬ್ರಹ್ಮನ್, ವಿಷ್ಣು, ವಸು, ವರುಣ, ಅಜೈಕಪಾದ್, ಅಹಿರ್ಬುಧ್ನ್ಯ, ಪೂವಾನ್ – ಕ್ರಮವಾಗಿ ಅಶ್ವಿನಿ ಮುಂತಾದ ನಕ್ಷತ್ರಗಳಿಗೆ ಅಧಿದೇವತೆಗಳು.

ರೋಹಿಣಿ, ಉತ್ತರ, ಉತ್ತರಾಷಾಢಾ, ಉತ್ತರಾಭಾದ್ರ – ಇವು ಸ್ಥಿರ ನಕ್ಷತ್ರ ಗಳು. ಪಟ್ಟಾಭಿಷೇಕ, ನಗರಕ್ಕೆ ಅಸ್ತಿಭಾರ, ಬಿತ್ತನೆ ಕೆಲಸ, ಗಿಡ ನೆಡುವುದೇ ಮುಂತಾದ ಶಾಶ್ವತ ಕಾರ್ಯಗಳಿಗೆ ಇವು ಪ್ರಶಸ್ತವಾದವು.

ಚಿತ್ರ, ಅನೂರಾಧಾ, ಮೃಗಶಿರ ಮತ್ತು ರೇವತಿ ಇವು ಮೃದು ನಕ್ಷತ್ರಗಳು. ಹೊಸ ಬಟ್ಟೆ ತೊಡುವುದಕ್ಕೆ, ನಾಟ್ಯ ಸಂಗೀತ ಮುಂತಾದ ಲಲಿತ ಕಲೆಗಳ, ಸ್ತ್ರೀ ಪುರುಷ ಸಂಬಂಧಕ್ಕೆ, ಶುಭಮುಹೂರ್ತಗಳಿಗೆ ಪ್ರಶಸ್ತವಾದವು.

ಅಶ್ವಿನಿ, ಪುಷ್ಯ, ಹಸ್ತ ಮತ್ತು ಅಭಿಜಿತ್ ಲಘು ನಕ್ಷತ್ರಗಳು. ಅಲಂಕಾರಕ್ಕೆ ಕ್ರೀಡಾ ವಿನೋದಗಳಿಗೆ, ಔಷಧ ಸೇವನೆಗೆ, ಪ್ರಯಾಣಕ್ಕೆಕೊಳ್ಳುವುದಕ್ಕೆ ಮತ್ತು ಹೊಸ ಉದ್ಯಮಗಳನ್ನು ಪ್ರಾರಂಭಿಸುವುದಕ್ಕೆ ಇವು ಪ್ರಶಸ್ತವಾದವು.

ಮೂಲ, ಜ್ಯೇಷ್ಠ, ಅರ್ದ್ರ, ಅಶ್ಲೇಷಗಳು ತೀಕ್ಷ್ಣ ಸ್ವಭಾವದವು. ಮಾಟ ಮಂತ್ರ ಕ್ಷುದ್ರ ದೇವತೆಗಳ ಆವಾಹನೆ, ಸೆರೆವಾಸ. ಕೊಲೆ ಮಿತ್ರಭೇದ ಇವುಗಳಿಗೆ ತಕ್ಕವು.

ಶ್ರವಣ, ಧನಿಷ್ಠ, ಶತಭಿಷ, ಪುನರ್ವಸು, ಸ್ವಾತಿ ನಕ್ಷತ್ರಗಳು ಚರ ನಕ್ಷತ್ರಗಳು. ವಾಹನ ಪಡೆಯಲೂ, ತೋಟಗಾರಿಕೆಗಳಿಗೂ, ಮೆರವಣಿಗೆ ಹೊರಡುವುದಕ್ಕೂ ಇವು ಪ್ರಶಸ್ತ.

ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ, ಭರಣಿ, ಮಖ ಇವು ಉಗ್ರ ನಕ್ಷತ್ರಗಳು ಘೋರ ಯೋಜನೆ, ವಿಷಪ್ರಾಶನ, ಮೋಸ, ಸೆರೆಗೆ ದೂಡುವುದು, ಬೆಂಕಿ ಹಚ್ಚುವುದು ಮುಂತಾದ ಕೆಟ್ಟ ಕೆಲಸಗಳಿಗೆ ಇವು ಉತ್ಕೃಷ್ಟ.

ಕೃತ್ತಿಕ, ವಿಶಾಖಾ ನಕ್ಷತ್ರಗಳ ಮಿಶ್ರ ನಕ್ಷತ್ರಗಳು. ಅವುಗಳ ಪ್ರಭಾವ ನಡೆಯುವ ಅವಧಿಯಲ್ಲಿ ಪುತ್ಯಪದ ಸಾಮಾನ್ಯ ಕಾರ್ಯಗಳನ್ನು ಮುನ್ನಡೆಸಬಹುದು.

ಧನಿಷ್ಠ ಮೂರನೇ ಪಾದದಿಂದ ಓಡಿದು ರೇವತಿ ಕಡೆ ಪಾದದವರೆಗೆ ಸಲ್ಲುವ ಕಾಲವು ಯಾವ ಒಳ್ಳೆ ಕೆಲಸಗಳಿಗೂ ತಕ್ಕುದಲ್ಲ. ಈ ಅವಧಿಗೆ ನಕ್ಷತ್ರ ಪಂಚಕ ಎನ್ನುತ್ತಾರೆ. ಈ ನಕ್ಷತ್ರಗಳು ನಡೆಯುವಾಗ ದಕ್ಷಿಣ ದಿಕ್ಕಿಗೆ ಪ್ರವಾಸ, ಮನೆ ಕಾಮಗಾರಿ, ಸೌದೆ ಹುಲ್ಲು ಸಂಗ್ರಹ, ಮಂಚ, ಹಾಸಿಗೆ ಸಂಗ್ರಹ ನಿಷಿದ್ಧ.

ಇಪ್ಪತ್ತೆಂಟು ನಕ್ಷತ್ರಗಳಲ್ಲೆಲ್ಲ ಅಗ್ರ ಪ್ರಶಸ್ತಿಯನ್ನು ಪುಷ್ಯ ನಕ್ಷತ್ರಕ್ಕೆ ಕೊಟ್ಟಿರುವಂತೆ ಕಾಣುತ್ತದೆ. ಅದು ಎಂಟನೇ ನಕ್ಷತ್ರ.

ಪುಷ್ಯ ನಕ್ಷತ್ರವು ಇಪ್ಪತ್ತೆಂಟು ನಕ್ಷತ್ರಗಳಲ್ಲೆಲ್ಲ ಅತ್ಯಂತ ಉಪಯುಕ್ತವೆಂದು ಭಾವನೆ. ಬಾಕಿ ಕೆಟ್ಟ ಯೋಗಗಳಿಂದುಂಟಾಗುವ ದೋಷಗಳನ್ನೆಲ್ಲ ಲೋಪಗಳನ್ನೆಲ್ಲ ಅದು ನಿವಾರಿಸುತ್ತದೆನ್ನುತ್ತಾರೆ. ಜನ್ಮ ಕುಂಡಲಿಯಲ್ಲಿ ಬದುಕಿಗೆ ಕುಂಠಿತವಾಗುವಂಥ ಕೆಟ್ಟ ಯೋಗಗಳು ಇದ್ದರೂ ಕೂಡ ಮತ್ತು ಚಂದ್ರನೂ ನಕ್ಷತ್ರಗಳೂ ಎಷ್ಟೇ ಪ್ರತಿಕೂಲವಾಗಿದ್ದರೂ ಕೂಡ ಇವೆಲ್ಲ ದುಷ್ಟ ಪ್ರಭಾವಗಳನ್ನೂ ನಿಷ್ಕ್ರಿಯಗೊಳಿಸುವಷ್ಟು ಶುಭಕರವಾದ ನಕ್ಷತ್ರ ಪುಷ್ಯ ಎಂದು ಕೊಂಡಾಡುವಷ್ಟು ದೂರ ಋಷಿಗಳು ಹೋಗಿದ್ದಾರೆ. ಇಷ್ಟೆಲ್ಲ ಶುಭ ಫಲಗಳನ್ನು ಪುಷ್ಯಕ್ಕೆ ಸೂಚಿಸಿದ್ದರೂ, ಆ ನಕ್ಷತ್ರ ಮದುವೆಗೆ ಯೋಗ್ಯವಲ್ಲ ಎಂದು ವಿಧಿಸಲಾಗಿದೆ. ಮುಹೂರ್ತ ಕುಂಡಲಿಯಲ್ಲಿರುವ ಅಶುಭ ಲಕ್ಷಣಗಳನ್ನೆಲ್ಲ ನಿವಾರಿಸುವಷ್ಟು ಪುಷ್ಯ ನಕ್ಷತ್ರವೊಂದೇ ಸಮರ್ಥವಾಗಿದೆ ಎಂದು ಹೇಳುವುದು ಅತಿಶಯೋಕ್ತಿಯಾದರೂ ಅದು ಸರ್ವ ಶ್ರೇಷ್ಠವಾದ ನಕ್ಷತ್ರ ಎಂಬುದರಲ್ಲಿ ಸಂಶಯವಿಲ್ಲ. ಮದುವೆಗೆ ಬಿಟ್ಟು ಬಾಕಿ ಎಲ್ಲ ಸಮಾರಂಭಗಳಿಗೂ ಅದನ್ನು ಗೊತ್ತುಪಡಿಸಿಕೊಳ್ಳಬಹುದು.

ಐದನೇ ಅಧ್ಯಾಯ

# ಕೆಲವು ವಿಶೇಷ ಅಪಯೋಗಗಳು ಮತ್ತು ಅವುಗಳ ನಿವಾರಣ

ಜ್ಯೋತಿಷ ಸಿದ್ಧಾಂತಗಳನ್ನು, ವಿಧಿ ವಿಧಾನಗಳನ್ನು ರಚಿಸಿದವರು ಬರೇ ವಾದ ಜಡರಾಗಿರಲಿಲ್ಲ. ಅವರು ಕ್ರಿಯಾಶೀಲರಾಗಿದ್ದು, ತಮ್ಮ ಸಮೀಕ್ಷೆಗಳನ್ನು ಕೇವಲ ಪಾಂಡಿತ್ಯ ಪ್ರದರ್ಶನಕ್ಕಾಗಿ ಅಳವಡಿಸಿಕೊಂಡಿರಲಿಲ್ಲ. ಜ್ಯೋತಿಷದ ಎಲ್ಲ ಅಪೇಕ್ಷೆಗಳಿಂದಲೂ ಪ್ರಶಸ್ತವಾದ ಮುಹೂರ್ತವನ್ನೇ ಇಟ್ಟುಕೊಳ್ಳುವುದು ಅಪೇಕ್ಷಣೀಯವಾದರೂ ಹಲ ಕೆಲವು ವಾಸ್ತವ ಪ್ರತಿಬಂಧಕಗಳೂ ನಿಧಾನ ಮಾಡಲಾಗದಂಥ ತ್ವರಿತ ಪ್ರಸಂಗಗಳೂ ಒದಗಬಹುದು. ಆದ ಕಾರಣ ಒಳ್ಳೆಯ ಲಕ್ಷಣಗಳ ಆಧಿಕ್ಯ ಅಂದರೆ ಗುಣ ಬಾಹುಳ್ಯವುಳ್ಳದ್ದೂ ಸ್ವಲ್ಪ ದೋಷವುಳ್ಳದ್ದೂ ಆದುದಕ್ಕೆ ಪ್ರಾಮುಖ್ಯ ಕೊಟ್ಟಿದೆ. ನೆಂಟನೋ ಇಷ್ಟನೋ ದೂರದ ಊರಿನಲ್ಲಿ ಖಾಯಿಲೆ ಮಲಗಿದ್ದಾನೆ, ಅವನನ್ನು ನೋಡಲು ನೀವು ಹೋಗಬೇಕಾಗಿದೆ. ಆಗ ಜ್ಯೋತಿಷ ಲಕ್ಷಣಗಳನ್ನು ನೋಡುತ್ತ ಕಾದು ಕುಳಿತುಕೊಳ್ಳುವುದಕ್ಕೆ ಆಗುವುದಿಲ್ಲ. ಏಕೆಂದರೆ ತುರ್ತು ಸಮಯದಲ್ಲಿ ಶುಭಮುಹೂರ್ತ ಸಿಕ್ಕುವುದು ಅಸಂಭವ. ಆದರೆ ತೀರ್ಥಯಾತ್ರೆಗಾಗಿಯೋ ಉದ್ಯೋಗದ ಉದ್ದೇಶಕ್ಕಾಗಿಯೋ ಪ್ರಯಾಣ ಕೈಗೊಳ್ಳುವಾಗ ಅಥವಾ ಮದುವೆಗೆ ಹೊರಡುವಾಗ ಒಳ್ಳೆಯ ವೇಳೆಯಲ್ಲಿ ಹೊರಡುವಂತೆ ವ್ಯವಸ್ಥೆಪಡಿಸಿಕೊಳ್ಳಬೇಕು.

ಯಾವ ಶುಭ ಕಾರ್ಯಕ್ಕಾದರೂ 21 ಪ್ರಬಲ ದೋಷಗಳನ್ನು (ಏಕಾವಿಂಶತಿ ಮಹಾದೋಷಗಳು) ನಿವಾರಿಸಿಕೊಳ್ಳಬೇಕೆಂದು ಹೇಳುತ್ತಾರೆ. ಇವಿಷ್ಟು ಮಹಾದೋಷಗಳನ್ನು ನಿವಾರಿಸಿಕೊಳ್ಳುವುದು ಸಾಧ್ಯವಾಗದೆ ಹೋದಾಗ ಗ್ರಹಗತಿಗಳ ದೃಷ್ಟಿಯಿಂದಲಾದರೂ ಸರಿಯೆ. ಆಯಾ ವ್ಯಕ್ತಿಯ ಸಂದರ್ಭ ಪರಿಸ್ಥಿತಿಗಳ ದೃಷ್ಟಿಯಿಂದಲಾದರೂ ಸರಿಯೆ–ಈ ದೋಷಗಳಿಗೆ ನಿವಾರಕಗಳೆಂದು ಹೇಳಿರುವ

ಪರಿಹಾರಗಳ ಪ್ರಯೋಜನವನ್ನು ಪಡೆದುಕೊಳ್ಳತಕ್ಕದ್ದು. ವಾಚಕರ ತಿಳಿವಳಿಕೆಗಾಗಿ ಏಕಾವಿಂಶತಿ ಮಹಾದೋಷಗಳಾವುವೆಂದು ಈಗ ಹೇಳುತ್ತೇವೆ.

*1. ಪಂಚಾಂಗ ಶುದ್ಧಿ :*

ಪಂಚಾಂಗವೆಂದರೆ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳಿಂದ ಕೂಡಿರುವುದು ಎಂದು. ಈ ಮುಂಚೆಯೇ ತಿಳಿಸಿದ್ದೇನೆ. ಇವಿಷ್ಟು ಶುಭಪ್ರದವಾಗಿರಬೇಕು. ಚಾಂದ್ರಮಾನದ ತಿಥಿಗಳ ಪೈಕಿ ಚೌತಿ, ಷಷ್ಠಿ, ಅಷ್ಟಮಿ, ದ್ವಾದಶಿ, ಚತುರ್ದಶಿ, ಪೂರ್ಣಿಮೆ, ಅಮಾವಾಸ್ಯೆಗಳನ್ನು ಬಿಡತಕ್ಕದ್ದು. ವಾರಗಳ ಪೈಕಿ ಗುರುವಾರ, ಶುಕ್ರವಾರಗಳು ಯಾವ ಕಾರ್ಯಕ್ಕಾದರೂ ಶುಭ. ಮಂಗಳವಾರವನ್ನು ಸಾರ್ವತ್ರಿಕವಾಗಿ ಬಿಡಬೇಕು. ಅದಕ್ಕಿರುವ ಒಂದೇ ವಿನಾಯಿತಿ ಎಂದರೆ ಹೊಸದಾಗಿ ಹುಟ್ಟಿದ ಮಗುವಿಗೆ ನಾಮಕರಣ ಮಾಡಬೇಕಾಗಿ ಬಂದಾಗ, ಹುಟ್ಟಿದ ದಿವಸದಿಂದ 10,12 ಅಥವಾ 16ನೇ ದಿವಸವು ಮಂಗಳವಾರವಾಗುವ ಪಕ್ಷಕ್ಕೆ ಆವತ್ತು ನಾಮಕರಣವನ್ನು ಮಾಡಬಹುದು. ನಕ್ಷತ್ರಗಳ ಪೈಕಿ ಭರಣಿ ಕೃತ್ತಿಕೆಗಳನ್ನು ಸರ್ವಥಾ ಕೈಬಿಡತಕ್ಕದ್ದು. ಏಕೆಂದರೆ ಅವೆರಡು ನಕ್ಷತ್ರಗಳ ಅಧಿದೇವತೆಗಳು ಕ್ರಮವಾಗಿ ಯಮ ಮತ್ತು ಅಗ್ನಿ. ತುಂಬ ತ್ವರಿತವಾದ ಪ್ರಸಂಗಗಳಲ್ಲಿ ಯಾವುದಾದರೂ ಮುಹೂರ್ತವಿಡಬೇಕಾಗಿ ಬಂದರೆ, ಮುಹೂರ್ತ ಲಗ್ನವನ್ನು ಬೇರೆ ರೀತಿಯಲ್ಲಿ ಬಲಪಡಿಸಲು ಸಾಧ್ಯವಾದಾಗ ನಕ್ಷತ್ರ ದೋಷವನ್ನು ನಿಷ್ಕ್ರಿಯಗೊಳಿಸಬಹುದು. ಆಶ್ಲೇಷ, ಜ್ಯೇಷ್ಠ, ರೇವತಿಗಳ ಕಡೆ ಭಾಗಗಳನ್ನು ನಿವಾರಿಸಬೇಕು. ಯೋಗದ ಬಗ್ಗೆ (ಪುಟ)ಹೇಳುವುದಾದರೆ, 6ನೇ ಅತಿ ಗಂಡ, 9ನೇ ಶೂಲ, 10ನೇ ಗಂಡ, 17ನೇ ವ್ಯತಿಪಾತ ಮತ್ತು 27ನೆಯ ವೈಧೃತಿ ಇವು. ಅವುಗಳ ಚಾಲ್ತಿಯಲ್ಲಿರುವ ವೇಳೆಯಲ್ಲಿ ಪ್ರಾರಂಭವಾಗುವ ಕಾರ್ಯದ ಮೇಲೆ ವಿಘಾತಕ ಪರಿಣಾಮವನ್ನು ಉಂಟುಮಾಡುತ್ತವೆ. ಕರಣವಾದರೋ ಮುಹೂರ್ತದ ಉದ್ದೇಶಕ್ಕೆ ಅನುಗುಣವಾಗಿರಬೇಕು. ಬಾವಕರಣವು ಶಾಶ್ವತವಾದ ಕಾರ್ಯಗಳನ್ನು ಪ್ರಾರಂಭಿಸಲು ಪ್ರಶಸ್ತವಾದುದಾದರೆ ತೈತಿಲ ಕರಣವು ಮದುವೆಗೆ ಪ್ರಶಸ್ತ. ಭದ್ರವು ಯಾವ ಶುಭ ಕಾರ್ಯಾರಂಭಕ್ಕೂ ಪ್ರಯೋಜಕವಾಗುವುದಿಲ್ಲ. ಆದರೆ ಘೋರ ಕ್ರೂರ ಕರ್ಮಗಳಿಗೆ ತಕ್ಕುದು. ಕ್ಷುದ್ರ ಮಂತ್ರೋಪದೇಶಕ್ಕೆ ಶಕುನಿ ಕರಣ ತುಂಬ ಪ್ರಶಸ್ತ.

ಆದ ಕಾರಣ ಪಂಚಾಂಗ ಶುದ್ಧಿ ಎಂದರೆ ಒಳ್ಳೆಯ ತಿಥಿ. ಶುಭದಾಯಕವಾದ ವಾರ, ಪ್ರಶಸ್ತವಾದ ನಕ್ಷತ್ರ, ಒಳ್ಳೆ ಯೋಗ ಮತ್ತು ಫಲಪ್ರದವಾದ ಕರಣ.

*2. ಸೂರ್ಯ ಸಂಕ್ರಮಣ:*

ಎರಡನೇ ಮಹಾದೋಷವೆಂದರೆ ಸಂಕ್ರಮಣ ಕಾಲ. ಸೂರ್ಯನು ಒಂದು ರಾಶಿಯನ್ನು ಬಿಟ್ಟು ಮುಂದಿನ ರಾಶಿಯನ್ನು ಪ್ರವೇಶಿಸುವ ಕಾಲದಲ್ಲಿ ಸೌರಶಕ್ತಿಗಳ ವ್ಯವಸ್ಥೆಯಲ್ಲಿ ಪಲ್ಲಟವುಂಟಾಗುತ್ತದೆ. ಅಂಥ ಕಾಲವನ್ನು ಸತ್ಕಾರ್ಯಗಳಾವುದಕ್ಕೂ ವಿಧಿಸುವುದಿಲ್ಲ. ಬದಲಾಗಿ, ಅಂಥ ಕಾಲವು ಧ್ಯಾನ, ಬೀಜ ಮಂತ್ರೋಪದೇಶ, ದೇಹದಿಂದ ಹೊರಡುವ ವಿದ್ಯುತ್ ವಿಸರ್ಜನೆಗಳನ್ನಷ್ಟೇ ಅಲ್ಲದ ಮಾನಸಿಕವಾದ ಪ್ರವಾಹಗಳನ್ನು ಶುದ್ಧಿಪಡಿಸಲು ಕೈಕೊಳ್ಳುವ ಹೋಮ ಹವನಾದಿಗಳು ಇವುಗಳಿಗೆ ಪ್ರಶಸ್ತ. ಸೂರ್ಯನು ಹೊಸ ರಾಶಿಯನ್ನು ಪ್ರವೇಶಿಸುವುದಕ್ಕೆ 16 ಗಳಿಗೆ (6ಗಂಟೆ 24 ನಿಮಿಷ) ಮುಂಚೆ ಮತ್ತು ತರುವಾಯ ಯಾವ ಶುಭ ಕಾರ್ಯವನ್ನೂ ಕೈಕೊಳ್ಳಕೂಡದು.

*3. ಕರ್ತರಿದೋಶ :*

ಕರ್ತರಿ ಅಂದರೆ ಕತ್ತರಿ. ಮುಹೂರ್ತ ಲಗ್ನದ ಎರಡು ಕಡೆಯೂ ದುಷ್ಟ ಗ್ರಹಗಳಿದ್ದರೆ, ಆ ಯೋಗಕ್ಕೆ ಕರ್ತರಿ ದೋಷವೆನ್ನುತ್ತಾರೆ. ಆ ಸಮಯವನ್ನು ಎಲ್ಲ ಒಳ್ಳೆ ಕೆಲಸಗಳಿಗೂ ವಿಶೇಷತಃ ಮದುವೆಗೆ ಬಿಡತಕ್ಕದ್ದು.

*4. ಷಷ್ಠಾಷ್ಟರಿಫಗತ ಚಂದ್ರದೋಷ :*

ಮುಹೂರ್ತ ಲಗ್ನದಿಂದ ಆರನೆ ಮನೆ, ಎಂಟನೇ ಮನೆ, ಹನ್ನೆರಡನೇ ಮನೆಗಳಲ್ಲಿ ಚಂದ್ರನಿದ್ದರೆ, ಅದನ್ನು ಸರ್ವಥಾ ತ್ಯಜಿಸಬೇಕು.

*5. ಸಗ್ರಹ ಚಂದ್ರದೋಷ :*

ಚಂದ್ರನು ಶುಭಾಶುಭ ಗ್ರಹ ಯಾವುದರ ಜತೆಗೂ ಇರಕೂಡದು. ಇದನ್ನು ವಿಶೇಷತಃ ಮದುವೆ ಮುಹೂರ್ತದಲ್ಲಿ ಕಟ್ಟುನಿಟ್ಟಾಗಿ ಪಾಲಿಸಬೇಕು.

*6. ಉದಯಾಸ್ತ ಶುದ್ಧಿ:*

ಮುಹೂರ್ತ ಲಗ್ನವೂ ಸಪ್ತಮವೂ ಬಲಯುತವಾಗಿರಬೇಕು. ಲಗ್ನದಲ್ಲಿ ಲಗ್ನಾಧಿಪತಿಯಿರಬೇಕು. ನವಾಂಶ ಲಗ್ನದಲ್ಲಿ ನವಾಂಶ ಲಗ್ನಾಧಿಪತಿಯಿರಬೇಕು. ಅಥವಾ ಲಗ್ನದಲ್ಲಿ ನವಾಂಶ ಲಗ್ನಾಧಿಪತಿ ಮತ್ತು ನವಾಂಶ ಲಗ್ನದಲ್ಲಿ ಲಗ್ನಾಧಿಪತಿ ಇರಬೇಕು. ಇದೇ ರೀತಿಯಲ್ಲಿ ಏಳನೇ ಮನೆಯೂ ಏಳರ ಅಧಿಪತಿಯೂ ಅನುಕೂಲರಾಗಿರಬೇಕು. ಲಗ್ನ ಮತ್ತು ಸಪ್ತಮ ಎಲ್ಲ ಮುಹೂರ್ತಗಳಿಗೂ ವಿಶೇಷತಃ ಮದುವೆಗೆ ಬಲಯುತವಾಗಿರಬೇಕು.

*7. ದುರ್ಮುಹೂರ್ತ:*

ಮುಹೂರ್ತ ಎಂದರೆ ಪಾರಿಭಾಷಿಕಾರ್ಥದಲ್ಲಿ ಎರಡು ಗಳಿಗೆ ಅಂದರೆ 48

ನಿಮಿಷ. ಒಂದು ನಾಕ್ಷತ್ರಿಕ ದಿನಮಾನದಲ್ಲಿ 30 ಮುಹೂರ್ತಗಳಿರುತ್ತವೆ. ಅವುಗಳ ಪೈಕಿ 15 ದಿನ ಮುಹೂರ್ತಗಳು. ಅವು ಯಾವುವೆಂದರೆ (1) ರುದ್ರ, (2) ಅಹಿ, (3) ಮಿತ್ರ, (4) ಪಿತ್ರ, (5)ವಸು, (6) ವರ, (7) ವಿಶ್ವೇದೇವ, (8) ನಿಧಿ, (9) ಶತಮುಖಿ, (10) ಪುರುಹೃತ, (11) ವಹ್ನಿ, (12) ನಕ್ತಂಚರ, (13) ವರುಣ, (14) ಆರ್ಯಮಾ, (15) ಭಗ. ರಾತ್ರಿ ಮುಹೂರ್ತಗಳು (1) ಗಿರೀಶ, (2) ಅಜೀತಾಪ, (3) ಅಹಿರ್ಬುಧ್ನ್ಯ, (4)ಪೂಕ್ಷ, (5) ಅಶ್ವ, (6)ಯಮ, (7) ಅಗ್ನಿ (8) ವಿಧಾತ್ರ, (9) ಚಂಡ, (10) ಅದಿರೆ, (11) ಜೀವ, (12) ವಿಷ್ಣು (13) ಯುಮಿಗದ್ಯುತಿ, (14) ತ್ವಷ್ಟ್ರ, (15) ಸಂದ್ರಂ.

ದಿನ ಮುಹೂರ್ತಗಳ ಪೈಕಿ ಮೊದಲನೆ, ಎರಡನೆ, ನಾಲ್ಕನೆ, ಹತ್ತನೆ, ಹನ್ನೊಂದನೆ, ಹದಿನೈದನೆಯವು ಅಶುಭ. ರಾತ್ರಿ ಮುಹೂರ್ತಗಳ ಪೈಕಿ ಒಂದನೆ, ಆರನೆ, ಏಳನೆಯವು ಅಶುಭ.

ಮುಹೂರ್ತ ನಿಷ್ಕರ್ಷಿಸುವಾಗ, ದಿನಮಾನ ರಾತ್ರಿಮಾನಗಳನ್ನು ಖಚಿತವಾಗಿ ಕಂಡುಹಿಡಿಯಬೇಕು. ದಿನಮಾನ ರಾತ್ರಿ ಮಾನಗಳೆರಡೂ ತಲಾ 12 ಗಂಟೆ ಅಥವಾ 30 ಗಳಿಗೆಗಳಾಗಿದ್ದ ಪಕ್ಷದಲ್ಲಿ ಪ್ರತಿ ಮುಹೂರ್ತದ ಅವಧಿಯೂ 2 ಗಳಿಗೆ ಅಥವಾ 48 ನಿಮಿಷಗಳಷ್ಟಾಗುತ್ತದೆ. ದಿನಮಾನವು 28ಗಳಿಗೆ ಆದರೆ ಒಂದು ದಿನಮುಹೂರ್ತದ ಅವಧಿಯು 1 ಗಳಿಗೆ 52 ವಿಗಳಿಗೆಗಳಾಗುತ್ತದೆ.

ಶುಭಾಶುಭ ಮುಹೂರ್ತಗಳೆಂಬ ವಿಂಗಡನೆಯಿರುವುದಷ್ಟೇ ಅಲ್ಲದೆ ವಿವಿಧ ವಾರ ದಿವಸಗಳಲ್ಲಿ ಕೆಲವು ಮುಹೂರ್ತಗಳು ಅಶುಭಗಳೆನಿಸುತ್ತವೆ. ಭಾನುವಾರ ಚತುರ್ದಶಿ ಆದರೆ ಅರ್ಯಮ; ಸೋಮವಾರ ಅಷ್ಟಮಿಯಾದರೆ ವಿಧಿ ಮತ್ತು ದ್ವಾದಶಿಯಾದರೆ ವಹ್ನಿ; ಮಂಗಳವಾರ ಚೌತಿಯಾದರೆ ಪಿತ್ರ ಮತ್ತು ಏಕಾದಶಿಯಾದರೆ ವಹ್ನಿ; ಬುಧವಾರ ಅಭಿಜಿತ್, ಗುರುವಾರ ದ್ವಾದಶಿಯಾದರೆ ನಕ್ತಂಚರ ಮತ್ತು ತ್ರಯೋದಶಿಯಾದರೆ ವರುಣ; ಶುಕ್ರವಾರ ಚೌತಿಯಾದರೆ ಪಿತ್ರ ಮತ್ತು ಅಷ್ಟಮಿಯಾದರೆ ವಿಧಿ, ಶನಿವಾರ ಪಾಡ್ಯವಾದರೆ ರುದ್ರ ಮತ್ತು ಬಿದಿಗೆಯಾದರೆ ಅಹಿ – ಇವು ತ್ಯಾಜ್ಯ.

ವಿಶೇಷತಃ ಮದುವೆಗಳಿಗೆ ಮೇಲೆ ಹೇಳಿರುವ ವಾರಗಳಲ್ಲಿ ಬರುವ ಮುಹೂರ್ತಗಳನ್ನು ಅಶುಭವೆಂದು ನಿರಾಕರಿಸಬೇಕು.

*8. ಗಂಡಾಂತರ:*

ಶುಕ್ಲಪಕ್ಷದ ಪಂಚಮಿ ದಶಮಿ ಮತ್ತು ಪೂರ್ಣಿಮೆಗಳ ಕಡೆ ಎರಡು ಗಳಿಗೆ (48 ನಿಮಿಷ) ಗಳೂ ಕೃಷ್ಣಪಕ್ಷದ ಪಾಡ್ಯಮಿ ಷಷ್ಠಿ ಏಕಾದಶಿಗಳ ಮೊದಲ

ಎರಡು ಗಳಿಗೆಗಳೂ ತಿಥಿ ಗಂಡಾಂತರಗಳೆನಿಸುತ್ತವೆ. ಅವನ್ನು ಎಲ್ಲ ಶುಭಕಾರ್ಯಗಳಿಗೂ ತ್ಯಜಿಸಬೇಕು. ಅದೇ ರೀತಿಯಲ್ಲಿ ಕರ್ಕಾಟಕ, ವೃಶ್ಚಿಕ, ಮೀನ ಮಾಸಗಳ ಕಡೆಯ ಎರಡು ಗಳಿಗೆಗಳೂ ಸಿಂಹ, ಧನಸ್ಸು, ಮೇಷಗಳ ಮೊದಲೆರಡು ಗಳಿಗೆಗಳೂ ಅಶುಭಗಳು. ಅಶ್ಲೇಷ, ಜ್ಯೇಷ್ಠ, ಮೂಲ, ರೇವತಿ ಮತ್ತು ಅಶ್ವಿನಿ ನಕ್ಷತ್ರಗಳ ಕಡೆಯ ಗಳಿಗೆಯು ಮಖ ನಕ್ಷತ್ರ ಮೊದಲ ನಾಲ್ಕು ಗಳಿಗೆಗೂ ಒಳ್ಳೆಯ ಕೆಲಸಗಳಿಗೆ ವಿಫಲಕಾರಿ.

*ಪಾಪಷಡ್ವರ್ಗ:* ಮುಹೂರ್ತ ಲಗ್ನದಲ್ಲಿ ಅಶುಭ ಗ್ರಹಗಳು ಷಡ್ವರ್ಗ ಬಲ ತಡೆದಿರಕೂಡದು.

10. *ಭೃಗು ಷಟ್ಕ :*

ಶುಕ್ರ ಆರನೇ ಮನೆಯಲ್ಲಿದ್ದರೆ ಅಪಾಯಕಾರಿ. ಇದು ಮದುವೆಗೆ ವಿಶೇಷತಃ ಅನ್ವಯವಾಗುತ್ತದೆ. ಷಷ್ಠದಲ್ಲಿರುವಾಗ ಶುಕ್ರನು ಉಚ್ಚನಾಗಿ ಶುಭ ಗ್ರಹಗಳಿಂದ ಕೂಡಿದ್ದರೂ ಮಾನ್ಯವಲ್ಲ.

11. *ಕುಜಾಷ್ಟಮ :*

ಕುಜನು ಅಷ್ಟಮದಲ್ಲಿರುವುದನ್ನು ನಿವಾರಿಸಬೇಕು. ಕುಜನ ಆಸ್ಥಾನ ಉದ್ದೇಶ ಭಂಗವನ್ನುಂಟು ಮಾಡುತ್ತದೆ. ಮದುವೆ ಮುಹೂರ್ತದಲ್ಲಂತೂ ಅಷ್ಟಮ ಕುಜ ಕೂಡಲೇ ಕೂಡದು. ಬೇರೆ ರೀತಿಯಿಂದ ಕುಜ ಬಲಯುತನಾಗಿದ್ದರೂ ಕೂಡ ಅವನು ಅಷ್ಟಮದಲ್ಲಿರಕೂಡದು.

12. *ಅಷ್ಟಮ ಲಗ್ನದೋಷ :*

ಮದುವೆ ಮುಹೂರ್ತವನ್ನು ಗೊತ್ತು ಮಾಡುವಾಗ, ಮುಹೂರ್ತ ಲಗ್ನವು ವಧೂವರರ ಜನ್ಮ ಲಗ್ನದಿಂದ ಅಷ್ಟಮವಾಗಿರದಂತೆ ನೋಡಿಕೊಳ್ಳಬೇಕು. ಉದಾಹರಣೆಗೆ ವಧೂವರರು ಕ್ರಮವಾಗಿ ಮಕರ, ಕುಂಭಗಳಲ್ಲಿ ಹುಟ್ಟಿದವರು ಎನ್ನಿ. ಅವರ ಮದುವೆಯ ಮುಹೂರ್ತದಲ್ಲಿ ಲಗ್ನವು ಕನ್ಯಾ ಅಥವಾ ಸಿಂಹವಾಗಿರಕೂಡದು. ಅವೆರಡೂ ವಧೂವರರ ಜನ್ಮ ಲಗ್ನದಿಂದ ಎಂಟನೆಯದಾಗುತ್ತದೆ.

13. *ರಾಶಿ ವಿಷ ಘಟಿಕ :*

ಬೇರೆ ಕಡೆ (ಲಗ್ನ ತ್ಯಾಜ್ಯ ವಿವರಿಸುವಾಗ ) ವಿವಿಧ ಲಗ್ನಗಳಲ್ಲಿ ಬಿಡಬೇಕಾದ ವೇಳೆಗಳನ್ನು ಕೊಟ್ಟಿದೆಯಷ್ಟೆ. ಎಲ್ಲ ಶುಭ ಕಾರ್ಯಗಳಿಗೂ ಅವನ್ನು ತ್ಯಜಿಸಬೇಕು.

14. *ಕುನವಾಂಶ ದೋಷ :*

ಶುಭ ಕಾರ್ಯಕ್ಕಾಗಿ ಗೊತ್ತುಪಡಿಸಿರುವ ಲಗ್ನವು ಅಶುಭ ಗ್ರಹದ ನವಾಂಶವಾಗಿರಕೂಡದು.

15. *ವಾರದೋಷ :*

ಇದನ್ನು ಆಗಲೇ 4 ಪುಟದಲ್ಲಿ ವಿವರಿಸಿದೆ. ಇಂಥಿಂಥ ವಾರಗಳನ್ನು ಇಂಥಿಂಥ ಕೆಲಸಗಳಿಗೆ ತಿರಸ್ಕರಿಸಬೇಕೆಂದು ಹೇಳಿದ್ದೇವೆ.

16. *ಗ್ರಹಣೋತ್ಪಾತ ದೋಷ :*

ಯಾವ ನಕ್ಷತ್ರದಲ್ಲಿ ಗ್ರಹಣವುಂಟಾಗುತ್ತದೆಯೋ ಅವನ್ನು ಕೈಬಿಡಬೇಕು. ಮದುವೆಗೆ ಅಂಥ ನಕ್ಷತ್ರಗಳನ್ನು ಆರು ತಿಂಗಳ ಕಾಲ ತ್ಯಜಿಸಬೇಕು.

17. *ಏಕಾರ್ಗಲ ದೋಷ :*

ಇದು ಹಗಲುಹೊತ್ತು ಮಾತ್ರ ಪ್ರಬಲವಾಗಿರುತ್ತದೆ. ವಿಷ್ಕಂಭ ಮುಂತಾದ ಯೋಗಗಳ ಕಾಲದಲ್ಲಿ ಪ್ರಾರಂಭಿಸಿದ ಕೆಲಸಗಳಿಗೆ ಅನ್ವಯವಾಗುತ್ತದೆ. ಇದು ಅಷ್ಟು ಮುಖ್ಯವಲ್ಲದ ಕಾರಣ, ವಿವರಗಳು ಅನಾವಶ್ಯಕ.

18. *ಕ್ರೂರ ಸಂಯುತ ದೋಷ :*

ಸೂರ್ಯನು ಯಾವ ನಕ್ಷತ್ರದಲ್ಲಿರುತ್ತಾನೋ ಆ ನಕ್ಷತ್ರ ಮತ್ತು ಅದರ ಹಿಂದಿನ ಮುಂದಿನ ನಕ್ಷತ್ರಗಳು ಯಾವ ಸತ್ಕಾರ್ಯ ಮಾಡುವುದಕ್ಕಾದರೂ ಅಶುಭವೆನಿಸುತ್ತವೆ. ಮದುವೆಗೆ ಅವನ್ನು ಬಿಡಬೇಕು.

19. *ಅಕಾಲ ವರ್ಜಿತ ವೃಷ್ಟಿ ದೋಷ :*

ಮಳೆ ಗುಡುಗು ಅಕಾಲದಲ್ಲಿ ಒದಗಿದರೆ ಆ ಕಾಲವನ್ನು ಒಳ್ಳೆ ಕೆಲಸಗಳಿಗೆ ನಿವಾರಿಸಿಕೊಳ್ಳಬೇಕು.

20. *ಮಹಾಪಾತ ದೋಷ :*

ಸಮಭಾಜಕ ವೃತ್ತದ ಒಂದು ಕಡೆಗೆ ಸೂರ್ಯ ಚಂದ್ರರಿಬ್ಬರೂ ಸಮನಾಗಿದ್ದರೆ, ಅದಕ್ಕೆ ವ್ಯತೀಪಾತ ಎಂದು ಹೆಸರು. ಈ ದೃಷ್ಟಿ ತುಂಬ ಕೆಟ್ಟದ್ದು. ಎಲ್ಲ ಒಳ್ಳೆ ಕೆಲಸಗಳಿಗೂ ಇದು ವರ್ಜ್ಯ.

21. *ವೃಧ್ಯತಿ ದೋಷ :*

ಇದೂ ಒಂದು ಕೆಟ್ಟಯೋಗ (ದೃಷ್ಟಿ). ಒಳ್ಳೆಯ ಕೆಲಸ ಕಾರ್ಯಗಳಿಗೆ ಇದನ್ನು ನಿವಾರಿಸಿಕೊಳ್ಳಬೇಕು.

ಮುಹೂರ್ತವನ್ನು ಕುರಿತು ಶಾಸ್ತ್ರಗ್ರಂಥಗಳಲ್ಲಿ ಹೇಳಿರುವ ಎಲ್ಲ ದೋಷಗಳನ್ನು ನಾನು ಇಲ್ಲಿ ಸ್ಪಷ್ಟವಾಗಿ ವಿವರಿಸಿದ್ದೇನೆ. ಕುರಿತುಕೊಂಡ ಕೆಲಸವು

ಫಲಕಾರಿಯಾಗುವುದಕ್ಕಾಗಿ ಶುಭ ಮುಹೂರ್ತವನ್ನು ಆರಿಸಿಕೊಳ್ಳಬೇಕಾದರೆ ಇಷ್ಟೆಲ್ಲ ದೋಷಗಳನ್ನು ನಿವಾರಿಸಿಕೊಳ್ಳಬೇಕಲ್ಲ ಎಂದು ವಾಚಕರು ಗಾಬರಿಗೊಳ್ಳಬೇಕಾಗಿಲ್ಲ. ಮನುಷ್ಯ ಎದುರಿಸಬೇಕಾದ ದುಷ್ಟ ಶಕ್ತಿಗಳು ಅಥವಾ ಗ್ರಹಗಳು ಹೊರಚೆಲ್ಲುವ ಪ್ರತಿಕೂಲ ಕಂಪನಗಳು ಆಗಾಧವಾದಷ್ಟೇನೋ ಇವೆ. ಅವು ಕೆಲವೊಂದು ನಿರ್ಧಿಷ್ಟವಾದ ಮಾನವ ಕಾರ್ಯಗಳಿಗೆ ವಿಘ್ನಕಾರಿಗಳಾಗುವ ಕೆಟ್ಟ ಪ್ರಭಾವಗಳಾಗಿದ್ದು ಮಹಾದೋಷಗಳೆನಿಸುತ್ತವೆ. ಆದರೂ ಈ ದೋಷ ಪ್ರಕರಣಗಳಿಗೆ ಹಲವಾರು ವಿನಾಯಿತಿಗಳು ಇವೆ. ಸರಿಯಾದ ಮುಹೂರ್ತವನ್ನು ಇಡುವಾಗ ಲಗ್ನವನ್ನು ಬಲಪಡಿಸಿಕೊಳ್ಳುವುದರ ಮೂಲಕ ಮಹಾದೋಷಗಳನ್ನು ನಿವಾರಿಸಿಕೊಳ್ಳಬೇಕೆಂದೂ ವಿನಾಯಿತಿಗಳ ಪ್ರಯೋಜನವನ್ನು ಪಡೆದುಕೊಂಡು ಅಲ್ಪಸ್ವಲ್ಪವಾದ ದೋಷಗಳನ್ನು ಕಡೆಗಾಣಬೇಕೆಂದೂ ಸದಾ ನೆನಪಿನಲ್ಲಿಟ್ಟುಕೊಳ್ಳತಕ್ಕದ್ದು.

ಮೇಲೆ ಹೇಳಿರುವ ಪ್ರತಿಕೂಲ ಯೋಗಗಳು ನಿಷ್ಕ್ರಿಯಗೊಳಿಸುವಂಥ ನಿವಾರಣೋಪಾಯಗಳನ್ನು ಮುಂದೆ ಸೂಚಿಸುತ್ತೇವೆ.

1. ಲಗ್ನ ತ್ಯಾಜ್ಯವೆಂದು ಮೇಲೆ ಸೂಚಿಸಿರುವುದು ಕೆಲವು ದಿವಸಗಳಲ್ಲಿ ಮಾತ್ರ ಅನ್ವಯವಾಗುತ್ತದೆ. ಮೊದಲ ನವಾಂಶಕ್ಕೆ ಬುಧವಾರ ಮತ್ತು ಶನಿವಾರ, ನಡುವಣ ನವಾಂಶಕ್ಕೆ – ಸೋಮವಾರ ಮತ್ತು ಶುಕ್ರವಾರ. ಕಡೆಯ ನವಾಂಶಕ್ಕೆ – ಮಂಗಳವಾರ, ಗುರುವಾರ ಮತ್ತು ಭಾನುವಾರ. ಇತರೆ ದಿವಸಗಳಲ್ಲಿ ತ್ಯಾಜ್ಯವು ಅರ್ಥಹೀನವಾಗುತ್ತದೆ.

2. ಚಂದ್ರಾಷ್ಟಮವು ಶುಕ್ಲಪಕ್ಷದಲ್ಲಿ ದೋಷವಿಲ್ಲ. ಅದು ಶುಭ ರಾಶಿಯಲ್ಲಿ ಶುಭ ನವಾಂಶದಲ್ಲಿ ಒದಗಬೇಕು. ಇಲ್ಲವೆ. ತಾರಾಬಲವಿರಬೇಕು. ಚಂದ್ರನೂ ಅಷ್ಟಮಾಧಿಪತಿಯೂ ಮಿತ್ರರಾದಾಗ ದೋಷವಿರುವುದಿಲ್ಲ.

3. ಮಂಗಳವಾರ ಮಧ್ಯಾಹ್ನಾನ್ನರ ದೋಷವಲ್ಲ.

4. ವ್ಯತೀಪಾತ ವೈಧೃತಿ ಮುಂತಾದ ಕೆಟ್ಟ ದೃಷ್ಟಿಗಳು ಮಧ್ಯಾಹ್ನ ಆದ ಮೇಲೆ ನಷ್ಟವಾಗುತ್ತವೆ.

5. ಮುಹೂರ್ತ ಲಗ್ನದಲ್ಲಿ ಯಾವ ವಾರಾಧಿಪತಿಯು ಪ್ರಬಲನಾಗಿರುತ್ತಾನೋ ಆ ವಾರ ದೋಷರಹಿತವಾದುದು.

6. ಮುಹೂರ್ತ ಲಗ್ನದಲ್ಲಿ ಶುಕ್ರ, ಬುಧ, ಗುರು ಯಾವ್ದಿದ್ದರೂ ಎಲ್ಲ ದೋಷಗಳು ನಿವಾರಣೆ ಆಗುತ್ತವೆ.

7. ಗುರುವು ಲಗ್ನ ನವಾಂಶ ಅಶುಭ ದೃಷ್ಟಿಗಳೇ ಮುಂದಾಗಿ ಎಲ್ಲವನ್ನೂ ಪರಿಹರಿಸಿ ಲಗ್ನವನ್ನು ಸರ್ವಥಾ ಪ್ರಶಸ್ತವನ್ನಾಗಿ ಮಾಡಬಲ್ಲ ಸಾಮರ್ಥ್ಯ ಪಡೆದಿದ್ದಾನೆ.

8. ಜಾತಕದಲ್ಲಿರುವ ದೋಷಗಳಿಗೆ ನಿವಾರಕವಾಗಿ ಹನ್ನೊಂದನೇ ಮನೆಯಯಲ್ಲಿ ಚಂದ್ರನೋ ರವಿಯೋ ಇದ್ದರೆ ಸಾಕು.

9. ಕೇಂದ್ರಗಳು ಪ್ರಬಲವಾಗಿದ್ದರೆ, ದುಷ್ಟಶಕ್ತಿಗಳ ದಮನವಾಗುತ್ತವೆ.

10. ಲಗ್ನದಲ್ಲಿ ಯಾವ ಗ್ರಹವಾದರೂ ಉಚ್ಚನಾಗಿದ್ದರೆ, ಅದು ಇತರೆ ದೋಷಗಳನ್ನೆಲ್ಲ ಹೋಗಲಾಡಿಸುತ್ತದೆ.

11. ಕೇಂದ್ರದಲ್ಲಿ ಗುರು ಅಥವಾ ಶುಕ್ರ, ಮೂರನೇ ಆರನೇ ಅಥವಾ ಹನ್ನೊಂದನೇ ಮನೆಯಲ್ಲಿ ಅಶುಭ ಗ್ರಹಗಳು ಇದ್ದರೆ ತಿಥಿ, ವಾರ, ನಕ್ಷತ್ರ ಯೋಗಗಳ ಪ್ರತಿಕೂಲ ಪ್ರಭಾವಗಳನ್ನು ಕಡಿದುಹಾಕುತ್ತವೆ.

ಈ ರೀತಿಯಾಗಿ ಮುಹೂರ್ತ ನಿಷ್ಕರ್ಷೆಯಲ್ಲಿ ಅತ್ಯಂತ ಪ್ರಬಲವಾದ ಪ್ರಶ್ನೆಯೆಂದರೆ ಲಗ್ನವು ಪ್ರಬಲವಾಗಿರಬೇಕು ಮತ್ತು ಲಗ್ನಾಧಿಪತಿ ಬಲಶಾಲಿಯಾಗಿರಬೇಕು.

ಆರನೇ ಅಧ್ಯಾಯ

# ಕೆಲವು ವಿಶೇಷವಾದ ಯೋಗಗಳು

ಯಾವುದಾದರೂ ಒಂದು ವಾರ ಇಂಥ ತಿಥಿ ಇಂಥ ನಕ್ಷತ್ರಗಳ ಜತೆಗೂಡಿದರೆ, ಒಳ್ಳೆಯ ಕೆಲಸಕ್ಕೆ ಶುಭಕರವಾಗುತ್ತದೆ. ಈ ಅಧ್ಯಾಯದಲ್ಲಿ ಇಂಥ ಕೆಲವು ವಿಶಿಷ್ಟವಾದ ಒಂದುಗೂಡುವಿಕೆಗಳನ್ನು ಕೊಡುತ್ತೇನೆ. ಅವನ್ನು ಸಿದ್ಧಯೋಗಗಳು ಎನ್ನುತ್ತಾರೆ.

ಭಾನುವಾರವು ಪಾಡ್ಯ ಚೌತಿ ಷಷ್ಠಿ ಸಪ್ತಮ ಇಲ್ಲವೆ ದ್ವಾದಶಿಗಳೊಡನೆಯೂ ಪುಷ್ಯ, ಹಸ್ತ, ಉತ್ತರ, ಉತ್ತರಾಷಾಢ ಮೂಲ ಶ್ರವಣ ಅಥವಾ ಉತ್ತರಾಭಾದ್ರಗಳೊಡನೆಯೂ ಕೂಡಿದರೆ ಸಿದ್ಧಯೋಗಕ್ಕೆ ಎಡೆಕೊಡುತ್ತದೆ.

ಸೋಮವಾರವು ಬಿದಿಗೆ ಸಪ್ತಮಿ ಅಥವಾ ದ್ವಾದಶಿಗಳ ಜತೆಗೆ ರೋಹಿಣಿ ಮೃಗಶಿರ ಪುನರ್ವಸು ಚಿತ್ರ, ಶ್ರವಣ ಶತಭಿಷ ಧನಿಷ್ಠ ಇಲ್ಲವೆ ಪೂರ್ವಾಭಾದ್ರ ಪದ ನಕ್ಷತ್ರಗಳೊಡಗೂಡಿದರೆ ಸಿದ್ಧಯೋಗಉಂಟಾಗುತ್ತದೆ.

ಮಂಗಳವಾರವು ಅಶ್ವಿನಿ ಮೃಗಶಿರ ಚಿತ್ತ ಅನೂರಾಧ ಮೂಲ ಉತ್ತರ ಧನಿಷ್ಠ ಅಥವಾ ಪೂರ್ವಾಭಾದ್ರ ಸಹಿತವಾದರೆ ಸಿದ್ಧಯೋಗವುಂಟಾಗುತ್ತದೆ.

ಬುಧವಾರವು ಭದ್ರ ಜಯಗಳ ಜತೆಗೂಡಿ ರೋಹಿಣಿ, ಮೃಗಶಿರ, ಆರ್ದ್ರ, ಉತ್ತರ, ಉತ್ತರಾಷಾಢಾ ಅಥವಾ ಅನೂರಾಧಾ ಸಹಿತವಾದರೆ ಸಿದ್ಧಯೋಗವು ಒದಗುತ್ತದೆ.

ಗುರುವಾರವು ಚೌತಿ ಪಂಚಮಿ ಸಪ್ತಮಿ ನವಮಿ ತ್ರಯೋದಶಿ ಅಥವಾ ಚತುರ್ದಶಿಗಳೊಡಗೂಡಿ ಮಖ, ಪುಷ್ಯ, ಪುನರ್ವಸು, ಸ್ವಾತಿ, ಪೂರ್ವಾಷಾಢಾ, ಪೂರ್ವಾಭಾದ್ರ, ರೇವತಿ, ಅಶ್ವಿನಿ ಸಮೇತವಾಗಿದ್ದರೆ ಸಿದ್ಧಯೋಗವಾಗುತ್ತದೆ.

ಶುಕ್ರವಾರವು ಅಶ್ವಿನಿ, ಭರಣಿ, ಆರ್ದ್ರ, ಉತ್ತರ, ಚಿತ್ರ, ಸ್ವಾತಿ, ಪೂರ್ವಾಷಾಢಾ ಅಥವಾ ರೇವತಿ ಸಮೇತ ನಂದ ಭದ್ರಗಳೊಡಗೂಡಿದ್ದರೆ ಅದು ಶುಭಯೋಗವಾಗುತ್ತದೆ.

ಶನಿವಾರವು ಸ್ವಾತಿ, ರೋಹಿಣಿ, ವಿಶಾಖಾ, ಅನೂರಾಧ, ಧನಿಷ್ಠ ಅಥವಾ ಶತಭಿಷ ನಕ್ಷತ್ರಗಳಿಂದ ಕೂಡಿದ್ದು ಭದ್ರ, ರಿಕ್ತ ಸಹಿತವಾಗಿದ್ದರೆ ಶುಭಯೋಗವೆನಿಸುತ್ತದೆ.

ಶುಕ್ರವಾರದಂದು ನಂಧ (ಪಾಡ್ಯಮಿ, ಷಷ್ಠಿ, ಏಕಾದಶಿ, ತಿಥಿ), ಬುಧವಾರದಂದು ಭದ್ರ (ಬಿದಿಗೆ, ಸಪ್ತಮಿ, ದ್ವಾದಶಿ ತಿಥಿ), ಮಂಗಳವಾರದಂದು ಜಯ (ತದಿಗೆ, ಅಷ್ಟಮಿ, ತ್ರಯೋದಶಿ), ಶನಿವಾರದಂದು ರಿಕ್ತ (ಚೌತಿ ನವಮಿ ಚತುರ್ದಶಿ ತಿಥಿ) ಮತ್ತು ಗುರುವಾರದಂದು ಪಂಚಮಿ, ದಶಮಿ ಅಥವಾ ಪೂರ್ಣಿಮಿ ತಿಥಿ ಬಿದ್ದರೆ ಸಿದ್ಧಯೋಗವಾಗುತ್ತದೆ.

ಭಾನುವಾರದಿಂದ ಶನಿವಾರದವರೆಗೆ ಹಸ್ತ, ಶ್ರವಣ, ಅಶ್ವಿನಿ, ಅನೂರಾಧ, ಪುಷ್ಯ, ರೇವತಿ, ರೋಹಿಣಿ ನಕ್ಷತ್ರಗಳು ಬಂದರೆ ಅಮಿತ ಸಿದ್ಧಯೋಗ ಉಂಟಾಗುತ್ತದೆ.

ಮೇಲೆ ಹೇಳಿರುವ ಯೋಗಗಳನ್ನು ಯಥಾನುಕೂಲವಾಗಿ ಮುಹೂರ್ತ ನಿಷ್ಕರ್ಷಿಸಲು ಉಪಯೋಗಿಸಿಕೊಳ್ಳಬಹುದು. ವಿಶೇಷ ಯೋಗಗಳ ಕಾರಣದಿಂದ ದಿವಸವೂ ಪ್ರಬಲವಾಗಿದ್ದರೆ, ಕೈಕೊಂಡ ಪ್ರಯತ್ನವು ಜಯಪ್ರದವಾಗುವ ಅವಕಾಶಗಳು ಹೆಚ್ಚಾಗಿರುತ್ತವೆ.

ಏಳನೇ ಅಧ್ಯಾಯ

# ಜನನ ಪೂರ್ವದ ಸಂಸ್ಕಾರಗಳು

ಮಗುವು ಹುಟ್ಟುವುದಕ್ಕೆ ಮುಂಚಿತವಾಗಿ ಮೂರು ಮುಖ್ಯ ಸಂಸ್ಕಾರಗಳಾಗತಕ್ಕವಾಗಿವೆ. ಅವು ಯಾವುವೆಂದರೆ ನಿಷೇಕ, ಪುಸ್ತ, ಗರ್ಭಾಧಾನ ಮತ್ತು ಪುಂಸವನ:

ನಿಷೇಕ ಪುಸ್ತವೆಂದರೆ ಮೊದಲನೆ ಸಮಾಗಮ. ಗರ್ಭಾದಾನವು ತರುವಾಯ ನಡೆಯುವ ಗಂಡಹೆಂಡಿರ ಸಂಪರ್ಕ. ಪುನಸವನ ಲಿಂಗ ನಿಷ್ಕರ್ಷ ಅಥವಾ ಬದಲಾವಣೆ. ಎಲ್ಲ ಪ್ರಾಚೀನ ಮುಹೂರ್ತ ಗ್ರಂಥಗಳೂ ನಾಮಕರಣದಿಂದ ಪ್ರಾರಂಭವಾಗುತ್ತವೆ. ಆದರೆ ನಾವು ಗರ್ಭಾದಾನದಿಂದ ಪ್ರಾರಂಭಿಸಲು ಇಚ್ಚಿಸುತ್ತೇವೆ. ಏಕೆಂದರೆ ಅದೇ ಮಗುವಿನ ಜನನ ಪೂರ್ವಾವಸ್ಥೆಯ ಪ್ರಾರಂಭ. ಸಂಭೋಗ ಕ್ರಿಯೆ. ಗರ್ಭದಾರಣೆ. ಮಾನವ ಜನನ ಇವು ಪ್ರಪಂಚದ ಇರುವಿಕೆಗೆ ಅವಶ್ಯಕ. ಸ್ತ್ರೀ ಪುರುಷರ ಸಮಾಗಮವು ರತಿ ಭೋಗವೇ ಆಗಬಾರದು. ಲಿಂಗ ಕ್ರಿಯೆಗೊಂದು ಪಾವಿತ್ರ್ಯವಿದೆ. ನೈತಿಕ ಧಾರ್ಮಿಕ ಪರಿಗಣನೆಗಳನ್ನು ಮನ್ನಿಸದೆ ಹೋದರೆ ಮತ್ತು ಆಚರಿಸದೆ ಹೋದರೆ, ಉಂಟಾಗುವ ಪರಿಣಾಮವು ಅತ್ಯಂತ ಅಸಮರ್ಪಕವಾಗುತ್ತದೆ. ಅಂಥ ಸ್ವೈರ ಸಂಭೋಗದಿಂದ ಎಲ್ಲ ಬಗೆಯ ಅನಿಷ್ಟ ಸಂತಾನವೂ ಪ್ರಾಪ್ತವಾಗಬಹುದು. ಪ್ರೊ. ಬಿ. ಸೂರ್ಯನಾರಾಯಣರಾಯರ ಪ್ರಕಾರ, ಸ್ತ್ರೀ ಪುರುಷರು ವಿದ್ಯುತ್ ಶಕ್ತಿಯ ಬಂಡಿಗಳು. ಅವರಿಬ್ಬರೂ ಲೈಂಗಿಕವಾಗಿ ಕೂಡಿದಾಗ ವಿದ್ಯುತ್ ಪ್ರವಾಹಗಳು ಪರಂಪರೆಯಾಗಿ ಹೊರಬಂದು ಅವರಿಬ್ಬರ ಮೇಲೂ ಅನುಕೂಲವಾಗಿಯೋ, ಪ್ರತಿಕೂಲವಾಗಿಯೋ ಪರಿಣಾಮವುಂಟು ಮಾಡುತ್ತವೆ. ಆದುದರಿಂದ ಪ್ರಥಮ ಸಮಾಗಮವನ್ನು ಅಲಕ್ಷ್ಯದಿಂದ ಭಾವಿಸಬಾರದು. ಗ್ರಹಗಳು ಅನುಕೂಲ ಮಾಡುವಾಗ ಅದು ನಡೆಯಬೇಕು. ಪ್ರಾಚೀನ ಕಾಮಶಾಸ್ತ್ರ ಜ್ಯೋತಿಷ ಶಾಸ್ತ್ರ ಗ್ರಂಥಗಳು, ರಜಸ್ವಲೆಯಾಗಿರುವ ಹೆಣ್ಣಿನ ಸಂಗವನ್ನು ಮೊದಲ ನಾಲ್ಕು ದಿವಸಗಳಲ್ಲಿ ಮಾಡಿದರೆ, ಮುಟ್ಟಿನ ದಿವಸಗಳಲ್ಲಿ ಸ್ತ್ರೀ ಮೈಯಿಂದ ಸತತವಾಗಿ

ರಕ್ತಸ್ರಾವವಾಗುತ್ತಿರುವ ಕಾರಣ ಅವಳು ಮಾನಸಿಕವಾಗಿಯೂ ನರಗಳ ವ್ಯವಸ್ಥೆಯಲ್ಲೂ ಕುಡಿತಕ್ಕೆ ಗುರಿಯಾಗಿರುವ ಕಾರಣ ಕೆಟ್ಟ ಪರಿಣಾಮಗಳಿಗೆ ಎಡೆ ಕೊಟ್ಟಂತಾಗುತ್ತದೆಂದು ತಿಳಿಸುತ್ತವೆ. ಆದಕಾರಣ ಮುಟ್ಟಾದ ಮೊದಲ ನಾಲ್ಕು ದಿವಸಗಳನ್ನು ಬಿಡಬೇಕು. ಐದನೆ ದಿವಸ ಸಂಭೋಗ ಮಾಡಿದರೆ ಮಗಳು ಹುಟ್ಟುವುದು ಸಂಭವ. ಒಟ್ಟಿನಲ್ಲಿ ಬೆಸ ದಿವಸಗಳಲ್ಲಿ ಸಂಗ ಮಾಡುವುದರಿಂದ ಆ ಜನನ ಸೂಚಿತವಾಗುತ್ತದೆ. ಮುಟ್ಟಾದ ಆರನೆಯ ದಿವಸ ಪ್ರಥಮತಃ ಸಂಗ ಮಾಡಿದರೆ, ದಂಪತಿಗಳ ಸೌಖ್ಯವೃದ್ಧಿಯಾಗುವುದಲ್ಲದೆ ವಿಧೇಯನಾದ ಬುದ್ಧಿವಂತ ಪುತ್ರನ ಜನನವು ಖಚಿತವಾಗುತ್ತದೆಂದು ಭಾವಿಸಲಾಗಿದೆ.

ಶ್ರವಣ, ರೋಹಿಣಿ, ಅನೂರಾಧ, ಸ್ವಾತಿ, ರೇವತಿ, ಮೂಲ, ಉತ್ತರ, ಉತ್ತರಾ ಷಾಢಾ, ಉತ್ತರಾಭಾದ್ರ, ಶತಭಿಷ ನಕ್ಷತ್ರಗಳು ನಿಷೇಕಕ್ಕೆ ಪ್ರಶಸ್ತವಾದವು. ಪುಷ್ಯಮಿ, ಧನಿಷ್ಠ, ಮೃಗಶಿರ, ಅಶ್ವಿನಿ, ಚಿತ್ರ ಪುನರ್ವಸು ಸಾಧಾರಣ. ಮಿಕ್ಕವು ವರ್ಜ್ಯ.

ಸೋಮವಾರ, ಬುಧವಾರ, ಗುರುವಾರ ಮತ್ತು ಶುಕ್ರವಾರ ಶುಭವಾರಗಳು. ಶನಿವಾರ, ಮಂಗಳವಾರ, ಭಾನುವಾರಗಳನ್ನು ಕೇಳುವಂತೆಯೇ ಇಲ್ಲ.

ಚೌತಿ, ಅಷ್ಟಮಿ, ನವಮಿ, ಚತುರ್ದಶಿ, ಹುಣ್ಣಿಮೆ ಮತ್ತು ಅಮಾವಾಸ್ಯೆ ಬಿಟ್ಟು ಬಾಕಿ ತಿಥಿಗಳು ಪ್ರಶಸ್ತ. ಅನುಕೂಲವಾದ ರಾಶಿಗಳು ವೃಷಭದಿಂದ ತುಲವರೆಗೆ ಮತ್ತು ಮೀನ ಜನ್ಮ ನಕ್ಷತ್ರ. ಅನುಜನ್ಮ (10ನೇ ನಕ್ಷತ್ರ) ನಕ್ಷತ್ರ ಮತ್ತು ತ್ರಿಜನ್ಮ (19ನೆಯ ನಕ್ಷತ್ರ) ನಕ್ಷತ್ರಗಳನ್ನು ನಿರಾಕರಿಸಬೇಕು.

ಪ್ರಸ್ತದ ವೇಳೆಯಲ್ಲಿ ಎಂಟನೆ ಮನೆಯಲ್ಲಿ ಯಾವ ಗ್ರಹವೂ ಇರಕೂಡದು. ಇಷ್ಟು ಸಿದ್ಧವಾದರೆ ಧನುಸ್ ಕುಂಭಗಳೂ ಪ್ರಶಸ್ತವೇ ಎಂದು ಪರಿಗಣನೆ.

*ಪುಂಸವನ :*

ಪುಂಸವನ ಎಂದರೆ ಲಿಂಗ ಬದಲಾವಣೆ. ಹಿಂದೂಗಳು ಹಿಂದಿನ ಕಾಲದಿಂದಲೂ ಭ್ರೂಣಾವಸ್ಥೆಯಲ್ಲಿ ಇನ್ನೂ ಲಿಂಗ ವ್ಯತ್ಯಾಸವಾದ ಮಗುವಿನ ಲಿಂಗವನ್ನು ಕೆಲವು ಸಂಸ್ಕಾರಗಳನ್ನು ಕೈಕೊಳ್ಳುವುದರಿಂದಲೂ ಕೆಲವು ಔಷಧಿಗಳನ್ನು ಕೊಡುವುದರಿಂದಲೂ ತಿದ್ದಿಕೊಳ್ಳಲು ಸಾಧ್ಯ ಎಂದು ತಿಳಿದುಕೊಂಡಿದ್ದರು. ಹಿಂದುಗಳ ಈ ಪ್ರಾಚೀನ ಪರಿಜ್ಞಾನವನ್ನು ಪಾಶ್ಚಾತ್ಯ ವಿಜ್ಞಾನಿಗಳು ಅಲ್ಲಗಳೆಯುತ್ತಿದ್ದರು. ಆದರೆ ಕಳೆದ ನಾಲ್ಕೈದು ದಶಕಗಳಿಂದ ವಿಜ್ಞಾನಿಗಳ ಅಭಿಪ್ರಾಯವು ಬದಲಾವಣೆ ಹೊಂದಿ ಈಗವರು ಈ ಸಂಭವವನ್ನು ಒಪ್ಪಿಕೊಳ್ಳುತ್ತಾರೆ. ವಾಚಕರ ತಿಳಿವಳಿಕೆಗಾಗಿ ಆಧುನಿಕ ವೈದ್ಯ ವಿಜ್ಞಾನಿಗಳ ಕೆಲವು ಸಮೀಕ್ಷೆಗಳನ್ನು ಇಲ್ಲಿ ಪ್ರಸ್ತಾಪಿಸುತ್ತೇವೆ.

ಪ್ರೊಫೆಸರ್ ಘೂರಿ ಎಂಬಾತ ಗರ್ಭಾವಸ್ಥೆಯಲ್ಲಿ ಭ್ರೂಣದ ಬದಲಾವಣೆ ಮಾಡುವುದು ಸಾಧ್ಯ ಎಂಬ ವಾದವನ್ನು ಪ್ರಾರಂಭಿಸಿದರು. ಇದನ್ನು ಬಂಟೆನ್‌ಬರ್ಗ್ ಸ್ವಾಗತಿಸಿದರು. ಇಷ್ಟು ವೇಳೆಗಾಗಲೇ ಬರ್ನಾರ್ಡ್ ಮಾಕೆಫೆಡನ್ ಲಿಂಗ ಬದಲಾವಣೆಯ ಬಗ್ಗೆ ಹಲಕೆಲವು ಸಿದ್ಧಾಂತಗಳಿಗೆ ಬಂದಿದ್ದು ತಾವು ಪ್ರಯೋಗಿಸಿದ ಪ್ರಕರಣಗಳಲ್ಲಿ ಶೇಕಡ 90ರಷ್ಟು ಯಶಸ್ವಿಯಾಗಿರುವಂತೆ ಸಮರ್ಥನೆ ಮಾಡಿಕೊಂಡಿದ್ದರು. ಘೂರಿಯವರ ವಾದದ ಪ್ರಕಾರ "ಎರಡು ಮುಟ್ಟುಗಳ ನಡುವಣ ಅಂತರದ ಪ್ರಾರಂಭದಲ್ಲಿ ಸ್ತ್ರೀಯ ಗರ್ಭಕೋಶದ ಜೀವಧಾರಕ ಪರಿಸ್ಥಿತಿಯು ಹುಡುಗಿಯ ಹುಟ್ಟಿಗೆ ಅನುಕೂಲವಾಗುತ್ತದೆ. ಈ ಅಂತರದ ಕಡೆಯಲ್ಲಿ ಮುಂದಿನ ಆವರ್ತ ಪ್ರಾರಂಭವಾಗುವುದಕ್ಕೆ ಮುಂಚಿತವಾಗಿ ಹುಡುಗರಿಗೆ ಅನುಕೂಲವಾಗುತ್ತದೆ. ಇವೆರಡು ಕಾಲಗಳ ನಡುವೆ ಸಮಸಮ ಸಂಭವ". ಬಂಟನ್‌ಬರ್ಗ್ ಬೈಕಾರ್ಬೊನೇಟ್ ಅಥವಾ ಲಾಕ್ಟಿಕ್ ಆಮ್ಲ ಸಹಾಯದಿಂದ ಆಮ್ಲಾವಸ್ಥೆಯ ಮೇಲೆ ಕ್ಷಾರತ್ವವುಂಟು ಮಾಡಿದುದು. ಗರ್ಭಕೋಶದಲ್ಲಿ ಸ್ವಾಭಾವಿಕವಾದ ರಾಸಾಯನಿಕ ಬದಲಾವಣೆಗಳು ಕಾಲಕಾಲಕ್ಕೆ ಆಗುವುದಕ್ಕೆ ದ್ಯೋತಕವಾಗಿದೆ.

ಕಳೆದ ಎರಡು ಮೂರು ದಶಕಗಳಲ್ಲಿ ಲಿಂಗ ನಿಷ್ಕರ್ಷೆಯನ್ನು ಕುರಿತಂತೆ ಬಹುಶಃ ನಾಲ್ಕು ನೂರು ವಾದಗಳು ಎದ್ದಿವೆ, ಎಂದು ಡೇವನ್ ಫೋರ್ಟ್ ಅವರ ಪ್ರಕಾರ ತಿಳಿಯುತ್ತದೆ. ಜೀವ ವಿಜ್ಞಾನಿಗಳು ಸಾಧಾರಣವಾಗಿ ಅಂಗೀಕರಿಸಿಕೊಂಡಿರುವ ವಾದದ ಪ್ರಕಾರ ಲಿಂಗವನ್ನು ಎಕ್ಸಕ್ರೋಮೋಸೋಮ್‌ಗಳು ನಿರ್ಧರಿಸುತ್ತವೆ. ಹೆಂಗಸಿನಲ್ಲಿ ಈ ಕ್ರೋಮೋಸೋಮ್‌ಗಳು ಎರಡು ಇರುತ್ತವೆ. ಗಂಡಸಿನಲ್ಲಿರುವುದು ಒಂದೇ. ಪ್ರೊಫೆಸರ್ ಬ್ಲಾಂ ಸೂಚಿಸುವಂತೆ ಗಂಡು ಕ್ರೋಮೋಸೋಂ ಕ್ಷಾರ ದ್ರಾವಣದಲ್ಲಿ ಸ್ತ್ರೀ ಕ್ರೋಮೋಸೊಟಮ್‌ಗಿಂತ ಜಾಗೃತೆಯಾಗಿ ಸಂಚರಿಸುತ್ತವೆ. ಒಂದು ಚಮಚದಷ್ಟು ಸೋಡ ಬೈಕಾರ್ಬೊನೇಟ್ ಅಥರಾ ಲಾಕ್ಟಿಕ್ ಆಮ್ಲ ಮಗುವಿನ ಲಿಂಗವನ್ನು ನಿರ್ಧರಿಸಬಹುದು. ಸಾಮಾನ್ಯವಾಗಿ ಹುಟ್ಟುವ ಪ್ರತಿ ನೂರು ಹುಡುಗಿಯರಿಗೆ 105ರಷ್ಟು ಗಂಡು ಮಗುಗಳ ಜನನವಾಗುತ್ತದೆ. ಹುಡುಗರ ಮರಣ ಪ್ರಮಾಣ ಕೊಂಚ ಹೆಚ್ಚು. ಮಹಾ ವಿಧ್ವಂಸಕರವಾದ ಯುದ್ಧಗಳ ತರುವಾಯ ಅಗಾಧ ಸುದ್ದಿಯಲ್ಲಿ ಗಂಡಸರು ಸಾಯುವ ಕಾರಣ ಹುಟ್ಟುವ ಹುಡುಗರ ಸಂಖ್ಯೆ ಏರುತ್ತದೆಂಬುದು ಅನುಭವವೇದ್ಯವಾದ ಸಂಗತಿ. ಪ್ರಕೃತಿ ಈ ರೀತಿ ಲಿಂಗಬೇಧದಲ್ಲಿ ಸಮತೋಲನವನ್ನು ಪುನಃ ಸ್ಥಾಪಿಸುತ್ತದೆ. ಹೆಣ್ಣು ಮಕ್ಕಳಾಗಬೇಕೆಂದು ಕೆಲವು ತಂದೆ ತಾಯಿಗಳು ಬಯಸಿದರೆ ಇತರರು ತಮ್ಮ ವಂಶ ಪಾರಂಪರ್ಯವನ್ನು ಉಳಿಸಿ ಬೆಳೆಸುವುದಕ್ಕೋಸ್ಕರ

ಗಂಡು ಸಂತಾನವನ್ನು ಅಪೇಕ್ಷಿಸುತ್ತಾರೆ. ಸಿಂಹಾಸನಗಳಿಗೂ ದೊಡ್ಡ ಭೂ ಸ್ವತ್ತುಗಳಿಗೂ ಮಹದೈಶ್ವರ್ಯಗಳಿಗೂ ಉತ್ತರಾಧಿಕಾರಿಯನ್ನು ಪಡೆಯಬೇಕಾಗುವಾಗ ಇದು ವ್ಯಕ್ತಪಡುತ್ತದೆ. ಹಲವಾರು ಯುದ್ಧಗಳೂ ಮಹಾನ್ ರಕ್ತಪಾತಗಳೂ ರಾಜ ರಾಣಿಯರಿಗೆ ತಕ್ಕ ಉತ್ತರಾಧಿಕಾರಿಗಳು ಇಲ್ಲದುದರಿಂದ ಸಂಭವಿಸಿವೆ. ಎಲ್ಲ ದೇಶಗಳಲ್ಲೂ ಆಳ್ವಿಕೆಯ ಮನೆತನಗಳನ್ನು ಪುಂಸಂತತಿಯವರೇ ಉಳಿಸಿಕೊಂಡು ಬಂದಿದ್ದಾರೆ. ಸ್ತ್ರೀ ಸಂತತಿ ಎಂಬುದು ಒಂದು ಅಪವಾದ.

ಸ್ತ್ರೀಯರಲ್ಲಿ ಆಮ್ಲಾಧಿಕ್ಯದ ಸ್ರವಣವಾಗುವುದರಿಂದ ಬಂಜೆತನವುಂಟಾಗುವುದನ್ನು ಪ್ರಯೋಗ ಪರೀಕ್ಷೆಗಳಿಂದ ಕಂಡುಕೊಳ್ಳಲಾಗಿದೆ. ಸೋಡಿಯಂ ಬೈಕಾರ್ಬೋನೇಟ್ ದ್ರಾವಣದಿಂದ ಗರ್ಭಕೋಶವನ್ನು ತೊಳೆದ ತರುವಾಯ ಗಂಡನಲ್ಲಾಗಲಿ ಹೆಂಡತಿಯಲ್ಲಾಗಲಿ ಯಾವ ರೋಗ ಲಕ್ಷಣಗಳೂ ಪ್ರತಿಕ್ರಿಯಿಸದೆ ಇರುವಾಗ ಪರಿಣಾಮವು ಅತ್ಯಂತ ತೃಪ್ತಿಕರವಾಗಿದ್ದವು. ಮುಂದಿನ ಸಲ ಮುಟ್ಟಾದ ಮೇಲೆ ಗರ್ಭವುಂಟಾಗಿ ಈ ಎಲ್ಲ ಪ್ರಕರಣಗಳಲ್ಲೂ ಗಂಡು ಜನನವುಂಟಾಗಿದೆ. ಪ್ರೊಫೆಸರ್ ಉಂಟರ್ಬರ್ಗರ್ ಹೀಗೆ ವಿವೇಚಿಸುತ್ತಾರೆ. "ಅತ್ಯಂತ ಮುಖ್ಯವಾದ ಸಂಗತಿ ಎನೆಂದರೆ ಸ್ತ್ರೀಯ ಅಂಗ ಲಕ್ಷಣಗಳು ಲಿಂಗ ನಿಷ್ಕರ್ಷೆಯ ಮೇಲೆ ಪ್ರಬಲ ಪ್ರಭಾವವನ್ನು ಬೀರುತ್ತವೆ. ಇದನ್ನು ಈವರೆಗೆ ಕಡೆಗಂಡಿದ್ದುದು ಆಶ್ಚರ್ಯದ ವಿಷಯ".

ಮಾಸ್ಕೋವಿನ ಪ್ರೊಫೆಸರ್ ನಿಕೋಲಾರ್ಯ ಕಾನಸ್ಟೆಂಟಿನೋವಿಚ್ ಒಂದು ವಿದ್ಯುತ್ ಸಾಧನವನ್ನು ಕಂಡುಹಿಡಿದು ಅದರ ಮೂಲಕ ಸ್ತ್ರೀ ಪುರುಷರ ರೇತಾಣುಗಳನ್ನು ಬೇರ್ಪಡಿಸುವ, ಕೃತಕವಾಗಿ ವೀರ್ಯವಿಡುವುದರ ಮೂಲಕ ಗರ್ಭಧಾರಣೆ ಮಾಡಿಸುವ ಪ್ರಕರಣಗಳಲ್ಲಿ ಭಿನ್ನ ಲಿಂಗದ ಕ್ರೋಮೋಸೋಮ್‌ಗಳನ್ನು ಉಪಯೋಗಿಸುವುದರಿಂದ ಅಪೇಕ್ಷೆಯಂತೆ ಸ್ತ್ರೀ ಪುರುಷ ಸಂತಾನವನ್ನು ಪಡೆಯಲು ಸಾಧ್ಯವಾಗುತ್ತದೆಂದು ಹೇಳುತ್ತಾರೆ. ನೈಜವಾದ ಸ್ಪರ್ಮಟಜೋಮ್ ಅಥವಾ ರೇತಾಣುಗಳನ್ನು ತಕ್ಕ ದ್ರಾವಣದಲ್ಲಿ ಹಾಕಿ ಬಾಗಿದ ನಾಳದಲ್ಲಿಡುತ್ತಾರೆ. ಸಣ್ಣ ಪ್ರಮಾಣದ ವಿದ್ಯುತ್ ಪ್ರವಾಹವನ್ನು ಈ ನಾಳದ ಮೂಲಕ ಹಾಯಿಸಿದರೆ, ಅದು ಪುರುಷ ರೇತಾಣುವನ್ನು ತನ್ನ ಸೆಳೆತದ ನೇರಕ್ಕೂ ಸ್ತ್ರೀ ರೇತಾಣುವನ್ನು ತನ್ನ ಸೆಳೆತದ ದಿಕ್ಕಿಗೆ ಎದುರಾಗಿಯೂ ಬೇರ್ಪಡಿಸಿ ಶೇಖರಿಸುತ್ತದೆ. ನಾಳದ ಇಕ್ಕೆಡೆಗಳಲ್ಲೂ ಸ್ತ್ರೀ ಪುರುಷ ರೇತಾಣುಗಳು ಪ್ರತ್ಯೇಕವಾಗಿ ಶೇಖರವಾಗುತ್ತವೆ. ಮಾಕಫೆಡನ್ ಹೇಳುತ್ತಾರೆ, "ಸ್ತ್ರೀಯರ ಋತು ಕಾಲಾವಧಿಯು ಇಪ್ಪತ್ತೆಂಟು ದಿವಸಗಳಾಗಿದ್ದು ಚಂದ್ರನ ಆವರ್ತ ಕಾಲಕ್ಕೆ ಗುರಿಯಾಗಿರುತ್ತದೆ. ಗರ್ಭಧಾರಣೆಯ ಕಾಲವು ಇದಕ್ಕೆ ಅನುಗುಣವಾಗುತ್ತವೆ".

ನಾವು ಸರಿಯಾಗಿ ಅರ್ಥಮಾಡಿಕೊಂಡರೆ, ಇಲ್ಲಿ ಕಾಣುವ ಸ್ತ್ರೀಯ ದೈಹಿಕ ವರ್ತನೆಯು ಚಂದ್ರನ ಸಂಚಾರಕ್ಕೆ ತಕ್ಕಂತೆ ನಡೆಯುತ್ತದೆ. ಒಂದು ವಾದದ ಪ್ರಕಾರ ಸ್ತ್ರೀಯ ಅಂಡಾಶಯದಿಂದ ಅಂಡವು ಹೊರಬರುತ್ತಲೆ ಫಲವಾದರೆ, ಅದು ಹೆಣ್ಣು ಸ್ವರೂಪದ್ದಾಗಿರುತ್ತದೆ. ಕೊಂಚ ಬಲಿತ ತರುವಾಯ ಫಲವಾದರೆ ಪುರುಷವಾಗುತ್ತದೆ. ಆದಕಾರಣ, ಮುಟ್ಟಾದ ಮೂರನೆ ದಿವಸದಿಂದ ಐದನೇ ದಿವಸದವರೆಗಣ ಅವಧಿಯಲ್ಲಿ ಗರ್ಭವುಂಟಾದರೆ ಅದು ಹುಡುಗಿಯಾಗುತ್ತದೆ, ಐದನೇ ದಿನದಿಂದ ಎಂಟನೇ ದಿನದ ಅವಧಿಯಲ್ಲಾದರೆ ಹುಡುಗನಾಗುತ್ತದೆ. ಎಂಟರಿಂದ ಹನ್ನೆರಡು ದಿವಸಗಳ ಅವಧಿಯಲ್ಲಾದರೆ ಹುಡುಗನೋ ಹುಡುಗಿಯೊ ಆಗಬಹುದು. ಕೆಲವು ದೈಹಿಕ ಸ್ವಭಾವಗಳು ಆಶ್ಚರ್ಯಕರವಾದ ರೀತಿಯಲ್ಲಿ ಚಂದ್ರನ ದೈನಂದಿನ ಚಲನಗಳಿಗೆ ತಾಳಿಯಾಗುತ್ತದೆ; ಹೆಂಗಸರು ಆ ಆವರ್ತಕ್ಕೆ ಕಾಣಿಕೆಯಾಗಿವೆ ರಜಸ್ವಲೆಯರಾಗುತ್ತಾರೆ. ಲೈಂಗಿಕ ಕ್ರಿಯೆಯೂ ಇದೇ ರೀತಿ ಚಂದ್ರನ ಚಲನೆಯ ಆವೃತ್ತಕ್ಕೆ ತಾಳಿಯಾಗುತ್ತದೆ. ಈ ಬಗ್ಗೆ ನಮ್ಮಲ್ಲಿ ಸಾಕ್ಷ್ಯವಿದೆ.

ಜೀವಸತ್ವವು ಪ್ರಥಮತಃ ಅಗಣಿತವಾದ ಕಾಲಾವಧಿಯಲ್ಲಿ ಅಲೆಗಳ ಉಬ್ಬರವಿಳಿತಗಳಿಗೆ ಒಳಗಾಗಿದ್ದ ಆದಿಸಾಗರಗಳ ದಂಡೆಗಳಲ್ಲಿ ಪ್ರಾರಂಭವಾಯಿ ತೆಂದೂ ಈ ಉಬ್ಬರವಿಳಿತಗಳ ಲಯಕ್ಕೆ ತಾಳಿಯಾಗುವಂತೆ ಎಲ್ಲ ಜೀವಿಗಳ ಬದುಕಿನ ಲಯಗಳೂ ದೈಹಿಕವಾದ ಸ್ವಭಾವಗಳೂ ಉಂಟಾದವೆಂದೂ ಮಹಾನ್ ವಿಜ್ಞಾನಿ ಡಾರ್ವಿನ್ ಸೂಚಿಸಿದ್ದಾನೆ. ಈ ಸಾಗರದಲೆಗಳ ಲಯಗಳೂ ಜೀವಿಗಳ ಬಾಳಲಯಗಳೂ ಕೂಡ ಸೂರ್ಯ ಚಂದ್ರ ಪ್ರಭಾವದಿಂದ ಉಂಟಾದವು. ಆ ಆದಿ ಕಾಲದಲ್ಲಿ ಜೀವಸತ್ವದ ತೊಟ್ಟಿಲಂತಿದ್ದ ಪ್ರಾಥಮಿಕ ಕೋಶವು ಚಟುವಟಿಕೆ ಸ್ತಬ್ಧತೆಗಳನ್ನು ಪರ್ಯಾಯವಾಗಿ ಪಡೆಯುತ್ತ ಬಂತು. ಈ ದೈಹಿಕಾವಸ್ಥೆಗೆ ವಿಜ್ಞಾನದ ಪರಿಭಾಷೆಯಲ್ಲಿ ಜೀವ ದ್ರವ್ಯ ವಿಚ್ಛೇದನ ಕ್ರಿಯೆ ಎಂದೂ ಜೀವದ್ರವ್ಯ ಪರಿಣಾಮ ಎಂದೂ ಕರೆಯುತ್ತಾರೆ. ಇವು ಸ್ತ್ರೀತ್ವ ಪುಂಸತ್ವಗಳಿಗೆ ತಾಳಿಯಾಗುತ್ತವೆ. ಇವುಗಳಿಂದ ಸಿದ್ಧಪಡುವ ಸಂಗತಿ ಏನೆಂದರೆ, ಲಿಂಗವು ಚಾಂದ್ರಮಾಸದ ವೇಳೆಯಿಂದ ಮಾತ್ರವಲ್ಲದೆ, ಗರ್ಭವು ಚಾಂದ್ರಮಾಸದ ಯಾವ ತಿಥಿಯಲ್ಲಿ ಉಂಟಾಗುತ್ತದೆಯೋ ಅದರಿಂದಲೂ ನಿರ್ಧಾರವಾಗುತ್ತದೆ. ಈ ವಿಷಯದಲ್ಲಿ ಗರ್ಭಧಾರಣೆ ಮತ್ತು ಲಿಂಗ ವ್ಯವಸ್ಥೆ ವಿಷಯ ಕುರಿತಂತೆ ಎಲ್ಲ ಸಂಬಂಧಪಟ್ಟ ವಿಜ್ಞಾನಿಗಳೂ ಕೂಡ ಚಾಂದ್ರಮಾನದ ತಿಂಗಳ ಮತ್ತು ತಿಥಿಗಳ ಆವರ್ತಕ್ಕೆ ತಾಳಿಯಾಗುವಂತೆ ದೈಹಿಕವಾದ ಪರಿಣಾಮಗಳುಂಟಾಗುತ್ತವೆಂದು ಸಮ್ಮತವುಳ್ಳವರಾಗಿದ್ದಾರೆ.

ನಾವು ಈಗ, ಋತುಸ್ರಾವ, ಗರ್ಭದಲ್ಲಿ ಭ್ರೂಣ ಹೇಗೆ ಬೆಳೆಯುತ್ತದೆ, ಯಾವ ತಿಂಗಳಲ್ಲಿ ಲಿಂಗ ವ್ಯವಸ್ಥೆಯಾಗುತ್ತದೆ, ಗರ್ಭಾವಸ್ಥೆಯಲ್ಲಿರುವ ಮಗುವಿನ

ಲಿಂಗವನ್ನು ಪತ್ತೆಹಚ್ಚುವುದು ಹೇಗೆ, ತಂದೆ ತಾಯಿಗಳ ಅಪೇಕ್ಷೆಯಂತೆ ಭ್ರೂಣದ ಲಿಂಗವನ್ನು ಬದಲಾಯಿಸುವುದು ಹೇಗೆ ಮುಂತಾದ ವಿಷಯಗಳನ್ನು ಕುರಿತು ಪ್ರಾಚೀನ ಜ್ಯೋತಿಷ ಶಾಸ್ತ್ರ ಗ್ರಂಥಗಳು ಏನು ಹೇಳುತ್ತವೆ ಎಂಬುದನ್ನು ಉದಹರಿಸುತ್ತೇವೆ.

ನಾವು ಆಗಿಂದಾಗ್ಗೆ ವಯಸ್ಕರಾದವರಲ್ಲೂ ಒಂದು ಬೆಳವಣಿಗೆಯ ಘಟ್ಟದಲ್ಲಿ ಲಿಂಗ ವ್ಯತ್ಯಾಸವಾಗುವ ಕಥೆಗಳನ್ನು ಪತ್ರಿಕೆಗಳಲ್ಲಿ ಓದುತ್ತೇವಷ್ಟೆ. ಪ್ರೊಫೆಸರ್ ಬಿ. ಸೂರ್ಯನಾರಾಯಣರಾಯರು ಅಂಥದೊಂದು ಪ್ರಸಂಗವನ್ನು ಪ್ರೇಕ್ಷಿಸಿದ್ದಾರೆ. ಇಂಥ ಪ್ರಸಂಗಗಳು ಈಚೆಗೆ ಅಧಿಕವಾಗುತ್ತಿವೆ. ವಿಜ್ಞಾನದ ಇತಿಹಾಸದಲ್ಲಿ ಪ್ರಾಚೀನ ಹಿಂದುಗಳು ಪ್ರಮುಖ ಸ್ಥಾನವನ್ನು ಪಡೆದವರಾಗಿದ್ದರು. ಸಾವಿರಾರು ವರ್ಷಗಳಷ್ಟು ಹಿಂದೆಯೇ ಯಾವುದನ್ನು ಇವತ್ತು ಜೀವ ವಿಜ್ಞಾನದ ಪವಾಡವೆಂದು ಕರೆಯುತ್ತಾರೋ ಅಂಥವನ್ನು ಮನಗಂಡಿದ್ದರು. ಆದರೇನು, ಐರೋಪ್ಯ ಪದ್ಧತಿಯ ಶಿಕ್ಷಣವನ್ನು ಪಡೆದವರು ತಮಗೆ ವಿವರಿಸಿ ಹೇಳಲು ಬಾರದಂಥ ವಿಷಯಗಳನ್ನು ಕುರಿತು ತಮ್ಮ ನೆಚ್ಚಿನ ಸಿದ್ಧಾಂತಗಳ ನೇರಕ್ಕೆ ಅಪಹಾಸ್ಯ ಮಾಡುವುದೇ ಒಂದು ಠೇಂಕಾರವೆಂದು ಭಾವಿಸಿರುವಂತಿದೆ.

ಮಹಾನ್ ಹಿಂದೂ ವೈದ್ಯ ಚರಕ ಲಿಂಗ ಬದಲಾವಣೆ ಕುರಿತು ವಿಸ್ತಾರವಾಗಿ ಬರೆದಿದ್ದಾನೆ. ಪ್ರಾಚೀನರು ಕೇವಲ ವಾದಪಟುಗಳಷ್ಟೇ ಆಗಿರಲಿಲ್ಲ. ಗರ್ಭಸ್ಥ ಶಿಶುವಿನ ಲಿಂಗ ಯಾವುದೆಂಬದನ್ನು ಮುಂಚೆಯೇ ತಿಳಿದುಕೊಂಡು ಅಪೇಕ್ಷೆಪಟ್ಟರೆ ಅದನ್ನು ಹೇಗೆ ಬದಲಾಯಿಸಿಕೊಳ್ಳುವುದು ಎಂಬ ಬಗ್ಗೆ ಅವರು ನಮಗೆ ಕಾರ್ಯವಿಧಾನಗಳನ್ನು ಕೊಟ್ಟಿದ್ದಾರೆ. ವಾಸ್ತವವಾಗಿ ವೇದಗಳಲ್ಲಿ ತಂದೆ ತಾಯಿಯಾದವರು ಗರ್ಭದಲ್ಲಿರುವ ಮಗುವಿನ ಲಿಂಗ ವ್ಯತ್ಯಾಸ ಮಾಡುವುದಕ್ಕೆ ನಡೆಸಬೇಕಾದ ಕರ್ಮಗಳಾವುವೆಂದು ಪ್ರೋಕ್ತವಾಗಿದೆ. ಈ ಸಂಸ್ಕಾರಕ್ಕೆ ಪುಂಸವನ ಎಂದು ಹೆಸರು. ಈ ಪದದ ವ್ಯುತ್ಪತ್ತಿ ಹೇಗೆಂದರೆ: ಪುಂಗ (ಗಂಡಸು). ಸ್ಯತೇ (ಆಗುತ್ತಾನೆ) ಅನೇನ (ಈ ವಿಧಾನದಿಂದ). ಅಂದರೆ ಗಂಡುಸಾಗಿಸುವ ಕರ್ಮ, ಸಂಸ್ಕಾರ, ಸಂಪ್ರದಾಯಸ್ಥರಾದ ಹಿಂದುಗಳು ಇವತ್ತಿಗೂ ಈ ಕರ್ಮವನ್ನು ಆಚರಿಸುತ್ತಾರೆ. ಗರ್ಭಧಾರಣೆಯ ಕಾಲದಿಂದ ಮೂರು ತಿಂಗಳಾದ ತರುವಾಯ ಪುಂಸವನವನ್ನು ಮಾಡುತ್ತಾರೆ.

ಪುಂಸವನವನ್ನು ಕುರಿತು ಹೆಚ್ಚು ವಿವರಗಳನ್ನು ತಿಳಿಸುವುದ ಮುನ್ನ, ಇತ್ತೀಚೆಗೆ ಯೂರೋಪಿನಲ್ಲಿ ನಡೆದ ಒಂದು ಸ್ವಾರಸ್ಯಕರವಾದ ಪ್ರಸಂಗವನ್ನು ವಾಚಕರ ಗಮನಕ್ಕೆ ತರೋಣ. ಅಂಡ್ರಿಯಾಸ್ ಸ್ಪಾರ್ ಎಂಬ ಡೆನ್ಮಾರ್ಕಿನ ಚಿತ್ರಕಾರ

20ನೆಯ ವಯಸ್ಸಿನಲ್ಲಿ ಮದುವೆ ಆದ. ಅವನು ವರಿಸಿದ ಹುಡುಗಿ ರಿನ್ ಚಿತ್ರಶಾಲೆಯಲ್ಲಿ ಕಲೆಯನ್ನು ಅಧ್ಯಯನ ಮಾಡುತ್ತಿದ್ದ ಸಹ ವಿದ್ಯಾರ್ಥಿನಿ. ಕೆಲಕಾಲ ಅವರು ಸುಖವಾಗಿದ್ದರು. ಕೆಲವು ವರ್ಷಗಳ ತರುವಾಯ, ಅಂಡ್ರಿಯಾಸ್ ತಮಾಷೆಗೆಂದು ಹೆಣ್ಣಿನ ವೇಷವನ್ನು ಹಾಕಿಕೊಂಡ. ಆ ಉಡುಪು ಅವನಿಗೆ ಅನುವಾಗಿಯೇ ಇದ್ದು, ಅವನು ಹುಡುಗಿಯಂತೆ ಕಾಣಿಸುತ್ತಿದ್ದ. ಮತ್ತೊಬ್ಬ ವಿದ್ಯಾರ್ಥಿನಿ ಅವನನ್ನು ಲಿಲಿ ಎಂದು ಕರೆದಳು. ಅವನಿಗೆ ಆ ಹೆಸರು ಹಿಡಿಸಿತು. ತರುವಾಯ ಅಂಡ್ರಿಯಾಸಗೆ ತಾನು ವಾಸ್ತವವಾಗಿ ಲಿಲಿಯೆ. ಅದೇ ತನ್ನ ನಿಜವಾದ ವ್ಯಕ್ತಿತ್ವ. ಪ್ರತ್ಯೇಕ ಇರುವಿಕೆ, ತನ್ನಲ್ಲಿ ಅದು ಅಡಗಿದೆ ಎಂದು ಅನಿಸತೊಡಗಿತು. ಆಂಡ್ರಿಯಾಸ್ ಗೆ ಬಾಯಲ್ಲೂ ಮೂಗಿನಲ್ಲೂ ರಕ್ತಸ್ರಾವವಾಗತೊಡಗಿತು. ಇದು ಅವನ ಮನಸ್ಸಿಗೆ ಋತುಸ್ರಾವವೆನಿಸಿತು. ಅಷ್ಟರಲ್ಲಿ ಅವನಿಗೆ ತಾನು ಹೆಣ್ಣೆಂಬ ಮಾನಸಿಕ ಪರಿವರ್ತನವಾಗತೊಡಗಿತ್ತು. ತಾನು ತೋರಿಕೆಗೆ ಗಂಡಾಗಿದ್ದರೂ, ತನ್ನಲ್ಲಿ ಹೆಣ್ಣಿನ ಅಂಗಾಂಗಗಳು ಅಡಗಿವೆ ಎಂಬ ದೃಢ ನಂಬಿಕೆ ಅವನಲ್ಲಿ ಮೂಡತೊಡಗಿತು. ಅವನ ಈ ಇಮ್ಮುಖವಾದ ವ್ಯಕ್ತಿತ್ವದ ಬಗೆಗೆ ಯಾವ ವೈದ್ಯರೂ ಶಸ್ತ್ರ ಚಿಕಿತ್ಸಕರೂ ಸರಿಯಾದ ಸಮಾಧಾನ ನೀಡಲಾರದೆ ಹೋದರು. ಕಡೆಗೆ ಒಬ್ಬ ಜರ್ಮನ್ ತಜ್ಞನನ್ನು ಕಾಣಲು ಆತ ಆಂಡ್ರಿಯಾಸನ್ನು ಪರಿಷ್ಕಾರವಾಗಿ ಪರೀಕ್ಷಿಸಿದ ತರುವಾಯ ಅವನ ದೇಹದಲ್ಲಿ ಸ್ತ್ರೀಯ ಅಂಗಾಂಗಗಳಿವೆ ಎಂದು ಖಚಿತಪಡಿಸಿಕೊಟ್ಟ. ಇದಾದ ತರುವಾಯ ಫ್ರೊಗೆಭಾರ್ಡ ಶಸ್ತ್ರಚಿಕಿತ್ಸೆ ನಡೆಸಿದರು. ಚಿಕಿತ್ಸೆ ಕಾಲದಲ್ಲಿದ್ದ ದಾದಿಯರು ಅವನ ಗಡಸು ಧ್ವನಿಯು ಪೂರ್ತಿ ಬದಲಾಗಿ ಕೀಚಲು ಧ್ವನಿಯಾಗಿ ಪರಿವರ್ತನೆ ಆಯಿತು ಎಂಬುದನ್ನು ವಿವರಿಸುತ್ತಾರೆ. ಆಮೇಲೆ ಆಂಡ್ರಿಯಾಸಗೆ ಸಿಗರೇಟ್ ಚುಟ್ಟಾಗಳ ವಾಸನೆ ಹಿಡಿಸದೆ ಹೋಯಿತು. ಕೈಬರಹದಲ್ಲೂ ವ್ಯತ್ಯಾಸಗಳಾದವು. ಮೊದಲನೆಯ ಶಸ್ತ್ರ ಚಿಕಿತ್ಸೆಯಲ್ಲಿ ಪುರುಷೇಂದ್ರಿಯಗಳ ಗ್ರಂಥಿಗಳನ್ನು ಪೂರ್ತ ತೆಗೆದುಹಾಕಲಾಯಿತು. ಆ ತರುವಾಯ ಅವನು ಗಂಡಸಾಗಿರಲಿಲ್ಲ. ಎರಡನೇ ಶಸ್ತ್ರ ಚಿಕಿತ್ಸೆಯ ತರುವಾಯ, ಅವನ ಹೆಂಡತಿ ಗ್ರೇಟೆ ತನ್ನ ದಿನಚರಿಯಲ್ಲಿ ಹೀಗೆ ಬರೆದಿದ್ದಳು;

ಇದಾದ ಕೆಲವು ಗಂಟೆಗಳವರೆಗೂ ಒಳಭಾಗದಲ್ಲಿ ಏನೇನಾಯಿತು ಎಂಬ ವಿವರ ತಿಳಿದಿರಲಿಲ್ಲ. ಗಂಡಸಾಗಿ ಹುಟ್ಟಿದ್ದ ವ್ಯಕ್ತಿ ನನ್ನ ಗಂಡನಾಗಿ ನನ್ನ ಮಿತ್ರನಾಗಿ, ನನ್ನ ಸಹಚಾರಿಯಾಗಿದ್ದವನು ಈಗ ಪೂರ್ತಿ ಹೆಂಗಸಾಗಿದ್ದ.

"ಆದರೆ ಈಗ ನನ್ನ ಕಾಡಿಸುತ್ತಿರುವ ಚಿಂತೆಯೇನೆಂದರೆ; ಅಂಡ್ರಿಯಾಸ್ ಈಗ ಪೂರ್ತಿ ಧ್ವಂಸವಾಗಿರಬಹುದು, ಮತ್ತು ಆ ಬೂದಿಯ ರಾಶಿಯಿಂದ

ಲಿಲಿಯು ಫೀನಿಕ್ಸ ಪಕ್ಷಿಯಂತೆ ಎದ್ದು ಬಂದಿರಬಹುದು, ಆದರೂ ಕಾನೂನಿನ ಪ್ರಕಾರ ಪ್ರಪಂಚದಲ್ಲಿ ಆಂಡ್ರಿಯಾಸ್ ಇನ್ನೂ ಬದುಕಿದ್ದಾನೆ ಮತ್ತು ನಾನು ಅವನ ಹೆಂಡತಿ. ಈ ಘೋರ ಸಂಗತಿಯನ್ನು ಯಾರು ತಾನೆ ಗ್ರಹಿಸಬಲ್ಲರು, ಇದೆಷ್ಟು ವಿಪರೀತವಾದ, ವಿಲಕ್ಷಣವಾದ ಸಂಗತಿ!".

ಆಂಡ್ರಿಯಾಸ್ ಸ್ಪಾರ್ ಪ್ರಸಂಗ ವೈದ್ಯಕೀಯ ಇತಿಹಾಸದಲ್ಲೇ ಅಭೂತಪೂರ್ವವಾದದ್ದು. ಈ ಕರುಣಾಜನಕವಾದ ವಿಚಿತ್ರವಾದ ಪ್ರಸಂಗದ ಬಗ್ಗೆ ನಾವು ಹೇಳುವುದಾದರೂ ಏನಿದೆ?. ಪ್ರೊ.ಬಿ. ಸೂರ್ಯನಾರಾಯಣರಾಯರು ತಮ್ಮ ಸ್ತ್ರೀ ಜಾತಕ ಗ್ರಂಥದಲ್ಲಿ ಓಬಳಮ್ಮ ಎಂಬಾಕೆ ಓಬಲಪ್ಪ ಆದ ಪ್ರಸಂಗವನ್ನು ಪ್ರಸ್ತಾಪಿಸಿದ್ದಾರೆ. ಅದೂ ಇಂಥದೇ ಸ್ವಾರಸ್ಯಕರವಾದ ಸಂಗತಿ.

ಭ್ರೂಣಾವಸ್ಥೆಯಲ್ಲಿ ಲಿಂಗವನ್ನು ಗುರುತಿಸುವುದಕ್ಕೆ ವೈದ್ಯಕೀಯವಾಗಿ ಸಾಧ್ಯವಿಲ್ಲವಾದರೂ, ಜ್ಯೋತಿಷಿಕವಾಗಿ ಆಧಾನ ಲಗ್ನದ ಆಧಾರದ ಮೇಲೆ ಹುಟ್ಟುವ ಮಗು ಗಂಡ ಹೆಣ್ಣೆ ಎಂದು ಮುಂಗಡವಾಗಿ ತಿಳಿಯಲು ಸಾಧ್ಯ. ಡಾಕ್ಟರುಗಳ ಅಭಿಪ್ರಾಯದ ಪ್ರಕಾರ ವ್ಯಕ್ತಿಯು ಯಥಾವತ್ತಾಗಿ ನಿರ್ವಿವಾದವಾಗಿ ಇಂಥ ಲಿಂಗ ಎಂದು ಖಚಿತವಾಗಿರುವ ಪ್ರಮೇಯಗಳಲ್ಲೂ ಆ ವ್ಯಕ್ತಿಯಲ್ಲಿ ಪ್ರತಿಲಿಂಗದ ಚಿಹ್ನೆಗಳು ಮೂಲಾಂಕುರ ರೂಪದಲ್ಲಿ ಇದ್ದೇ ಇರುತ್ತವೆ. ಪುಂಸವನ ಎಂದರೆ ಕರ್ಮ ಮಾತ್ರವಲ್ಲ, ಔಷಧಿಯ ಕೊಡುವುದೂ ಆಗಿದೆ. ಯಾರಿಗೆ ಗೊತ್ತು. ಪುಂಸವನವನ್ನು ಸರಿಯಾಗಿ ನಡೆಸಿದರೆ ಬೆಳೆದು ಪ್ರಾಯ ಸಮರ್ಥರಾದವರ ಲಿಂಗವನ್ನೂ ಬದಲಾಯಿಸಬಹುದೇನೋ, ಏಕೆಂದರೆ ಮಂತ್ರವೋಕ್ತವಾದ ಔಷದಿಯಿಂದ ಗ್ರಂಥಿಗಳ ಸ್ರವಣವು ಬದಲಾಗಿ ಅದರ ಸ್ವರೂಪವೆ ಮಾರ್ಪಾಡಾಗಬಹುದು. ಆಂಡ್ರಿಯಾಸ್ ಮತ್ತು ಓಬಲಮ್ಮ ಪ್ರಕರಣಗಳಿಂದ ತಿಳಿಯುವುದೇನೆಂದರೆ, ಲಿಂಗವು ವ್ಯತ್ಯಾಸ ಸಾಧ್ಯ ಮತ್ತು ಪ್ರಾಚೀನ ಹಿಂದುಗಳು ಈ ವಿಚಾರವನ್ನು ಕುರಿತು ಹೇಳಿರುವ ಮಾತುಗಳು ಕೇವಲ ಕಲ್ಪನೆಯಲ್ಲ, ಗಟ್ಟಿಯಾದ ವೈಜ್ಞಾನಿಕ ಆಧಾರವುಳ್ಳವು ಎಂದು.

ಜ್ಯೋತಿಷ ಮತ್ತು ವೈದ್ಯ ಕುರಿತ ಪ್ರಾಚೀನ ಸಂಸ್ಕೃತ ಗ್ರಂಥಗಳನ್ನು ಪರಿಶೀಲಿಸುವುದರಿಂದ ಪುಂಸವನವು, ಭ್ರೂಣಾವಸ್ಥೆಯನ್ನು ಗ್ರಹಗತಿಗಳು ಹೇಗೆ ಪ್ರಭಾವಿಸುತ್ತವೆ ಎಂಬುದನ್ನು ನಿಕಟವಾಗಿ ಕುರಿತದ್ದು ಎಂದು ವ್ಯಕ್ತಪಡುತ್ತದೆ. ವೀರ್ಯವು ಅಂಡವನ್ನು ಕೊಡುವ ಬೀಜಾಂಕುರ, ನಭೀಕೃತವಾದ ಅಂಡವು ಗರ್ಭಕೋಶದಲ್ಲಿ ಸ್ಥಾಪನೆಯಾಗುವ ಗರ್ಭಧಾರಣೆ, ಭ್ರೂಣದ ಬೆಳವಣಿಗೆ ಇವೆಲ್ಲ ಅವಸ್ಥೆಗಳೂ ಚಂದ್ರನ ಮತ್ತು ಇತರೆ ಗ್ರಹಗಳ ಅಧಿಪತ್ಯಕ್ಕೆ ಒಳಗಾಗಿವೆ.

ಯಾವ ಜನನವೂ ಆಕಸ್ಮಿಕವಲ್ಲ. ಬಹುತೇಕವಾಗಿ, ಸ್ತ್ರೀಪುರುಷ ಸಂಗವಾದ ಕೂಡಲೇ ಗರ್ಭಾಂಕುರವಾಗುತ್ತದೆ. ಓಂದುಗಳು ಸಾಧಾರಣವಾಗಿ ಸಂಗದ ಕಾಲವನ್ನೇ ನಿಷೇಕ ಲಗ್ನಕ್ಕೆ ತೆಗೆದುಕೊಳ್ಳುವುದು. ಬೀಜಾಂಕುರದಿಂದ ಓಡಿದು ಪ್ರಸವದವರೆಗಣ ಗರ್ಭಾವಸ್ಥೆಯಲ್ಲಿ ಭ್ರೂಣವು ಶಿಶುವಾಗಿ ಬೆಳೆಯುತ್ತದೆ. ಮೂರನೇ ವಾರದಿಂದ ಭ್ರೂಣದಲ್ಲಿ ತಲೆಭಾಗವಾಗಿ ಸ್ಪಷ್ಟವಾಗಿ ಬೆಳೆಯುತ್ತದೆ. ಮೂರನೇ ವಾರದ ತರುವಾಯ ಹೃದಯವೇ ಮುಂತಾದ ಅಂಗಾಂಗಗಳೆಲ್ಲ ಮೂಡುತ್ತವೆ. ಕೈಕಾಲುಗಳು ಮೊಳಕೆ ಯೊಡೆಯುತ್ತವೆ –ಕಪ್ಪೆಯಲ್ಲಾಗುವಂತೆ. ಈ ಅವಸ್ಥೆಯಲ್ಲಿರುವ ಮಿಕ್ಕೆಲ್ಲ ಸಸ್ತನಿ ಪ್ರಾಣಿಗಳ ಭ್ರೂಣವನ್ನೇ ಮನುಷ್ಯನ ಭ್ರೂಣವೂ ಹೋಲುತ್ತದೆ. ಮೊದಲನೆ ತಿಂಗಳಲ್ಲಿ (ಶುಕ್ರನ ಅಧಿಪತ್ಯದಲ್ಲಿ) ಆಗುವ ಬದಲಾವಣೆಗಳೆಂದರೆ ಮುಖ ಮತ್ತು ಹೊರ ಕಿವಿ. ಕೈಕಾಲುಗಳ ವೃದ್ಧಿ, ಕಣ್ಣುಗಳು, ಮೂಗಿನ ರಂಧ್ರ, ದವಡೆಯ ರೂಪ, ಕಿವಿ ಇತ್ಯಾದಿ ಕಾಣಬರುತ್ತವೆ. ಬಸುರಿನ ಎರಡನೇ ತಿಂಗಳಲ್ಲಿ (ಕುಜನ ಅಧಿಪತ್ಯದಲ್ಲಿ) ಗರ್ಭದ ಮೇಲು ಹೊದಿಕೆಯು ರಕ್ತಸ್ರಾವವನ್ನು ಒಳಗೊಳ್ಳುತ್ತದೆ. ಕುಜನು ಒಳಪೊರೆಗಳನ್ನು ಬೆಳೆಸಿ ದೃಢಗ್ರಾ ಆಗಿಸುತ್ತಾನೆ. ಮಿದುಳು ಬೆಳೆಯತೊಡಗುತ್ತದೆ. ತಲೆಯ ಗಾತ್ರ ದೊಡ್ಡದಾಗುತ್ತದೆ. ಮಾನವ ಲಕ್ಷಣಗಳು ವ್ಯಕ್ತವಾಗುತ್ತವೆ. ಈಗ ಭ್ರೂಣವು ಮಗುವಿನ ಲಕ್ಷಣವನ್ನು ತಾಳತೊಡಗುತ್ತದೆ. ಅಂದರೆ ಭ್ರೂಣಾವಸ್ಥೆಯು ಚತುಷ್ಪಾದ ಲಕ್ಷಣಗಳನ್ನು ದಾಟಿ ಬೆಳೆಯತೊಡಗುತ್ತದೆ.

ಈಗ ಮೂರನೇ ತಿಂಗಳು, ಗುರುವಿನ ಪ್ರಭಾವಕ್ಕೊಳಪಡುತ್ತದೆ. ತಂದೆ ತಾಯಿಗಳು ಅಪೇಕ್ಷಿಸುವುದಾದರೆ ಪುಂಸವನ ನಡೆಸಬೇಕಾದ ಕಾಲ. ಈ ಮೂರನೇ ತಿಂಗಳಲ್ಲೇ ಲಿಂಗ ವ್ಯವಸ್ಥೆಯುಂಟಾಗುವುದು. ಜನನಾಂಗಗಳು ಪ್ರಾದುರ್ಭವಿಸುತ್ತವೆ. ಗಂಡು ಗ್ರಹರಾದ ಗುರು ಈ ತಿಂಗಳ ಅಧಿಪತಿ. ಇದರಿಂದ ನಮ್ಮ ಪ್ರಾಚೀನರು ಅತ್ಯಂತ ವೈಜ್ಞಾನಿಕವಾದ ಕಾರಣಗಳಿಗಾಗಿ ಪುಂಸವನವನ್ನು ಈ ತಿಂಗಳಲ್ಲಿ ಇಟ್ಟುಕೊಂಡಿರುವುದು ಕಾಣಬರುತ್ತದೆ. ಮೂರನೇ ತಿಂಗಳಲ್ಲಿ ಲಿಂಗಬೇದವು ಉಂಟಾಗುತ್ತದೆಯಾದ ಕಾರಣ, ಕೆಲವು ನಕ್ಷತ್ರಗಳ ಪ್ರಭಾವದಲ್ಲಿ ಪ್ರಯೋಗಿಸಿದ ಮಂತ್ರ ಔಷಧಿಗಳು ಇಚ್ಛಾನುಸಾರ ಭ್ರೂಣದ ಲಿಂಗವನ್ನು ಬದಲಾಯಿಸಲು ಸಮರ್ಥವಾಗಿರುತ್ತವೆ. ಇಂಥ ಪ್ರಕರಣಗಳ ಬಗ್ಗೆ ಗಹನವಾದ ವಿಚಾರವನ್ನು ನಡೆಸುವ ಗೋಜಿಗೆ ಹೋಗದು. ಆಧುನಿಕ ವ್ಯಕ್ತಿ ಈ ಇಡೀ ಪ್ರಕರಣವನ್ನು ಕಂದಾಚಾರವೆಂದು ತಿರಸ್ಕರಿಸುವ ಸಂಭವವಿದೆ.

ಪ್ರಖ್ಯಾತವಾದ **ಚರಕಸಂಹಿತ** ದಿಂದ ನಾವು ಈಗ ಕೆಲವು ಸೂಚನೆಗಳನ್ನು ಕೊಡುತ್ತೇವೆ. ಅದರ ಪ್ರಯೋಜನವನ್ನು ಪಡೆಯುವುದು ವಾಚಕರಿಗೆ ಸೇರಿರುವ ವಿಷಯ.

*ಚರಕ ಹೀಗೆ ಹೇಳುತ್ತಾನೆ:* "ಗರ್ಭದಲ್ಲಿರುವ ಮಗುವು ರೂಪಲಕ್ಷಣಗಳನ್ನು ಪಡೆಯುವುದಕ್ಕೆ ಮುಂಚೆಯೇ ಅದರ ಲಿಂಗವನ್ನು ಬದಲಾಯಿಸಿಕೊಳ್ಳಲು ಆಚರಿಸಬೇಕಾದ ವಿಧಿಗಳು ಯಾವುವು ಎಂಬುದನ್ನು ನಿರೂಪಿಸಲಾಗುವುದು. ಈ ಕರ್ಮಗಳನ್ನು ಯಥಾವಿಧಿಯಾಗಿಯೂ ದೇಶ ಕಲಾನುಗುಣವಾಗಿಯೂ ನಡೆಸುವುದರಿಂದ ಇಚ್ಚಿಸಿದ ಫಲ ಪಡೆಯಲು ಶಕ್ಯ. ಸ್ತ್ರೀ ಗರ್ಭವತಿ ಆಗಿರುವುದನ್ನು ಮನಗಂಡು ಗರ್ಭದಲ್ಲಿರುವ ಮಗುವಿಗೆ ಲಿಂಗ ವ್ಯವಸ್ಥೆ ಆಗುವುದಕ್ಕೆ ಮುಂಚೆಯೇ ಪುಂಸವನವನ್ನು ಆಚರಿಸಬೇಕು.

"ವನದ ರೂಪದಲ್ಲಿ ಬೆಳೆಯುವ ಆಲದ ಮರದ ಪೂರ್ವದ ಕಡೆಯಿಂದಲೂ ಪಶ್ಚಿಮದ ಕಡೆಯಿಂದಲೂ ಎರಡೂ ರೆಂಬೆಗಳನ್ನು ಪಡೆದು ಅವುಗಳಲ್ಲಿರುವ ಎರಡು ಮುರಿದ ಮೊಗ್ಗುಗಳನ್ನು ತೆಗೆದುಕೊಳ್ಳುವುದು. ಹಾಗೇ ಒಂದು ಭತ್ತದ ಕಾಳು, ಒಂದು ಉದ್ದಿನ ಕಾಳು ತೆಗೆದುಕೊಳ್ಳುವುದು. ಎರಡೂ ಚೆನ್ನಾಗಿ ಬಲಿತಿರಬೇಕು. ಇಲ್ಲವೆ ಎರಡು ಬಿಳಿ ಸಾಸುವೆ ಕಾಳು ತೆಗೆದುಕೊಂಡು, ಅವನ್ನು ಮೊಸರಿನಲ್ಲಿ ಹಾಕಿಡುವುದು. ಅದನ್ನು ಪುಷ್ಯ ನಕ್ಷತ್ರವಿದ್ದಾಗ ಗರ್ಭಿಣಿ ಕುಡಿಯತಕ್ಕದ್ದು".

*ಪುಂಸವನಕ್ಕೆ ಮತ್ತೊಂದು ಔಷಧಿಯನ್ನು ಹೇಳಲಾಗಿದೆ :*

ಟೀವಲ್ಕ * ಋಷಭಕ, ** ಅಪಾಮಾರ್ಗ*** ಅಥವಾ ಸಹಚರ**** ತೆಗೆದುಕೊಂಡು ನೀರಿನಲ್ಲಿ ಕಲಸಿ ಓಟ್ಟು ಮಾಡುವುದು. ಪ್ರತ್ಯೇಕವಾಗಿ ಮಾಡಿದರೂ ಸರಿಯೆ. ಹದ ಮಾಡಿದ ಓಟ್ಟನ್ನು ಹಾಲಿನಲ್ಲಿ ಕುದಿಸಿ, ಗರ್ಭಿಣಿಗೆ ಕುಡಿಯಲು ಕೊಡುವುದು.

"ಅಥವಾ ಮನುಷ್ಯ ವಿಗ್ರಹವನ್ನು ಚಿನ್ನದಲ್ಲೋ, ಬೆಳ್ಳಿಯಲ್ಲೋ, ಕಬ್ಬಿಣದಲ್ಲೋ ಮಾಡಿಸಿ, ಬೆಂಕಿಯಲ್ಲಿ ಅದನ್ನು ಕೆಂಪಾಗುವಂತೆ ಕಾಯಿಸಿ, ಹಾಲಿನಲ್ಲೋ, ಮೊಸರಿನಲ್ಲೋ, ನೀರಿನಲ್ಲೋ ಅದನ್ನು ಅದ್ದುದು. ಆ ನೀರನ್ನು ಕೊಂಚವೂ ಬಳಸದಂತೆ ಗರ್ಭಿಣಿಯು ಕುಡಿಯತಕ್ಕದ್ದು. ಇದನ್ನು ಪುಷ್ಯ ನಕ್ಷತ್ರದ ದಿವಸ

---

* ಜೀವಕ ಯಾವುದೆಂದು ಈಗ ಗೊತ್ತಿಲ್ಲ. ಅದರ ಬದಲು ವೈದ್ಯರು ಗುಡೂಚಿಯನ್ನು ಬಳಸುತ್ತಿದ್ದಾರೆ.

** ಇದೂ ಯಾವುದೆಂದು ಖಚಿತವಾಗಿಲ್ಲ . ಬದಲು ವಂಗಲೋಚನ ಬಳಸುತ್ತಾರೆ.

***

****

ಮಾಡಬೇಕು. ಅದೇ ಪುಷ್ಯ ನಕ್ಷತ್ರದ ದಿವಸ, ಬೆಂಕಿಯಲ್ಲಿ ಬೇಯಿಸುತ್ತಿರುವ ಯಾವುದೇ ಹಿಟ್ಟಿನ ರೊಟ್ಟಿಯಿಂದ ಹೊರಬರುವ ಹಬೆಯನ್ನು ಗರ್ಭಿಣಿಯು ಉಚ್ಛ್ವಾಸ ಮಾಡುವುದು. ಮತ್ತು ಆ ರೊಟ್ಟಿಯನ್ನು ನೀರಿನಲ್ಲಿ ಹಿಸಕಿದ ತರುವಾಯ ಆ ಮಿಶ್ರಣವನ್ನು ಹೊಸ್ತಿಲ ಮೇಲೆ ಚೆಲ್ಲತಕ್ಕದ್ದು. ಗರ್ಭಿಣಿಯು ಆ ನೀರನ್ನು ಹತ್ತಿಸುತ್ತಿದ್ದ ಕಡ್ಡಿಯಿಂದ ತೆಗೆದುಕೊಂಡು ಬಲಮೂಗಿನ ರಂಧ್ರಕ್ಕೆ ಹಚ್ಚಿಕೊಳ್ಳತಕ್ಕದ್ದು"

ಮೇಲೆ ಸೂಚಿಸಿರುವ ರೀತಿಯಲ್ಲಿ ಶುಭನಕ್ಷತ್ರದ ಅನುಕೂಲಕರವಾದ ಪ್ರಭಾವದಲ್ಲಿ ಔಷಧಿ ಸೇವಿಸಿದರೆ ಗರ್ಭದಲ್ಲಿರುವ ಶಿಶುವಿನ ಲಿಂಗವನ್ನು ಬದಲಾಯಿಸಬಹುದೆಂದು ಭಾವಿಸಲಾಗಿದೆ. ಇದು ತುಂಬ ವಿಸ್ತಾರವಾದ ವಿಷಯ. ಮತ್ತೆ ಯಥೋಚಿತವಾದ ಕಡೆ ಈ ವಿಷಯಕ್ಕೆ ನಾವು ಬರುತ್ತೇವೆ. ಈ ಎಲ್ಲ ವಿಧಾನಗಳನ್ನು ಯಾರು ತಿಳಿದುಕೊಂಡಿದ್ದಾರೆ, ಯಾರು ಪ್ರಯೋಗಿಸಿಕೊಂಡಿದ್ದಾರೆ? ಅವು ಅಪ್ರಯೋಜಕ ಮತ್ತು ಅವೈಜ್ಞಾನಿಕ ಎಂದು ನಿಮಗೆ ಆ ಬಗ್ಗೆ ಏನೂ ತಿಳಿಯದೆ ಇದ್ದರೂ ಯಾಕೆ ಕೆಟ್ಟ ಹೆಸರಿಡುವುದು?

ಮೂರನೇ ತಿಂಗಳಲ್ಲಿ ಬಸುರಿನ ಲಕ್ಷಣಗಳು ಸ್ಪಷ್ಟವಾಗಿ ಕಂಡುಬರುವಾಗ ಪುಂಸವನವನ್ನು ಆಚರಿಸತಕ್ಕದ್ದು. ಚೌತಿ, ಷಷ್ಠಿ, ಅಷ್ಟಮಿ, ನವಮಿ, ದ್ವಾದಶಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆ ಬಿಟ್ಟರೆ ಬಾಕಿ ಯಾವ ತಿಥಿಯಾದರೂ ಒಳ್ಳೆಯದು.

ಮಿಥುನ, ಕಟಕ, ಕನ್ಯಾ ಬಿಟ್ಟು ಯಾವ ರಾಶಿಗಳೂ ಶ್ರೇಷ್ಠ ಕನ್ಯೆಯು ವಿಶೇಷವಾಗಿ ಪ್ರತಿಕೂಲವಾದ ಕಾರಣ ಅದನ್ನು ಕಡ್ಡಾಯವಾಗಿ ಬಿಡತಕ್ಕದ್ದು.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಶುಭಕರ. ಲಗ್ನದಿಂದ ಎಂಟನೆ ಮನೆ ಖಾಲಿಯಾಗಿರಬೇಕು. ಲಗ್ನದಲ್ಲೋ, ಹನ್ನೆರಡರಲ್ಲೋ ಚಂದ್ರನಿದ್ದು, ಶುಕ್ರನ ದೃಷ್ಟಿಗೊಳಗಾಗಿದ್ದರೆ ಅದು ಸಂಪತ್ಕರ. ಶುಭಗ್ರಹಗಳು ಕೇಂದ್ರದಲ್ಲೋ ಕೋಣದಲ್ಲೋ ಇರತಕ್ಕದ್ದು.

ಪುಂಸವನವಾದ ತರುವಾಯ ಐದನೆಯ ತಿಂಗಳಲ್ಲೋ ಅಥವಾ ಏಳನೆಯ ತಿಂಗಳಲ್ಲೋ ಮಾಡಬೇಕಾದ ಮತ್ತೊಂದು ಸಂಸ್ಕಾರವೆಂದರೆ ಸೀಮಂತ. ಇದನ್ನು ಚೊಚ್ಚಲು ಬಸುರಿಯರಿಗೆ ಮಾತ್ರ ಹೇಳಿದೆ. ಸಕಾಲದಲ್ಲಿ ಈ ಕರ್ಮವನ್ನು ಮಾಡಲು ಆಗದೆ ಹೋದರೆ, ಅದನ್ನು ಕೈಬಿಡಬಾರದು. ಹೆರಿಗೆಗೆ ಮುಂಚಿತವಾಗಿ ಯಥಾನುಕೂಲವಾಗಿ ಯಾವಾಗಲಾದರೂ ಮಾಡುವುದು ಉತ್ತಮ ಪಕ್ಷ. ಶಂಖ ಋಷಿಯ ಅಭಿಮತ ಅದು.

ಸೀಮಂತಕ್ಕೆ ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯಮಿ, ಉತ್ತರ, ಉತ್ತರಾಷಾಢ, ಹಸ್ತ, ಶ್ರವಣ ಮತ್ತು ರೇವತಿ ಪ್ರಶಸ್ತವಾದವು. ಯತ್ನವಿಲ್ಲದೆ ಬಂದಾಗ, ಅಶ್ವಿನಿ, ಅನೂರಾಧಾ, ಮೂಲಾ ನಕ್ಷತ್ರಗಳಾದರೂ ಮಾನ್ಯವೆಂದು ಕೆಲವರ ಅಭಿಪ್ರಾಯ. ಚೌತಿ, ಷಷ್ಠಿ, ಅಷ್ಟಮಿ, ನವಮಿ, ಚತುರ್ದಶಿ, ಅಮಾವಾಸ್ಯ ಹುಣ್ಣಿಮೆ ದಿವಸಗಳನ್ನು ಬಿಡಬೇಕು.

ಚಂದ್ರನು ಹುಣ್ಣಿಮೆಯಂದು ಸಂಪನ್ನನಾಗಿದ್ದರೆ, ಅದೇನೋ ತ್ಯಾಜ್ಯವಲ್ಲ. ಭಾನುವಾರ, ಮಂಗಳವಾರ, ಶನಿವಾರ ಕೂಡದು. ಇತರೆ ವಾರದ ದಿವಸಗಳು ಒಳ್ಳೆಯವು. ಸಿಂಹ, ವೃಶ್ಚಿಕ ಬಿಟ್ಟರೆ ಉಳಿದೆಲ್ಲ ರಾಶಿಗೂ ಶುಭಪ್ರದ. ಲಗ್ನದಿಂದ ಎಂಟನೆ ಮನೆ ಖಾಲಿಯಾಗಿರಬೇಕು. ಸಾಧಾರಣವಾಗಿ ಮೂರನೇ, ಐದನೆ, ಏಳನೇ, ಹತ್ತನೆ, ಇಪ್ಪತ್ತೆರಡನೆ ನಕ್ಷತ್ರಗಳನ್ನು ಬಿಡಬೇಕು. ಚಂದ್ರ ಎಂಟನೆಯ ಮನೆಯಲ್ಲಿರಬಾರದು. ಈ ಸಂಸ್ಕಾರಕ್ಕೆ ತಿಂಗಳು ಸರ್ವಥಾ ಶ್ರೇಷ್ಠವಾಗಿರಬೇಕು. ಅದು ಪ್ರಥಮ ಪ್ರಾಮುಖ್ಯ. ಆದ ಕಾರಣ, ಶುಕ್ರ, ಗುರುಗಳು ಅಸ್ತರಾಗಿದ್ದರೂ ಕೂಡ ಅದನ್ನು ಕಡೆಗಾಣಬಹುದು.

*ಎಂಟನೆ ಅಧ್ಯಾಯ*

# ಜನನೋತ್ತರ ಸಂಸ್ಕಾರಗಳು

*ನಾಮಕರಣ:*

ಮಗುವು ಹುಟ್ಟಿದ ಮೇಲೆ ಹತ್ತನೆ, ಹನ್ನೆರಡನೇ ಅಥವಾ ಹದಿನಾರನೇ ದಿವಸ ಈ ಕರ್ಮವನ್ನು ಆಚರಿಸತಕ್ಕುದು. ಇದು ಸಾಧ್ಯವಾಗದೆ ಹೋದರೆ ಬೇರೆ ಯಾವತ್ತಾದರೂ ಶುಭ ದಿವಸವನ್ನು ಗೊತ್ತುಮಾಡಿಕೊಳ್ಳಬಹುದು.

ಅನೂರಾಧ, ಪುನರ್ವಸು, ಮಖ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ಶತಭಿಷ, ಸ್ವಾತಿ, ಧನಿಷ್ಠ, ಶ್ರವಣ, ರೋಹಿಣಿ, ಅಶ್ವಿನಿ, ಮೃಗಶಿರ, ರೇವತಿ, ಹಸ್ತ ಪುಷ್ಯ ನಕ್ಷತ್ರಗಳು ಪ್ರಶಸ್ತ.

ಚೌತಿ, ಷಷ್ಠಿ, ಅಷ್ಟಮಿ, ನವಮಿ, ದ್ವಾದಶಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯ ತಿಥಿಗಳನ್ನು ಬಿಡಬೇಕು.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಒಳ್ಳೆಯವು. ಇತರೆ ವಾರದ ದಿವಸಗಳು ಅಷ್ಟು ಒಳ್ಳೆಯವಲ್ಲ. ಸಾಧ್ಯವಾದಮಟ್ಟಿಗೂ ಲಗ್ನವು ಪ್ರಬಲವಾಗಿರಬೇಕು. ಎಂಟನೆ ಮನೆಯಲ್ಲಿ ಯಾವ ಗ್ರಹವೂ ಇರಕೂಡದು. ಸ್ಥಿರ ರಾಶಿಗಳು ಮಾನ್ಯ. ಉಭಯ ರಾಶಿಗಳಲ್ಲಿ ಶುಭ ಗ್ರಹಗಳಿದ್ದರೆ ಶುಭಕರ.

ಗುರುವು ಕೇಂದ್ರದಲ್ಲೋ, ಕೋಣದಲ್ಲೋ ಇದ್ದು ಹನ್ನೊಂದನೆ ಮನೆಯಲ್ಲಿ ಪಾಪಗ್ರಹವಿದ್ದರೆ, ಅದು ತುಂಬ ಪ್ರಶಸ್ತವೆನ್ನಲಾಗಿದೆ.

ಇಷ್ಟೇ ಶುಭಕರವಾದ ಮತ್ತೊಂದು ಮುಹೂರ್ತವೆಂದರೆ, ಲಗ್ನವು ಶುಭರಾಸಿಯಾಗಿದ್ದು ಮೂರರಲ್ಲಿ ಒಬ್ಬ ಪಾಪಿ, ಹನ್ನೆರಡರಲ್ಲಿ ಶುಕ್ರ ಮತ್ತು ಬಲಿಷ್ಠನಾಗಿ ಚಂದ್ರ ಇರಬೇಕು.

ಸಾಧಾರಣವಾಗಿ ಗಂಡುಮಗುವಿಗೆ ಇರುವ ಹೆಸರು ಸಮಸಂಖ್ಯೆಯ ಅಕ್ಷರಗಳಿಂದ ಕೂಡಿರಬೇಕು. (ರಾಮ, ಕೃಷ್ಣ ಇತ್ಯಾದಿ). ಹೆಣ್ಣು ಮಗುವಿನ ಹೆಸರು ಬೆಸ

ಸಂಖ್ಯೆಯ ಅಕ್ಷರಗಳವಾಗಿರಬೇಕು. (ಪಾರ್ವತಿ, ಜಾನಕಿ ಇತ್ಯಾದಿ) ಇಡತಕ್ಕ ಹೆಸರು ಜನ್ಮ ನಕ್ಷತ್ರಗನುಗುಣವಾಗಿರಬೇಕು.

*ತೊಟ್ಟಿಲಿಡುವುದು :*

ಇದಕ್ಕೆ ಒಳ್ಳೆಯ ದಿವಸವೆಂದರೆ ಮಗು ಹುಟ್ಟಿದ ಹತ್ತನೆ, ಹನ್ನೆರಡನೆ, ಹದಿನಾರನೆ ಅಥವಾ ಇಪ್ಪತ್ತೆರಡನೆ ದಿವಸ.

*ಅನ್ನಪ್ರಾಶನ :*

ಮಗುವಿಗೆ ಮೊದಲ ಸಲ ಅನ್ನವುಣಿಸುವುದಕ್ಕೆ ಅಂದರೆ ಅನ್ನಪ್ರಾಶನ ಮಾಡಿಸುವುದಕ್ಕೆ ಮಗುವಿನ ಆರನೆ, ಎಂಟನೆ, ಒಂಭತ್ತನೆ ಅಥವಾ ಹನ್ನೆರಡನೆ ತಿಂಗಳಲ್ಲಿ ಅಶ್ವಿನಿ, ಮೃಗಶಿರ, ಪುನರ್ವಸು, ಧನಿಷ್ಠ ಪುಷ್ಯಮಿ, ಹಸ್ತ, ಸ್ವಾತಿ, ಅನೂರಾಧ, ಶ್ರವಣ, ಶತಭಿಷ, ಉತ್ತರ, ಚಿತ್ತ ನಕ್ಷತ್ರಗಳಿರುವ ದಿವಸ ಶ್ರೇಷ್ಠ. ಅಂದರೆ ಅಶುಭವಾದ ತಿಥಿಗಳನ್ನು ಬಿಡಬೇಕು. ಹತ್ತನೆ ಮನೆಗಳಲ್ಲಿ ಗ್ರಹಗಳು ಇರಬಾರದು. ಆರ್ದ್ರಾ, ಕೃತ್ತಿಕ, ಜ್ಯೇಷ್ಠ, ಭರಣಿ, ಆಶ್ಲೇಷ, ಪೂರ್ವಾಷಾಢಾ, ಪೂರ್ವಾಭಾದ್ರ ನಕ್ಷತ್ರಗಳು ಒಳ್ಳೆಯವಲ್ಲ.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಒಳ್ಳೆಯ ದಿವಸಗಳು. ಮೇಷ, ವೃಶ್ಚಿಕ, ಮೀನ ರಾಶಿಗಳು ಅಶುಭ. ಬುಧ, ಕುಜ, ಶುಕ್ರರು ಕ್ರಮವಾಗಿ ಏಳನೆ, ಎಂಟನೆ, ಒಂಭತ್ತನೆ ಮನೆಗಳಲ್ಲಿರಬಾರದು. ಬುಧನೋ, ಶುಕ್ರನೋ, ಗುರುವೋ ಲಗ್ನದಲ್ಲಿದ್ದರೆ ತುಂಬ ಪ್ರಶಸ್ತ. ಲಗ್ನದಲ್ಲಿ ಯಾವ ಪಾಪಗ್ರಹವು ಇರಕೂಡದು.

ಈ ಕರ್ಮದಲ್ಲಿ ಅತ್ಯಂತ ಮುಖ್ಯವಾದ ಅಂಶವೆಂದರೆ ತಿಂಗಳು. ಆದಕಾರಣ ಗುರು ಶುಕ್ರ ಹಸ್ತವಾಗಿದ್ದರೂ ಪರವಾಗಿಲ್ಲ.

*ಕಿವಿ ಚುಚ್ಚುವುದು (ಕರ್ಣವೇಧ) :*

ಮಗು ಹುಟ್ಟಿದ ಹನ್ನೆರಡನೆ ದಿವಸದಲ್ಲೋ, ಹದಿನಾರನೆ ದಿವಸದಲ್ಲೋ ಕಿವಿ ಚುಚ್ಚಬಹುದು ಅಥವಾ ಆರನೆ, ಏಳನೇ, ಎಂಟನೇ ತಿಂಗಳಲ್ಲಾದರೂ ಮಾಡಬಹುದು. ಮಧ್ಯಾಹ್ನಾತ್ಪರ ಅಥವಾ ಅಪರಾಹ್ನದಲ್ಲಾಗಬಹುದು. ರಾತ್ರಿ ಕೂಡದು. ಎರಡು ನಕ್ಷತ್ರಗಳೋ, ಎರಡು ತಿಥಿಗಳೋ ಇರುವ ದಿವಸ ಇರಕೂಡದು. ಇತರೆ ಅಶುಭವಾದ ದಿವಸಗಳೂ ಕೂಡದು.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಒಳ್ಳೆಯವು. ಕಿವಿ ಚುಚ್ಚುವ ವೇಳೆಯಲ್ಲಿ ಎಂಟನೆ ಮನೆ ಖಾಲಿಯಾಗಿರಬೇಕು. ಕುಂಭ, ಸಿಂಹ, ವೃಶ್ಚಿಕ, ರಾಶಿಗಳನ್ನು ತ್ಯಜಿಸಬೇಕು.

*ಚೌಲ :*

ಚೌಲವು ತುಂಬಾ ಪ್ರಮುಖವಾದ ಸಂಸ್ಕಾರ ಎಂದು ತಿಳಿದವರು ಹೇಳುತ್ತಾರೆ. ಏಕೆಂದರೆ ಅದು ಮೊದಲ ಸಲ ಕೂದಲನ್ನು ಕತ್ತರಿಸುವುದು. ಆಗ ಕೂದಲಿಂದ ಮೊದಲ ಸಲ ವಿದ್ಯುತ್ ಪ್ರವಾಹಗಳು ಹೊರಬರಲು ಆರಂಭವಾಗುತ್ತದೆ. ಕ್ರಮವಾಗಿ ಈ ಸಂಸ್ಕಾರವನ್ನು ನಡೆಸುವುದರಿಂದ ಮಗುವಿಗೆ ದೀರ್ಘಾಯುವನ್ನು ಕೊಡುತ್ತದೆ ಎನ್ನುತ್ತಾರೆ. ಮಗುವಿನ ತಾಯಿ ಬಸಿರಾಗಿರುವಾಗ ಈ ಕರ್ಮವನ್ನು ನಡೆಸಬಾರದು. ಚೌಲವನ್ನು ಮೂರನೆ ಅಥವಾ ಐದನೆಯ ವಯಸ್ಸಿನಲ್ಲಿ ಗುರು, ಶುಕ್ರರು ಅಸ್ತಂಗತರಾಗದೆ ಇರುವಾಗ ಸೂರ್ಯನು ಕರ್ಕಾಟಕ ಸಂಕ್ರಾಂತಿ ವೃತ್ತದಲ್ಲಿರುವಾಗ ನಡೆಸಬಾರದು. ಶುಕ್ಲಪಕ್ಷವು ಆಯುರ್ವರ್ಧಕ. ಕೃಷ್ಣಪಕ್ಷವು ಆರೋಗ್ಯಹಾನಿ ಮಾಡುತ್ತದೆ ಎನ್ನುತ್ತಾರೆ.

ಬಿದಿಗೆ, ತದಿಗೆ, ಪಂಚಮಿ, ಸಪ್ತಮಿ, ದಶಮಿ, ಏಕಾದಶಿ, ತ್ರಯೋದಶಿ ತಿಥಿಗಳು ಒಳ್ಳೆಯವು. ಚೌತಿ, ಪಾಡ್ಯ, ಷಷ್ಠಿ, ಅಷ್ಟಮಿ, ನವಮಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯಗಳು ತ್ಯಾಜ್ಯ.

ಪುನರ್ವಸು, ಮೃಗಶಿರ, ಧನಿಷ್ಠ, ಶ್ರವಣ, ರೇವತಿ, ಪುಷ್ಯ, ಚಿತ್ತ, ಅಶ್ವಿನಿ, ಹಸ್ತ ಶುಭಕರ; ಸ್ವಾತಿ, ರೋಹಿಣಿ, ಶತಭಿಷ, ಉತ್ತರ, ಉತ್ತರಾಭಾದ್ರ, ಉತ್ತರಾಷಾಢ ಸಾಮಾನ್ಯ. ಚೌಲವನ್ನು ಯಾವಾಗಲೂ ಪೂರ್ವಾಹ್ನದಲ್ಲಿ ಮಾಡಬೇಕು.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಒಳ್ಳೆಯವು. ಕರ್ಕಾಟಕ, ಕನ್ಯ, ಮಿಥುನ, ಮೀನ, ತುಲ, ವೃಷಭ, ಮಕರ, ಲಗ್ನಗಳು ಒಳ್ಳೆಯ ಫಲ ಕೂಡುತ್ತವೆ. ಉಳಿದವು ಪ್ರಯೋಜನಕಾರಿಯಲ್ಲ. ಆದರೆ ಲಗ್ನದಲ್ಲಿ ಶುಭಗ್ರಹಗಳಿದ್ದು, ಬೇರೆ ರೀತಿಯಲ್ಲೂ ಪ್ರಬಲವಾಗಿದ್ದರೆ ಆ ಲಗ್ನಗಳನ್ನೂ ಇಟ್ಟುಕೊಳ್ಳಬಹುದು. ಹೇಗಾದರೂ ಕುಂಭವು ಎಷ್ಟೇ ಪ್ರಬಲವಾಗಿದ್ದರೂ ಅದನ್ನು ತ್ಯಜಿಸಬೇಕು. ನಾಲ್ಕರಲ್ಲೂ, ಐದರಲ್ಲೂ, ಏಳರಲ್ಲೂ, ಒಂಭತ್ತರಲ್ಲೂ, ಹತ್ತರಲ್ಲೂ, ಹನ್ನೊಂದರಲ್ಲೂ ಶುಭ ಗ್ರಹಗಳಿದ್ದು ಮೂರು, ಆರು, ಹನ್ನೊಂದರಲ್ಲಿ ಪಾಪಗ್ರಹಗಳಿರಲಿ. ಎಂಟನೆ ಮನೆಯು ಗ್ರಹಹೀನವಾಗಿರಲಿ. ಏಳನೆಯ ಮನೆಯಲ್ಲಿ ಸೂರ್ಯನಾಗಲಿ, ಕುಜನಾಗಲಿ ಇಲ್ಲವೆ ಯಾವುದೇ ಅಶುಭಗ್ರಹವಾಗಲಿ ಇಲ್ಲದೆ ಇರಲಿ.

*ಅಕ್ಷರಾಭ್ಯಾಸ :*

ಅಕ್ಷರ ಎಂದರೆ ನಾಶವಿಲ್ಲದ್ದು. ಆದುದರಿಂದ ಅಕ್ಷರವೆಂದರೆ ಅವಿನಾಶಿಯಾದ ಶಬ್ದ ಕಂಪನಗಳನ್ನುಳ್ಳದ್ದು. ಅಂಥ ಶಬ್ದ ಕಂಪನಗಳನ್ನು ಮಗುವಿನ ಕಿವಿಗೆ ಮುಟ್ಟ

ಮೊದಲು ಹಾಕುವಾಗ, ಅದರಲ್ಲಡಗಿರುವ ಸುಪ್ತ ಶಕ್ತಿಗಳನ್ನು ಹೊರತಂದು ಶಿಕ್ಷಣಕಾರ್ಯವು ಸುಗಮವಾಗಿ ನಡೆಯುತ್ತ ಪ್ರಯೋಜನಕಾರಿಯಾಗುವಂತೆ ಮಾಡುವ ಅವಕಾಶಗಳನ್ನು ಕಲ್ಪಿಸಿಕೊಡುವಂಥವಾಗಿರಬೇಕು.

ಅಕ್ಷರಾಭ್ಯಾಸವನ್ನು ಮಾಡಿಸುವುದಕ್ಕೆ ಅತ್ಯಂತ ಪ್ರಶಸ್ತವಾದ ದಿವಸವೆಂದರೆ ಐದನೆ ವರ್ಷದ ಐದನೆ ತಿಂಗಳ ಐದನೆದಿವಸ. ಮುಂದೆ ಹೇಳುವ ದಿವಸ ನಕ್ಷತ್ರಗಳು ಒಳ್ಳೆಯವು. ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ; ಅಶ್ವಿನಿ, ಪುನರ್ವಸು, ಆರ್ದ್ರ, ಹಸ್ತ, ಚಿತ್ತ, ಸ್ವಾತಿ, ಶ್ರವಣ, ರೇವತಿ

ಚರ ದ್ವಿಸ್ವಭಾವ ರಾಶಿಗಳು ಒಳ್ಳೆಯವು.

ಪೂರ್ವಾಹ್ನ ಮಧ್ಯಾಹ್ನ ವೇಳೆ ಆದರಣೀಯ. ಎಂಟನೆಯ ಮನೆ ಬರಿದಾಗಿರಬೇಕು.

ಬುಧ, ಶುಕ್ರ, ಗುರು, ಒಂಭತ್ತರಲ್ಲಿದ್ದರೆ ಎಲ್ಲ ಕೆಡುಕುಗಳನ್ನೂ ನಿವಾರಿಸುತ್ತದೆ.

*ಉಪನಯನ ಅಥವಾ ಮುಂಜಿ :*

ಈ ಸಂಸ್ಕಾರವು, * ಹುಡುಗನ ಅಂತರ ದೃಷ್ಟಿಗೆ ಆಧ್ಯಾತ್ಮಕವಾದ ತೋರಗಣ್ಣನ್ನು ಕೊಟ್ಟು ಅವನಿಗೆ ದಿವ್ಯ ಜ್ಯೋತಿ ಅಥವಾ ದೇವರ ಸಾಮೀಪ್ಯವುಂಟು ಮಾಡುವುದಕ್ಕೆ ತಕ್ಕ ಧಾರ್ಮಿಕ ಉಪದೇಶವನ್ನು ಅಧಿಕಾರ ಪಡೆದವರು ಕೊಡುವ ಪ್ರಕರಣವಾಗಿದೆ. ಇದು ಹಿಂದುಗಳಿಗೆ ವಿಶಿಷ್ಟವಾದ ಸಂಸ್ಕಾರ. ಅದರ ಹೆಸರು ಸೂಚಿಸುವಂತೆ ಮಾನವ ಜನಾಂಗದ ಯಾವ ಪಂಗಡದವರು ಬೇಕಾದರೂ, ಅವರು ಹಿಂದೂಗಳೋ ಅಲ್ಲವೋ ಈ ಅಮೂಲ್ಯವಾದ ಉಪದೇಶಗಳ ಪ್ರಯೋಜನ ಪಡೆದುಕೊಳ್ಳಬಹುದು ಮತ್ತು ಅವರವರ ದೇಶ, ಜಾತಿ, ಸಂಪ್ರದಾಯಗಳಿಗೆ ಒಪ್ಪುವಂತೆ ತಮ್ಮ ಮಕ್ಕಳಿಗೆ ಧಾರ್ಮಿಕ ಶಿಕ್ಷಣವನ್ನು ನೀಡಬಹುದು. ಉಪನಯನವನ್ನು ಐದನೆ ವಯಸ್ಸಿನಲ್ಲೋ, ಎಂಟನೆ ವಯಸ್ಸಿನಲ್ಲೋ ಆಚರಿಸಬೇಕು. ಆಗ ಸಾಧ್ಯವಾಗದೆ ಹೋದರೆ ಬ್ರಾಹ್ಮಣ ವರ್ಗದವರಲ್ಲಿ ಹದಿನಾರನೆ ವರ್ಷಕ್ಕೆ ಮುಂಚಿತವಾಗಿಯೂ ಇತರೆ ಹಿಂದೂ ಸಮುದಾಯದವರಲ್ಲಿ ಇಪ್ಪತ್ತು ಇಪ್ಪತ್ತನಾಲ್ಕನೇ ವಯಸ್ಸಿಗೆ ಮುಂಚಿತವಾಗಿಯೋ ಮಾಡಬೇಕು.

---

* ಪ್ರೊ. ಬಿ. ಸೂರ್ಯನಾರಾಯಣರಾಯರ **ಶುಕ್ಲ ಅಂಡ್ ಪ್ರಮೋದೂತ** ಗ್ರಂಥವನ್ನು ನೋಡಿ.

ಸೂರ್ಯ ಚಂದ್ರ ಗುರುಗಳು ಕ್ರಮವಾಗಿ ತಂದೆ, ತಾಯಿ, ಜೀವ ಚೈತನ್ಯಗಳನ್ನು ಸಂಕೇತಿಸುತ್ತಾರೆ. ಆದಕಾರಣ ಈ ಮೂರು ಗ್ರಹಗಳೂ ಲಗ್ನಕ್ಕೆ ಅನುಕೂಲಸ್ಥರಾಗಿರುವಾಗ ಉಪನಯನವನ್ನು ನಡೆಸಬೇಕು.

ಉಪನಯನಕ್ಕೆ ಉತ್ತಮ ಕಾಲ ಉತ್ತರಾಯಣ. ಆಗ ಸೂರ್ಯ ಮಕರದಿಂದ ಮಿಥುನದವರೆಗಿನ ರಾಶಿಗಳಲ್ಲಿರುತ್ತಾನೆ. ಮಾಘ, ಫಾಲ್ಗುಣ, ಚೈತ್ರ, ವೈಶಾಖ ಮಾಸಗಳು ಒಳ್ಳೆಯವು. ಶುಕ್ಲಪಕ್ಷದ ಬಿದಿಗೆ, ತದಿಗೆ, ಪಂಚಮಿ, ಸಪ್ತಮಿ, ದಶಮಿ, ತ್ರಯೋದಶಿಗಳೂ ಕೃಷ್ಣಪಕ್ಷದ ಪಾಡ್ಯ, ಬಿದಿಗೆ, ತದಿಗೆಗಳೂ ಶುಭಕರವೆಂದು ಭಾವನೆ. ಕೈಬಿಡಬೇಕಾದ ತಿಥಿಗಳು ಯಾವುವೆಂದರೆ ಚೌತಿ, ಷಷ್ಠಿ, ಅಷ್ಟಮಿ, ನವಮಿ, ಏಕಾದಶಿ, ದ್ವಾದಶಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆಗಳು. ಕೆಲವರ ಪ್ರಕಾರ ತ್ರಯೋದಶಿಯೂ ಒಳ್ಳೆಯ ದಿವಸ.

ಇದಕ್ಕೆ ಅಪವಾದ: ಹುಡುಗನಿಗೆ ವಯೋಮಿತಿಯು ಮೀರಿದ್ದರೆ ಚತುರ್ದಶಿಯ ದಿವಸವಾದರೂ ಪರವಾಗಿಲ್ಲ.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಪ್ರಶಸ್ತವಾದವು. ಬುಧನು ಅಸ್ತನಾಗಿದ್ದರೆ ಬುಧವಾರ ತ್ಯಾಜ್ಯ. ಭಾನುವಾರ ಸಾಮಾನ್ಯವಾದುದು. ಮಂಗಳವಾರವನ್ನಂತೂ ಖಂಡಿತ ಬಿಡತಕ್ಕದ್ದು.

ಮುಂದೆ ಹೇಳುವ ನಕ್ಷತ್ರಗಳು ಪ್ರಶಸ್ತವಾದವು. ಅನೂರಾಧಾ, ಹಸ್ತ, ಚಿತ್ತ, ಸ್ವಾತಿ, ಶ್ರವಣ, ಧನಿಷ್ಠ, ಶತಭಿಷ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ರೇವತಿ, ರೋಹಿಣಿ, ಮೃಗಶಿರ, ಅಶ್ವಿನಿ, ಪುನರ್ವಸು, ಪುಷ್ಯಮಿ.

ಮೇಷ, ವೃಷಭ, ಮಿಥುನ, ಕಟಕ, ಕನ್ಯಾ, ತುಲ, ಕುಂಭರಾಶಿಗಳು ಒಳ್ಳೆಯವು. ಇತರೆ ರಾಶಿಗಳನ್ನು ತ್ಯಜಿಸಬೇಕು. ವಶಿಷ್ಠ ಗಾರ್ಗ ಋಷಿಗಳ ಪ್ರಕಾರ ಚೈತ್ರ, ವೈಶಾಖ ಮಾಸಗಳ ಶುಕ್ಲ ತದಿಗೆ ಮತ್ತು ಮಾಘ, ಫಾಲ್ಗುಣಗಳ ಚೈತ್ರ, ಶುದ್ಧ ಸಪ್ತಮಿ ಸರ್ವಶ್ರೇಷ್ಠವಾದ ಚಂದ್ರನು ಆರು, ಎಂಟು, ಹನ್ನೆರಡು ಈ ಮನೆಗಳಲ್ಲಿರಬಾರದು. ಅಶುಭ ಗ್ರಹಗಳು ಕೇಂದ್ರಗಳಲ್ಲಿರಬಾರದು. ಮಧ್ಯಾಹ್ನಕ್ಕೆ ಮುಂಚಿತವಾಗಿ ಉಪನಯನ ನಡೆಯಬೇಕು. ಲಗ್ನದಿಂದ ಎಂಟನೆ ಮನೆ ಗ್ರಹರಹಿತವಾಗಿರಬೇಕು.

ಮೂರನೇ ಮನೆಯಲ್ಲಿ ಶುಭಾಶುಭ ಗ್ರಹಗಳಿದ್ದು ಬಲಯುತವಾಗಿರಬೇಕು. ಆರರಲ್ಲಿ ಶುಭರಿರಬಾರದು. ಐದರಲ್ಲಿ ಕುಜ ಶನಿಗಳು ಇಲ್ಲದಂತೆ ನೋಡಿಕೊಳ್ಳಬೇಕು.

ಲಗ್ನ ಕುಂಡಲಿಯಲ್ಲಿ ಕುಜ, ಚಂದ್ರರು, ಎರಡನೆ ಮನೆಯಲ್ಲಿಲ್ಲದಂತೆ ನೋಡಿಕೊಳ್ಳಬೇಕು. ಅವರಿದ್ದರೆ ಹುಡುಗನ ಬುದ್ಧಿಶಕ್ತಿಯು ಮಂದವಾಗುತ್ತದೆ.

ಅದೇ ರೀತಿಯಾಗಿ ಹನ್ನೆರಡನೆ ಮನೆಯಲ್ಲಿಯೂ ಈ ಎರಡು ಗ್ರಹಗಳು ಇರಕೂಡದು. ಲಗ್ನದಲ್ಲಿ ಚಂದ್ರನಿರಲೇಬಾರದು. ಆದರೆ ಕಟಕ ಲಗ್ನವಾದಾಗ ಚಂದ್ರ, ಗುರು, ಒಟ್ಟಿಗಿರುವುದಾದರೆ ಮೂರು, ಆರು, ಹನ್ನೊಂದರಲ್ಲಿ ಪಾಪಗ್ರಹಗಳಿರುವಂತಾಗಿದ್ದರೆ ಲಗ್ನಸ್ಥ ಚಂದ್ರನ ದೋಷವು ಪರಿಹಾರವಾಗುತ್ತದೆ. ಮುಂದೆ ಸೂಚಿಸಿರುವ ದೋಷಗಳನ್ನು ನಿವಾರಿಸಿಕೊಳ್ಳತಕ್ಕದು:

*ಸ್ಫೂರ್ಜಿತಂ :* ಸೂರ್ಯ ಕೇಂದ್ರದಲ್ಲಿದ್ದರೆ ಈ ಯೋಗವುಂಟಾಗುತ್ತದೆ. ಇದರ ಪರಿಣಾಮ ಕುಟುಂಬ ಹಾನಿ.

*ಸ್ಫೂರಿತಂ :* ಕುಜ ಕೇಂದ್ರಸ್ತನಾಗಿದ್ದರೆ ಈ ಯೋಗವುಂಟಾಗುತ್ತದೆ. ಇದು ಹುಡುಗನ ಗುರುವಿಗೆ ಹಾನಿಯುಂಟುಮಾಡುತ್ತದೆ.

*ರುಧಿಕಂ :* ಶನಿಯು ಕೇಂದ್ರದಲ್ಲಿದ್ದಾಗ ಈ ಯೋಗವುಂಟಾಗಿ ಅದರಿಂದ ವಾಸಿಯಾಗದ ರೋಗಗಳು ಒದಗುತ್ತವೆ.

*ರಂಪ್ರಂ :* ಈ ಯೋಗವು ರಾಹು ಕೇಂದ್ರದಲ್ಲಿರುವುದರಿಂದ ಉಂಟಾಗಿ ತಾಯಿಯ ಆರೋಗ್ಯಕ್ಕೆ ಧಕ್ಕೆಯುಂಟಾಗುತ್ತದೆ.

*ಉಗ್ರಂ :* ಕೇತು ಕೇಂದ್ರಸ್ಥನಾಗಿರುವುದರಿಂದ ಈ ಯೋಗ ಒದಗಿ ಶಿಕ್ಷಣ ಆರೋಗ್ಯಗಳಿಗೆ ಹಾನಿಯುಂಟಾಗುತ್ತದೆ.

ಮೇಲೆ ಹೇಳಿರುವ ಅಶುಭ ಯೋಗಗಳಲ್ಲದೆ, ಚಂದ್ರನು ಶುಭನಿಂದ ಪೀಡಿತನಾಗಿರಬಾರದು. ಹಾಗಿದ್ದರೆ ಹುಡುಗನಿಗೆ ಕುರುಡುಂಟಾಗುತ್ತದೆ. ಚಂದ್ರನು ತನ್ನ ನವಾಂಶದಲ್ಲಾಗಲೀ, ಸೂರ್ಯ ಕುಜರ ನವಾಂಶದಲ್ಲಾಗಲಿ ಇರಕೂಡದು.

ಉಪನಯನಕ್ಕೆ ಮುಂದೆ ಕೊಟ್ಟಿರುವ ಮುಹೂರ್ತಗಳು ತುಂಬ ಪ್ರಶಸ್ತವಾದವು:

(1) ಚಂದ್ರನಿಂದ ಆರರಲ್ಲೋ, ಏಳರಲ್ಲೋ, ಎಂಟರಲ್ಲೋ, ಶುಭಗ್ರಹವಿರಬೇಕು.

(2) ಸೂರ್ಯ ಇಲ್ಲವೆ ಶುಕ್ರ ಹನ್ನೆರಡರಲ್ಲಿದ್ದು ಬುಧನು ಎರಡರಲ್ಲೂ ಗುರುವು ಕೇಂದ್ರದಲ್ಲೋ, ಕೋಣದಲ್ಲೋ ಇರಬೇಕು.

(3) ಲಗ್ನದಲ್ಲಿ ಶುಕ್ರ, ಹತ್ತರಲ್ಲಿ ಬುಧ, ಹನ್ನೊಂದರಲ್ಲಿ ಸೂರ್ಯ, ಶುಭ ನವಾಂಶದಲ್ಲಿ ಚಂದ್ರ ಇರಬೇಕು.

(4) ಮೀನ ಲಗ್ನದಲ್ಲಿ ಗುರು ಅಥವಾ ಶುಕ್ರ, ಸೂರ್ಯ ಹನ್ನೊಂದರಲ್ಲಿ, ಬುಧ ಹತ್ತು ಅಥವಾ ಹನ್ನೆರಡರಲ್ಲಿ ಇರಬೇಕು.

(5) ಮಿಥುನ ಲಗ್ನಕ್ಕೆ ಕುಜ ಮೇಷದಲ್ಲಿ, ಶುಕ್ರ ವೃಷಭದಲ್ಲಿ, ಚಂದ್ರ ಕಟಕದಲ್ಲಿ ಇರಬೇಕು.

# ಮದುವೆ

ಮದುವೆ ಎಂಬುದು ಪರಸ್ಪರ ಸಂಬಂಧವಿಲ್ಲದ ಹಲವಾರು ವ್ಯಕ್ತಿ ಮನೋಗತವೂ ಬಾಹ್ಯ ವಸ್ತುನಿಷ್ಠವೂ ಆದ ಸಂಗತಿಗಳು. ಒಂದಾದ ಮೇಲೊಂದರಂತೆ ಒದಗಿ ಬಂದು ರಚಿಸುವ ಒಂದು ಬಂಧನ ಜಾಲ. ಆದರೆ ನಾವಿಲ್ಲಿ ಮದುವೆಯ ಮನೋ ಜ್ಯೋತಿಷಿಕ ಲಕ್ಷಣವನ್ನು ಕುರಿತವರಾಗಿರುವ ಕಾರಣ ಬಾಹ್ಯವಸ್ತುವಾದ ಕಾನೂನಿನ ಮತ್ತು ಸಾಮಾಜಿಕ ಸ್ವರೂಪದ ಸಂಗತಿಗಳನ್ನು ಕಡೆಗಾಣಬೇಕಾಗಿದೆ. ಈ ಸಂಗತಿಗಳು ಮದುವೆಯಾದ ಜೋಡಿಯ ಮಾನಸಿಕ ಸಂಬಂಧಗಳ ಮೇಲೆ ಪ್ರಬಲವಾದ ಪ್ರಭಾವವನ್ನೇ ಬೀರುತ್ತವೆಂಬುದು ನಿಜ.

ಮದುವೆಯು ಪಾಶವೀಯವಾದ ತೃಪ್ತಿ ಪಡೆಯುವುದಕ್ಕಾಗಿರುವ ಒಂದು ವ್ಯವಸ್ಥೆಯಲ್ಲ. ಮದುವೆ ಎಂಬುದು ಇಷ್ಟಪಟ್ಟಾಗ ಸಮಾಪ್ತಿಗೊಳಿಸತಕ್ಕಂಥ ವ್ಯವ ಹಾರಿಕವಾದ ಒಪ್ಪಂದವಲ್ಲ. ಪವಿತ್ರವಾದ ವಿವಾಹ ಬಂಧನದಲ್ಲಿ ತೊಡಗಿರುವ ಉಭಯ ಪಕ್ಷಗಳವರ ನಡುವೆ ಎಂಥ ಘನವಾದ ಸಂಬಂಧ ಸಂಪತ್ತು ಹೊಣೆ ಗಾರಿಕೆಗಳಿರುತ್ತವೆ. ವ್ಯಾವಹಾರಿಕ ಒಪ್ಪಂದ ಎಂಬ ಮನೋಭಾವ ಇದಕ್ಕೆ ಪ್ರತಿ ಯಾಗಿ ಕೀಳು ಕಲ್ಪನೆಯಾಗಿರುತ್ತದೆ. ಅಮೇರಿಕದ ಮಹಾನ್ ನ್ಯಾಯಮೂರ್ತಿಯೊಬ್ಬರು ಹೇಳಿರುವಂತೆ, "ಮದುವೆ ಒಪ್ಪಂದವು ಉಭಯ ಪಕ್ಷಗಳ ನಡುವಣ ಪೌರ ಒಪ್ಪಂದಕ್ಕಿಂತ ಮಹತ್ವವುಳ್ಳದ್ದು. ಪೌರ ಒಪ್ಪಂದವು ಕೇವಲ ಉಭಯ ಪಕ್ಷಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ವಿವಾಹವು ಕುಟುಂ ಬಕ್ಕೆ ಆಧಾರ ಮತ್ತು ಅದರ ವಿಚ್ಛೇದವೂ ಕೂಡ. ಅದರ ವ್ಯವಸ್ಥೆಯಷ್ಟೇ ಸಾರ್ವ ಜನಿಕ ನೀತಿಗೆ ಸಂಬಂಧಪಟ್ಟದ್ದು. ಅದರಲ್ಲಿ ಸಾರ್ವಜನಿಕರು ಆಳವಾದ ಆಸಕ್ತಿಯುಳ್ಳವರಾಗಿರುತ್ತಾರೆ. ಅದನ್ನು ನಿಯಂತ್ರಣಗೊಳಿಸುವ ವಿವೇಚನೆಗಳು ಇತರೆ ಪೌರ ಒಪ್ಪಂದಗಳಿಗೆ ಅನ್ವಯವಾಗುವುದಕ್ಕಿಂತ ಪ್ರತ್ಯೇಕವಾದವು. ಈ ಒಪ್ಪಂದವನ್ನು ರದ್ದುಪಡಿಸುವಂಥ ಕಾರಣಗಳು ಉಭಯತ್ರರಿಗೆ ಸಂಬಂಧಪಟ್ಟು

ದಕ್ಕಿಂತ ಹೆಚ್ಚಿನ ವ್ಯಾಪ್ತಿಯುಳ್ಳವು. ಯಾವ ವಿಚ್ಛೇದವೂ ಕೂಡ ವಿವಾಹಕ್ಕೆ ಸಂಬಂಧಪಟ್ಟ ಒಪ್ಪಂದದ ಮೂಲತತ್ವಗಳಿಗೆ ಅನ್ಯಯವಾಗದೆ ನಡೆಯುವಂತಿಲ್ಲ.

ಮದುವೆಯು, ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಗಳೆರಡರಲ್ಲೂ ಕೂಡ, ಶಾಶ್ವತವಾಗಿ ಲೈಂಗಿಕ ಸಂಬಂಧವನ್ನು ವ್ಯವಸ್ಥೆಗೊಳಿಸುವುದಕ್ಕೆಂದು ಮಾಡಿಕೊಂಡ ಕರಾರು. ಭಾರತದಲ್ಲಿ ಮದುವೆಯನ್ನು ಧಾರ್ಮಿಕ ಸಂಸ್ಕಾರವೆಂದು ಹಿಂದಿನಿಂದಲೂ ಭಾವಿಸಲಾಗಿದೆ. ಮದುವೆಯಲ್ಲಿ ಉಭಯತ್ರರೂ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳಲ್ಲಿ ಸಮನಾದ ಪಾಲುಗಾರರೆಂದು ಬಗೆಯಲಾಗಿದೆ. ಹಿಂದೂಗಳಿಗೂ ಇತರರಿಗೂ ಇರುವ ಅತ್ಯಂತ ಆಶ್ಚರ್ಯಕರವಾದ ವ್ಯತ್ಯಾಸವೆಂದರೆ ಮದುವೆಯ ಸಾರ್ವತ್ರಿಕ ಲಕ್ಷಣ. ಮದುವೆಯ ಪ್ರಶ್ನೆ ಬಂದಾಗ ಹಲವು ಅಂಶಗಳು ನಮ್ಮ ಗಮನ ಸೆಳೆಯುತ್ತವೆ. ಈ ಪೈಕಿ ಮುಖ್ಯವಾದುವು ದೈಹಿಕದಾರ್ಢ್ಯ; ಮನೋಧರ್ಮ, ವಂಶ ಲಕ್ಷಣಗಳು, ಲೈಂಗಿಕ ಅನುಗುಣ, ಸಾಮಾಜಿಕ ಆರ್ಥಿಕ ಅಂತಸ್ತು.

ಇವತ್ತಿನ ಆಧುನಿಕ ಪ್ರಪಂಚದಲ್ಲಿ ಮದುವೆ ಸಂಬಂಧವಾಗಿ ಲೈಂಗಿಕ ಪ್ರಕರಣವೇ ಅತ್ಯಂತ ಹೆಚ್ಚಿನ ಗಮನ ಪಡೆದಿದ್ದು, ಅಷ್ಟೇ ಪ್ರಮುಖವಾದ ಇತರೆ ಸಾಮಾಜಿಕ, ಮಾನಸಿಕ, ಲಕ್ಷಣಗಳನ್ನು ವಸ್ತುತಃ ಕಡೆಗಾಣಲಾಗಿದೆ. ಹಿಂದು ಶಾಸ್ತ್ರಗಳು ಮಾನವ ದೇಹ ಧರ್ಮಕ್ಕೂ ಈ ನಾಡಿನ ಹವಾಗುಣಕ್ಕೂ ಅನುಗುಣವಾಗಿ ಮದುವೆಗೆ ವಯೋಮಿತಿಗಳನ್ನು ಗೊತ್ತುಪಡಿಸಿವೆ. ಒಂದೇ ಶೋತ್ರದವರ ನಡುವೆ ವಿವಾಹವು ಮಾನ್ಯವಾಗಿಲ್ಲ. ಸಂತಾನದ ಮೇಲುಂಟಾಗಬಹುದಾದ ವಿಷಮ ಪರಿಣಾಮವನ್ನು ನಿವಾರಿಸಲು ಹಾಗೆ ಮಾಡಿದೆ. ಅಂತರ ಕೌಲೀಯ, ಅಂತರ ಜಾತೀಯ, ಅಂತರ ಧರ್ಮೀಯ ವಿವಾಹಗಳೂ ಪುರಸ್ಕೃತವಾಗಿಲ್ಲ. ಏಕೆಂದರೆ ಅಂಥ ವಿವಾಹಗಳಲ್ಲಿ ಸಾಂಸ್ಕೃತಿಕ ವಿಭಿನ್ನತೆಗಳು ಉಂಟಾಗುತ್ತವೆ.

ಈ ಎಲ್ಲ ವಿಷಯಗಳನ್ನೂ ಜಾಗ್ರತವಾಗಿ ಪರಿಶೀಲಿಸಿದ ತರುವಾಯ ಹಿಂದೂಗಳು, ವಿವಾಹ ಸಂಬಂಧದಲ್ಲಿ ಉಂಟಾಗಬಹುದಾದಂಥ ಏರುಪೇರುಗಳನ್ನು ದಂಪತಿಗಳು ತಾಳಿಕೊಳ್ಳಲು ಅನುಗುಣವಾಗಿರುವುದಕ್ಕಾಗಿ ವಿವಾಹದ ಹೊಂದಾಣಿಕೆಯನ್ನು ಜ್ಯೋತಿಷಿಕವಾಗಿ ಅಳವಡಿಸಿಕೊಂಡಿದ್ದಾರೆ. ಶತಶತಮಾನಗಳ ಪ್ರಯೋಗಾನುಭವಗಳನ್ನು ನಡೆಸಿದ ತರುವಾಯ ಹಿಂದೂಗಳು ಏರ್ಪಡಿಸಿಕೊಂಡಿರುವ ಸಮಂಜಸವಾದ ಸುಭದ್ರ ವಿವಾಹ ವ್ಯವಸ್ಥೆಯತ್ತ ತಮ್ಮ ತಿರಸ್ಕಾರ ತೋರಿಸುವ ಲಿಂಗ ವಿಜ್ಞಾನಿಗಳೆಂದು ಕೊಳ್ಳುವವರೂ ಸಮಾಜ ಶಾಸ್ತ್ರಜ್ಞರೆಂದು ಕೊಳ್ಳುವವರೂ

ಭಾರತದಲ್ಲಿ ಕಡಿಮೆಯೇನಿಲ್ಲ. ಪ್ರೇಮ ವ್ಯವಹಾರಗಳಲ್ಲಿ ಅಂಕೆಯಿಲ್ಲದ ಸ್ವೈರಾಚಾರವನ್ನು ಉತ್ತೇಜಿಸುವ ಮತ್ತು ಸಂಗಾತಿಯಾಗಿರಲೆಂದು ಸ್ತ್ರೀ ಪುರುಷರು ಪರಸ್ಪರ ಒತ್ತಟ್ಟಿಗಿರುವ ವಿವಾಹ ವಿಧಾನಗಳನ್ನೂ ಸಮಾಜವಾದೀಯ ತತ್ವಗಳು ಸಮರ್ಥಿಸುತ್ತವಾದರೂ ನಾವು ಅದರ ಗೋಜಿಗೆ ಇಲ್ಲಿ ಹೋಗುವುದಿಲ್ಲ. ಅವು ರಷ್ಯ ಅಮೇರಿಕ ಮುಂತಾದ ನಾನಾ ಕುಲಗಳು ಕಲಸಿ ಹೋಗುತ್ತಿರುವ ದೇಶಗಳಿಗೆ ಸರಿಯಾಗಿರಬಹುದು. ಆದರೆ ಭಾರತದಂಥ ದೇಶಕ್ಕೆ ಅವು ಹೊಂದಾಣಿಕೆಯಾಗುವುದಿಲ್ಲ. ಈ ದೇಶದ ನಾಗರೀಕತೆ ಸಂಸ್ಕೃತಿ ಸಾಮಾಜಿಕ ನಿಯಮಗಳು ಇದರ ಭೌಗೋಳಿಕ ಚಾರಿತ್ರಿಕ ಪರಿಸ್ಥಿತಿಗಳಿಗೆ ವಿಶಿಷ್ಟವಾಗಿದೆ.

ಹಿಂದುಗಳು ವಿವಾಹಕ್ಕೆ ಆಯ್ಕೆ ಮಾಡುವಂಥ ಗೋಜಿನ ಸಮಸ್ಯೆಯನ್ನು ಜ್ಯೋತಿಷದ ಅವಲಂಬನೆಯಿಂದ ಪರಿಹರಿಸಿಕೊಂಡಿದ್ದಾರೆ. ಮದುವೆಯನ್ನು ನಿಷ್ಕರ್ಷೆ ಮಾಡುವುದಕ್ಕೆ ಮುಂಚೆ ವಿವಿಧ ಕೂಟಗಳ ಹೊಂದಾಣಿಕೆಯ ಬಗ್ಗೆ ಪರಿಶೀಲನೆ ನಡೆಸಿದ್ದೇ ಆದರೆ, ಈಗ ನಡೆಯುತ್ತಿರುವುದಕ್ಕಿಂತ ಕಡಿಮೆಯಾಗಿ ದುರಂತಗಳು ಸಂಭವಿಸಿಯಾವು ಮತ್ತು ಕಡಿಮೆ ಪ್ರಮಾಣದಲ್ಲಿ ದಾಂಪತ್ಯ ದ್ರೋಹಗಳು ಉಂಟಾದಾವು. ವಿವಾಹವಾಗುವ ವಧೂವರರಾಗಿ ಸಾಮರಸ್ಯವಿದೆಯೆ ಎಂಬುದನ್ನು ಕಂಡುಕೊಳ್ಳಲು ಆದುನಿಕ ವಿಜ್ಞಾನವು ಯಾವ ವಿಧಾನವನ್ನೂ ಕಂಡುಹಿಡಿದಿಲ್ಲ. ಲಿಂಗ ವಿಜ್ಞಾನಿಗಳು ವಧೂವರರಿಗೆ ವೈದ್ಯಕೀಯ ಪರೀಕ್ಷೆಗೊಳಗಾಗುವಂತೆ ಸೂಚಿಸುತ್ತಾರೆ. ಇದು ಸಮರ್ಪಕವಾಗಿ ಕಂಡುಬಂದಂಥ ಇವರಲ್ಲಿ ಒಂದು ಲೋಪವಿದೆ. ದೈಹಿಕ ದಾರ್ಢ್ಯವೊಂದೇ ವಿವಾಹ ಸಾಮರಸ್ಯವನ್ನು ಖಾತರಿಪಡಿಸಿಕೊಡುವುದಿಲ್ಲ. ಸುಖದಾಂಪತ್ಯವು ಅನೇಕ ಆಧಾರಗಳನ್ನು ಅವಲಂಬಿಸಿರುವುದರಿಂದ ಪ್ರತಿಯೊಬ್ಬ ವಿವೇಕಸ್ಥನೂ ಜ್ಯೋತಿಷದ ಸಹಾಯ ಪಡೆಯತಕ್ಕದ್ದು ಯುಕ್ತ. ವಿವಾಹಕ್ಕಾಗಿ ಜಾತಕಗಳನ್ನು ತಾಳೆ ಮಾಡುವಾಗ ಜೋಪಾನವಾಗಿ ಪರಿಗಣಿಸಬೇಕಾದ ಮೂರು ಅಂಶಗಳಿವೆ. ಅವು ಯಾವುವೆಂದರೆ:

1) ವಧೂವರರ ಆಯುರ್ದಾಯ

2) ಏಳನೆ, ಎಂಟನೆ ಮನೆಗಳು ಬಲಾಧಿತ್ಯ ಬಲವ್ಯಾಪನೆ

3) ಕೂಟಗಳು ಒಪ್ಪಿಗೆಯಾಗುವುದು.

ವರನಿಗೆ ಆಯುರ್ದಾಯ ಕಡಿಮೆಯಾಗಿದ್ದರೆ, ಅವನ ಕುಂಡಲಿಯಲ್ಲಿ ಏಳನೆ ಮನೆಯು ಪ್ರಬಲವಾಗಿದ್ದರೂ ಅಥವಾ ಅನಗತ್ಯವಾದಷ್ಟು ಅನುಕೂಲಾಂಶಗಳಿದ್ದರೂ ತಿರಸ್ಕರಿಸಬೇಕು. ಅದೇ ರೀತಿಯಲ್ಲಿ ಏಳನೆ ಮನೆಯು ದುರ್ಬಲವಾಗಿಯೂ

ಪೀಡಿತವಾಗಿಯೂ ಇದ್ದರೆ, ಇಂಥದೇ ದೋಷಗಳಿರುವಂಥ ಅಥವಾ ಇಂಥ ದೋಷಗಳಿಗೆ ನಿವಾರಕವಾದಂಥ ಪ್ರಭಾವಗಳುಳ್ಳ ಕುಂಡಲಿಯೊಡನೆ ಹೊಂದಿಕೆ ಮಾಡಬೇಕು.

ಕೂಟಗಳ ಹೊಂದಿಕೆಯನ್ನು ಉಭಯತ್ರರ ಕುಂಡಲಿಗಳಿಗೆ ಸಾಮಾನ್ಯವಾದ ಸಾಮರಸ್ಯವಿದ್ದಾಗ ಮಾತ್ರ ಪರಿಗಣಿಸಬೇಕು. ಈಗಿರುವ ಅಭ್ಯಾಸವು, ವಿಶೇಷತಃ ದಕ್ಷಿಣ ದೇಶದಲ್ಲಿ, ಬಹಳ ದೋಷಪೂರ್ಣ ಮತ್ತು ಅಪಾಯಕರ. ಏಕೆಂದರೆ ಕೆಲವು ಕೂಟಗಳ ಹೊಂದಿಕೆಯಿಲ್ಲವಾದ ಮಾತ್ರಕ್ಕೆ ಅಂಥ ಕುಂಡಲಿಗಳನ್ನು ತಿರಸ್ಕರಿಸುತ್ತಾರೆ. ತುಂಬ ಮುಖ್ಯಾಂಶಗಳಾದ ಆಯುರ್ದಾಯ ವೈಧವ್ಯ ಮುಂತಾದ ವಿಷಯಗಳನ್ನು ಪೂರ್ತಿಯಾಗಿ ಕಡೆಗಾಣುತ್ತಾರೆ.

ಆದುದರಿಂದ ಪ್ರಾರಂಭದಲ್ಲೇ ಕುಂಡಲಿಯ ಸಾಮಾನ್ಯ ಅರ್ಹತೆಯನ್ನು ಪರೀಕ್ಷಿಸುವುದು ಅವಶ್ಯಕ. ಎರಡು ಕುಂಡಲಿಗಳಲ್ಲೂ ಸಮರ್ಪಕವಾದಷ್ಟು ಆಯುರ್ದಾಯವಿದ್ದರೆ ಮತ್ತು ಏಳನೆ ಎಂಟನೆ ಮನೆಗಳು ಯಾವ ಪೀಡೆಗೂ ಒಳಗಾಗಿರದಿದ್ದರೆ, ಇತರೆ ಅನುಕೂಲಗಳನ್ನು ಗಮನಿಸಬೇಕು. ಕುಜ ಶುಕ್ರರು ಏಳರಲ್ಲಿದ್ದರೆ, ಸಂಬಂದಪಟ್ಟ ಹುಡುಗನಿಗೆ ಅಥವಾ ಹುಡುಗಿಗೆ ಪ್ರಬಲವಾದ ಕಾಮ ಪ್ರವೃತ್ತಿ ಇರುತ್ತದೆ. ಅಂಥದೇ ಪ್ರವೃತ್ತಿ ಇರುವವರೊಡನೆ ಅಂಥವರ ವಿವಾಹವನ್ನು ಗೊತ್ತುಪಡಿಸಬೇಕು. ಅಂಥವರನ್ನು ಏಳನೆ ಮನೆಯಲ್ಲಿ ಗುರುವೋ ಬುಧನೋ ಇರುವವರೊಡನೆ ಕೂಡಿಸಬಾರದು; ಅವರಿಗೆ ಕಾಮ ಪ್ರವೃತ್ತಿ ಕಡಿಮೆಯಾಗಿರುತ್ತದೆ. ಮದುವೆಯಲ್ಲಿ ರತಿ ಸಾಮರಸ್ಯವಿಲ್ಲವಾದರೆ, ಬದುಕೇ ನಿಸ್ಸಾರವಾಗಿ ಗಂಡ ಹೆಂಡರ ನಡುವೆ ಜಗಳವುಂಟಾಗುತ್ತದೆ. ಆದ ಕಾರಣ ತಂದೆ ತಾಯಿಗಳು ತಿಳಿವಳಿಕಸ್ಥರಾದ ಜ್ಯೋತಿಷಿಗಳನ್ನು ವಿಚಾರಿಸುವುದು ಅಗತ್ಯ. ಅನುಭವವಿಲ್ಲದವರನ್ನು ಹೋಗಿ ಕೇಳಬಾರದು. ಚರಿತ್ರೆಯ ತುಂಬ ಇಜ್ಜೋಡಿ ಮದುವೆಯ ಹಗರಣಗಳೂ ದಂಪತಿಗಳು ನಡೆಸುವ ಕ್ಲೇಷದಾಯಕವಾದ ಹೊಡಬಾಳ ಕತೆಗಳೂ ಪರಿಪೂರ್ಣವಾಗಿವೆ.

ಸಾಕ್ರಟಿಸ್ ಖ್ಯಾತ ದಾರ್ಶನಿಕ. ಅತ ಕ್ಸಾಂತಪೆಯನ್ನು ಮದುವೆಯಾದ. ಕತೆ ಹೇಳುವ ಮಾತು ನಿಜವಾದರೆ, ಆಕೆ ಸತತವಾಗಿ ಆತನ ತತ್ವ ಬೋಧೆಯನ್ನು ಅಲ್ಲಗಳೆಯುತ್ತ ಆತ ಮನೆಯಲ್ಲಿದ್ದಾಗೆಲ್ಲ ಮೂದಲಿಸಿ ಪೀಡಿಸುತ್ತಿದ್ದಳು. ಒಮ್ಮೆ ಅತ ಗಣ್ಯ ಸ್ನೇಹಿತನನ್ನು ಮನೆಗೆ ಊಟಕ್ಕೆ ಕರೆದಿದ್ದ. ಆಗ ಆಕೆ ಅಡಿಗೆ ಪಾತ್ರೆಯೊಂದನ್ನು ತಂದು ರೊಚ್ಚಿನಿಂದ ಸಾಕ್ರಟಿಸನ ತಲೆಯ ಮೇಲೆ ಸುರಿದಳಂತೆ. ಅಲ್ಲಿದ್ದ ಅತನ ಶಿಷ್ಯ ಪ್ಲೇಟೋ ಕನಿಕರದಿಂದ ಆತನನ್ನು ಇಂಥದನ್ನು ಹೇಗೆ

ಸಹಿಸಿಕೊಂಡಿರುತ್ತಿಯೆ ಎಂದು ಕೇಳಿದ. ಆಗ ಆ ದಾರ್ಶನಿಕ ನಮ್ರಬಾವದಿಂದ," ಈಕೆ ನನಗೆ ತಾಳ್ಮೆಯನ್ನೂ ಉದಾರ ಭಾವವನ್ನೂ ಕಲಿಸುತ್ತಾಳೆ. ಈಕೆಯೊಡನೆ ನಾನು ಸೈರಿಸಿಕೊಂಡಿದ್ದರೆ ಪ್ರಪಂಚದಲ್ಲಿ ಮತ್ತಾವುದನ್ನಾದರೂ ಸೈರಿಸಿಕೊಳ್ಳಬಲ್ಲೆ ಎಂಬುದನ್ನು ನನಗೆ ನಿದರ್ಶನ ಮಾಡಿಕೊಡುತ್ತಿದ್ದಾಳೆ" ಎಂದುತ್ತರ ನೀಡಿದನಂತೆ.

ಅಲ್ಸಿಬಿಯಾಡಿಸ್ ಎಂಬಾತನದು ಪ್ರಕಾಶಮಾನವಾದ ಬುದ್ಧಿ, ಅತ್ಯಂತ ಭೂಷಣವಾದ ನಡೆ. ಆದರೂ ಆತ ವಿವಾಹ ಭಾಗ್ಯದಲ್ಲಿ ನತದೃಷ್ಟ. ತನ್ನ ಹೆಂಡತಿಯನ್ನು ತೊರೆದು ಬಿಡಲು ಅವನ ಹೆಗ್ಗಳಿಕೆ ಅಡ್ಡ ಬಂದಿತ್ತು. ಆದರೆ ಅದನ್ನು ತಾಳಿಕೊಳ್ಳಲಾರದೆ, ಪಾರಾಗಲು ಆತ್ಮಹತ್ಯೆಗೆ ಪ್ರಯತ್ನಪಟ್ಟಿದ್ದ.

ಪೆರಿಕ್ಲಿಸ್ ಐವತ್ತು ವರ್ಷ ಅಥೆನ್ಸ್ ಆದ. ಅವನು ಪಟ್ಟಕ್ಕೆ ಬಂದಾಗ ಆ ನಗರವು ಇಟ್ಟಿಗೆ ಗಾರೆಯವಾಗಿತ್ತು. ಆತ ಹೋದಾಗ ಆ ಪಟ್ಟಣವು ಅಮೃತಶಿಲೆಯದಾಯಿತು. ಒಳ್ಳೆ ವಾಗ್ಮಿ, ರಾಜ್ಯತಂತ್ರ, ನಿಪುಣ, ಆ ಪ್ರಾಚೀನ ಕಾಲದವರ ಪೈಕಿ ಅತ್ಯಂತ ವಿವೇಚನೆಯುಳ್ಳ ವೈಭವೋಪೇತ ವ್ಯಕ್ತಿ. ಆದರೆ ಅವನ ಹೆಂಡತಿ ಆಸ್ಪೇನಿಯ ಸಂಗಡ ಅವನು ಪಡೆದಿದ್ದ ಸಂಬಂಧವು ಟೀಕೆಗೊಳಗಾಗಿತ್ತು. ಅವನ ಹೆಂಡತಿ ತಪ್ಪು ಕಂಡುಹಿಡಿಯುತ್ತ ಸಾಮಾಜಿಕವಾಗಿ ಅವನ ಕುತ್ತಿಗೆ ಕಟ್ಟಿದ್ದ ಕಲ್ಲು ಭಾರವಾಗಿದ್ದು, ಅಥೆನ್ಸ್ ಪ್ರತಿಷ್ಠೆ ಸ್ಥಾಪಿಸಲು ಅವನು ಮಾಡಿದ ಮಹತ್ ಪ್ರಯತ್ನಗಳಿಗೆ ನೆರವಾಗಿ ನಿಲ್ಲದೆ ಹೋಗಿದ್ದಳು. ಅವನು ಆಕೆಗೆ ತನ್ನ ಆಸ್ತಿಪಾಸ್ತಿಯಲ್ಲಿ ಅರ್ಧಪಾಲು ಕೊಟ್ಟು ಆಕೆಯನ್ನು ಪರಿತ್ಯಾಗ ಮಾಡಬೇಕಾಯಿತು.

ಪ್ಲೇಟೋ ತನ್ನ ಗುರು ಸಾಕ್ರಟಿಸ್ ಮುನ್ನೆಚ್ಚರಿಕೆಯಂತೆ ನಡೆದುಕೊಂಡು ಶ್ರೀಮಂತನೂ ಧನವಂತನೂ ಪಂಡಿತನೂ ಗ್ರೀಕ್ ಸಮಾಜದ ಎಲ್ಲ ಪ್ರಾಕಾರಗಳಲ್ಲೂ ಅತ್ಯಂತ ಜನಾನುರಾಗಿಯೂ ಆಗಿದ್ದರೂ ಕೂಡ ಮತ್ತು ಸ್ತ್ರೀ ಪ್ರೇಮಿಯಲ್ಲಿ ಸ್ತ್ರೀತ್ವದ ಮೆಚ್ಚಿಗೆಗಾರನೂ ಆಗಿದ್ದರೂ ಕೂಡ ಮದುವೆ ಆಗಲಿಲ್ಲ.

ಸಿಸಿರೋ ಎಂಬಾತ ರೋಮನ್ ವಾಗ್ಮಿ ಮತ್ತು ಸಾರ್ವಜನಿಕ ಚಾವಡಿಯ ವಾದ ಚತುರ ಜೇನೋ ಮತ್ತು ಪಮಿಟ್ರಿಯಸ್ ವಾದದಡಿಗಳಲ್ಲಿ ವಿದ್ಯೆ ಕಲಿತ ಸಂಪನ್ನ. ಟರ್ಕಿಷಿಯ ಎಂಬ ಶ್ರೀಮಂತ ಪುತ್ರಿಯನ್ನು ಮದುವೆಯಾದ. ಈ ಅಸಮರ್ಪಕವಾಗಿದ್ದ ವಿವಾಹ ಜೀವನವನ್ನು ಕುರಿತು ವಿಶದವಾಗಿ ಹೇಳಬೇಕಾದ ಅಗತ್ಯವಿಲ್ಲ.

ಮಿಲ್ಟನ್ ಇಂಗ್ಲೀಷ್ ಇತಿಹಾಸದಲ್ಲಿ ಕವಿಯಂತೆ ರಾಷ್ಟ್ರಪ್ರೇಮಿಯಂತೆ ಅಗ್ರಸ್ಥಾನವನ್ನು ಪಡೆದಿದ್ದಾನೆ. ಅತನು ವಿವಾಹ ವಿಚ್ಛೇದವನ್ನು ಕುರಿತು ಮೂರು

ಹಸ್ತಪ್ರತಿಗಳನ್ನು ಪ್ರಕಟಿಸಿದನಲ್ಲದೆ ಅತ್ಯಂತ ಅಸುಖಿಯಾಗಿಯೂ ಕೆಲವೊಮ್ಮೆ ತನ್ನ ಹೆಂಡತಿ ಮೇರಿ ಪೊವೆಲ್ ಸಂಗಡ ದುರವಸ್ಥೆಗೀಡಾಗಿಯೂ ಬಾಳಿದ.

ಥಾಮಸ್ ಕಾರ್ಲೈಲ್ ವಿವಾಹ ಜೀವನ ಕ್ಷುಬ್ಧ ಸಾಗರದಷ್ಟು ಕರ್ಕಶವಾಗಿತ್ತು. ಸುಖದ ಮಾತೇ ದೂರವಾಗಿತ್ತು. ಡಿಕನ್ಸ್ ಲೇಖಕನಾಗಿ ಗ್ರಂಥಕರ್ತನಾಗಿ ಮಾನವೀಯ ರಾಗಭಾವಗಳನ್ನು ಚಿತ್ರಿಸುವಂಥ ವಿಶ್ವವಿಖ್ಯಾತ ಕಲೆಗಾರನಾಗಿ ಗ್ರೇಟ್ ಬ್ರಿಟನ್ನಿನಲ್ಲಿ ಅಸಮಾನನಾಗಿದ್ದ. ಆದರೆ ಅವನ ವಿವಾಹಿತ ಗೃಹಜೀವನವು ಯಾತನಾಮಯವಾಗಿ ನಿಷ್ಫಲವಾಗಿತ್ತು.

ಇಂಥ ನಿದರ್ಶನಗಳನ್ನು ಬೇಕಾದಷ್ಟು ಕೊಡಬಹುದು. ಆಧುನಿಕ ಕಾಲದಲ್ಲಿ ಅಮೇರಿಕದ ವಿವಾಹ ಜೀವನದ ಮೇಲಂತಸ್ತಿನಲ್ಲೂ ಕೀಳಂತಸ್ತಿನಲ್ಲೂ ಸಾವಿರಗಟ್ಟಲೆ ಇಂಥ ದುರ್ಘಟನೆಗಳನ್ನು ಎಣಿಸಬಹುದು. ಭಾರತದಲ್ಲೂ ಈ ಸಂಖ್ಯೆ ಏರುತ್ತಿದೆ. ಇವೆಲ್ಲ ದಾಂಪತ್ಯ ಜೀವನದ ಅತೃಪ್ತಿ ದೌರ್ಭಾಗ್ಯಗಳ ಕತೆಯನ್ನು ಹೇಳುತ್ತವೆ. ವಾಚಕರು ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ಮೇಲೆ ಕೊಟ್ಟಿರುವ ನಿದರ್ಶನಗಳಲ್ಲಿ ವಿವಾಹ ಜೀವನವು ಭಗ್ನಗೊಂಡಿರುವುದು ಗಂಡನ ಅಥವಾ ಹೆಂಡತಿಯ ಸಾವಿನಿಂದಲ್ಲ. ಗಂಡ ಹೆಂಡಿರ ನಡುವೆ ಏರ್ಪಟ್ಟ ವಿರಸದಿಂದ.

ಮೇಲಿನ ವಾಕ್ಯಗಳನ್ನು ಕವಿ ವಾಚಕನು ಈ ಪ್ರಶ್ನೆ ಕೇಳಲು ಇಚ್ಛಿಸಬಹುದು: "ಮದುವೆಯು ಅಂದರೆ ಅನುಕೂಲವಾದ ದಾಂಪತ್ಯವು ಇವತ್ತಿನ ಪ್ರಪಂಚ ಪರಿಸ್ಥಿತಿಯಲ್ಲಿ ಸಾಧ್ಯವೇ," ಎಂದು. ಜ್ಯೋತಿಷ ಶಾಸ್ತ್ರ ಗ್ರಂಥಗಳನ್ನು ಸಮಗ್ರವಾಗಿ ಪರಿಶೀಲಿಸುವುದರಿಂದ ಮುಂದೆ ಸೂಚಿಸುವ ಪರಿಸ್ಥಿತಿಯು ಗ್ರಾಹ್ಯವಾಗುತ್ತದೆ.

1) ಕುಜನು ಏಳನೆ ಮನೆಯಲ್ಲಿ ಯಾರ ದೃಷ್ಟಿಗೂ ಒಳಪಡದೆ ಇಲ್ಲವೆ ಯಾವ ಶುಭನ ಜತೆಯೋ ಸೇರದೆ ಇದ್ದರೆ ವಿವಾಹ ಜೀವನದಲ್ಲಿ ಪದೇ ಪದೇ ಕಲಹವುಂಟಾಗಿ ವೈಮನಸ್ಯ ಕಡೆಗೆ ವಿಯೋಗವುಂಟಾಗಬಹುದು.

2) ಶನಿಯು ಎಂಟನೆ ಮನೆಯಲ್ಲಿ ವಿಶೇಷತಃ ಕುಜನಿಗೆ ಕೇಂದ್ರನಾಗಿದ್ದರೆ ವಿವಾಹ ಜೀವನದಲ್ಲಿ ವಿರಸ ವೈಮನಸ್ಯಗಳುಂಟಾಗಿ ಪರಸ್ಪರ ಅನುರಾಗವು ಬತ್ತಿಹೋಗಬಹುದು.

3) ಲಗ್ನವು ಸಿಂಹವಾಗಿ, ಏಳರ ಅಧಿಪತಿ ಶನಿಯು ಎರಡರಲ್ಲಿದ್ದರೆ, ಗಂಡನು ಹೆಂಡತಿಯ ದಾಸನಾಗಿ ಆಕೆಯ ಆಜ್ಞಾವರ್ತಿಯಾಗಿರುತ್ತಾನೆ.

4) ಶನಿಯು ಏಳನೆ ಮನೆಯಲ್ಲಿದ್ದರೂ ವಿವಾಹದಲ್ಲಿ ಸುಖವಿರುವುದಿಲ್ಲ

---

* ಪ್ರಶ್ನಮಾರ್ಗ: ಡಾ.ಬಿ.ವಿ.ರಾಮನ್ ಅವರ ಇಂಗ್ಲೀಷ್ ಅನುವಾದ ನೋಡಿ.

–ಶನಿಯು ಲಗ್ನಾಧಿಪತಿಯೋ ಸಪ್ತಮಾಧಿಪತಿಯೋ ಆಗಿದ್ದರೆ ಪರವಾಯಿಲ್ಲ.

5) ಪ್ರಶ್ನಮಾರ್ಗ: * ಎಂಬ ಪ್ರಖ್ಯಾತವಾದ ಕೇರಳ ಗ್ರಂಥದ ಪ್ರಕಾರ ರವಿ ಶುಕ್ರರು ಐದರಲ್ಲೋ ಏಳರಲ್ಲೋ ಒಂಭತ್ತರಲ್ಲೋ ಇದ್ದರೆ, ಜಾತಕನಿಗೆ ವಿವಾಹ ಸೌಖ್ಯವುಂಟಾಗುವುದಿಲ್ಲ.

6) ನಾಲ್ಕನೆ ಮನೆಯಲ್ಲಿ ಪ್ರಬಲನಾದ ಪಾಪ ಗ್ರಹ, ವಿಶೇಷತಃ ಕುಜ ಇದ್ದರೆ ಅದು ವಿವಾಹ ಸೌಖ್ಯಕ್ಕೆ ಎಡೆಕೊಡುವುದಿಲ್ಲ.

7) ಶುಕ್ರನ ಅಷ್ಟಕವರ್ಗದಲ್ಲಿ ಶುಕ್ರನಿಂದ ಏಳನೆ ಮನೆಯು ಅಧಿಕವಾದ ಬಿಂದುಗಳನ್ನು ಪಡೆದಿದ್ದರೆ ಮತ್ತು ಹೆಂಡತಿಯು ಯಾವುದಾದರೂ ಸೂರ್ಯ ನಕ್ಷತ್ರದಲ್ಲಿ ಜನಿಸಿದವಳಾಗಿದ್ದರೆ, ಆಗ ಹೆಂಡತಿಯು ಪ್ರಾಣಪ್ರೀಯಳಾಗುತ್ತಾಳೆ.

8) ಏಳನೆ ಮನೆಯು ಸ್ಫುಟವು ಅಶುಭ ನವಾಂಶದಲ್ಲಿದ್ದರೆ ಸದಾ ವ್ಯಾಜ್ಯ ವೈಮನಸ್ಯಗಳುಂಟಾಗುತ್ತವೆ.

9) ಏಳರ ಒಡೆಯನೂ ಒಂದರ ಒಡೆಯನೂ ಮಿತ್ರನಾಗಿದ್ದರೆ ಜಾತಕನನ್ನು ಅವನ ಹೆಂಡತಿ ಪ್ರೀತಿಸುತ್ತಾಳೆ. ಇಲ್ಲವಾದರೆ ಪರಸ್ಪರ ಸಾಮರಸ್ಯವಿರುವುದಿಲ್ಲ.

ಮೇಲೆ ಕೊಟ್ಟಿರುವ ಯೋಗಗಳು ಹೆಂಡತಿಯ ಸಾವನ್ನಾಗಲಿ ಒಂದಕ್ಕಿಂತ ಹೆಚ್ಚು ಮದುವೆ ಪ್ರಮೇಯವನ್ನನಾಗಲಿ ಕುರಿತದ್ದಾಗಿಲ್ಲ. ಕೆಲವು ಗ್ರಹಗಳ ಸ್ಥಿತಿಗಳು ಉಕ್ತವಾದ ರೀತಿಯಲ್ಲಿ (ಗಂಡ ಅಥವಾ ಹೆಂಡತಿಯ ಕುಂಡಲಿಯಲ್ಲಿ) ಇದ್ದರೆ ವಿವಾಹ ಜೀವನವು ಅಸುಖವಾಗುತ್ತದೆಂದು ಮಾತ್ರ ಅವು ಹೇಳುತ್ತವೆ.

10) ಶುಕ್ರನ ಅಷ್ಟಕ ವರ್ಗದಲ್ಲಿ ತಕ್ಕಂತ ಶೋಧನೆಗಳನ್ನು ಮಾಡಿ ಹೆಚ್ಚು ಬಿಂದುಗಳು ಬರುವ ರಾಶಿಯನ್ನು ತೆಗೆದುಕೊಳ್ಳಿ. ಆ ರಾಶಿ ಸೂಚಿಸುವ ದಿಕ್ಕಿನಿಂದ ವಧುವನ್ನು ತಂದುಕೊಳ್ಳಿ. ಆಗ ಮದುವೆಯು ನಿಜವಾಗಿ ಸುಖಪ್ರದವಾಗುತ್ತದೆಂದು ಹೇಳುತ್ತಾರೆ.

ನಮ್ಮ ಸ್ವಂತ ಅಧ್ಯಯನ ಮತ್ತು ಅನುಭವಗಳನ್ನು ಅಧರಿಸಿದಂತೆ ಕೆಲವು ಅಭಿಪ್ರಾಯೋಕ್ತಿಗಳನ್ನು ಹೇಳುವುದು ಇಲ್ಲಿ ಉಚಿತವಾದೀತು.

ಇವತ್ತು ಪಾಶ್ಚಾತ್ಯ ಪ್ರಪಂಚದಲ್ಲಿ ಆದ ಮೂರು ಮದುವೆಗಳ ಪೈಕಿ ಒಂದರಂತೆ ವಿವಾಹ ವಿಚ್ಛೇದಗಳಾಗುತ್ತವೆಯೆಂದು ಹೇಳುತ್ತಾರೆ. ಪ್ರೀತಿ ವಿಶ್ವಾಸ ನಿಷ್ಠೆಗಳು ಯಂತ್ರಾಸಕ್ತ, ಧನಮತ್ತ, ಸ್ವೇಚ್ಛಾಚಾರಿಯಾದ ಸಮಾಜದಲ್ಲಿ ಅಸಂಗತವೋ ಕಾಲಾತೀತವೋ ಆಗಿವೆ. ನಾವು ಅಮೆರಿಕಕ್ಕೆ ಹೋಗಿದ್ದಾಗ ಶ್ರೀಮತಿಯೋರ್ವಳು ನಮ್ಮನ್ನು ವಾಷಿಂಗ್‌ಟನ್ನಿನಿಂದ ನ್ಯೂಯಾರ್ಕಿಗೆ ಕಾರಿನಲ್ಲಿ ಕರೆದೊಯ್ದಳು. ಆಕೆ

ಕದೆಗೆ ವಿಚ್ಛೇದಕ್ಕಿಟ್ಟಿತು. ಮಗುವಿನ ಮೇಲುಸ್ತುವಾರಿಯನ್ನು ನ್ಯಾಯಾಲಯ ತಂದೆಗೆ ವಹಿಸಿತು. ತಾಯಿ ಹೌಹಾರಿದಳು. ದುಃಖಿಯಾದಳು. ಈಗ ಮತ್ತೆ ಆಕೆ ಮದುವೆಯಾಗುವುದೇ ಬೇಡವೆ ಎಂದು ಜ್ಯೋತಿಷ ಸಲಹೆಯನ್ನು ಕೇಳುತ್ತಿದ್ದಳು. ಆಕೆ ಮದುವೆಯಾಗಲಿರುವ ಗಂಡಸು ತನ್ನ ಹಾಗೆ ವಿಚ್ಛೇದನಗೊಂಡ ವಕೀಲ. ಅವನದೂ ಅದೇ ದುರವಸ್ಥೆ.

ಈ ಪ್ರಕರಣ ಅಮೆರಿಕದ ಹಲವಾರು ವಿವಾಹ ಪ್ರಸಂಗಗಳಿಗೆ ಸಾಂಕೇತಿಕವಾಗಿದೆ. ಆ ಶ್ರೀಮತಿಯು ಭಾರತೀಯ ಮಹಿಳೆಯೋರ್ವಳನ್ನು ಕಂಡಿದ್ದಾಗ ಭಾರತದಲ್ಲಿ ಬಹುತೇಕವಾಗಿ ವಿವಾಹಗಳನ್ನು ತಂದೆ ತಾಯಿಗಳು ಏರ್ಪಾಡು ಮಾಡುತ್ತಾರೆಂಬುದನ್ನು ಕೇಳಿ ಅಚ್ಚರಿಗೊಂಡಳಂತೆ. ಆ ಭಾರತೀಯ ಮಹಿಳೆಗೆ ವಿಚ್ಛೇದ ಎಂಬ ಮಾತೆ ಅವಾಚ್ಯವಾಗಿದ್ದುದನ್ನೂ ಆಕೆ ಕಂಡುಕೊಂಡಿದ್ದಳು. ಅಲ್ಲದೆ ಜ್ಯೋತಿಷವು ವಿವಾಹ ನಿಶ್ಚಯದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆಂಬುದನ್ನೂ ಕೇಳಿ ಆಕೆ ಆಶ್ಚರ್ಯಪಟ್ಟು ಜ್ಯೋತಿಷವನ್ನು ಕಲಿಯತೊಡಗಿದಳಂತೆ. ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹ ಸಂಬಂಧವನ್ನು ಭದ್ರಗೊಳಿಸುವಂಥ ರಕ್ಷಣೋಪಾಯಗಳನ್ನು ಅಳವಡಿಸಿಕೊಂಡಿರಲಾಗಿದೆ. ಪಶ್ಚಿಮದಲ್ಲಿ ಸ್ತ್ರೀ ಪುರುಷರು ಯಥೇಚ್ಛವಾಗಿ ಕಲೆಯುವ ಅವಕಾಶಗಳಿದ್ದರೂ ಕೂಡ ಅಲ್ಲಿಯೂ ವಧೂವರರ ಆಯ್ಕೆಗೋಸ್ಕರ ಜ್ಯೋತಿಷವನ್ನು ಬಳಸಿಕೊಳ್ಳುವುದಾದರೆ ಹೇರಳ ಪ್ರಯೋಜನವುಂಟಾಗುತ್ತದೆ. ಇದರಿಂದ ವಿವಾಹ ವಿಚ್ಛೇದನಗಳ ಸಂಖ್ಯೆ ಪ್ರಮಾಣವು ಕಡಿಮೆಯಾಗಬಹುದು ಎಂದು ಆಕೆ ತಿಳಿಸಿದಳು.

ಭಾರತೀಯರ ಬೌದ್ಧಿಕ ದಾಸ್ಯದ ಪರಿಣಾಮವಾಗಿ ಪ್ರಗತಿಪರರೆಂದುಕೊಳ್ಳುವ ಹಲಕೆಲವರು ದೇಶದ ಶಾಲಾ ಕಾಲೇಜುಗಳಲ್ಲಿ ಲಿಂಗ ಶಿಕ್ಷಣವನ್ನು ಪ್ರಾರಂಭಿಸಬೇಕೆಂದು ಹುಯಿಲೆಬ್ಬಿಸುತ್ತಿದ್ದಾರೆ. ಈ ಪಾಶ್ಚಾತ್ಯಾನುಸರಣೆಯು ಸ್ತ್ರೀ ಪುರುಷರ ಸಂಬಂಧಗಳಿಗೆ ಇರುವ ನೈತಿಕ ಪಾವಿತ್ರ್ಯವನ್ನೂ ಸದಾಚಾರದ ಮೂಲವನ್ನೂ ಅಪಾಯಕ್ಕೀಡುಮಾಡುತ್ತಿರುವುದರ ಗೊಡವೆಯೇ ಅವರಿಗೆ ಬೇಕಾಗಿಲ್ಲವಾಗಿದೆ.

ಅತ್ಯಂತ ವಿಸ್ಮಯಕರವಾದ ಪರಸ್ಪರ ವಿರುದ್ಧ ಸಂಗತಿಯೆಂದರೆ ಪಾಶ್ಚಾತ್ಯರಲ್ಲಿ ಹಲವರು "ಜ್ಞಾನಬೋಧಕ" ವೆನಿಸಿದ ಈ ಲಿಂಗ ಶಿಕ್ಷಣವೆಂಬ ವೈಜ್ಞಾನಿಕ ಸಂತ್ಯಾಂಶಗಳನ್ನೂ ಮತ್ತು ಜೈವಿಕವಾದ ಕ್ರಿಯೆಗಳನ್ನೂ ತಿಳಿಯಪಡಿಸುವ ಕ್ರಮವು ನೈತಿಕ ಮಾರ್ಗದರ್ಶನವಿಲ್ಲದೆ ಹೋಗಿ ಹೊಸ ಹರಯದ ವಿದ್ಯಾರ್ಥಿಗಳಿಗೆ ಅಸಭ್ಯವಾದ ಭಾವೋದ್ರೇಕಕ್ಕೆ ಎಡೆಕೊಟ್ಟಿದೆ. ಏಕೆಂದರೆ ಅವರ ಗ್ರಹಿಕೆಯಲ್ಲಿ

ಫ್ರಾಯ್ಡ್ ಪ್ರಕಾರವಾದ ಲಿಂಗವು ಒಂದು ಜೈವಿಕ ಕ್ರಿಯೆ ಮಾತ್ರವೇ ವಿನಾ ಯೂಂಗ್ ಎಂಬ ಮನೋ ವಿಜ್ಞಾನಿಯ ಪ್ರಕಾರವಾಗಿ ಲಿಂಗವು ಸೃಜನಾತ್ಮಕವಾದ ಹಾದಿಯಲ್ಲಿ ನಿರ್ದೇಶನಗೊಳಿಸಿಕೊಳ್ಳಲು ಸಾಧ್ಯವಾದಂಥ ಚೈತನ್ಯದಾಯಕ ಶಕ್ತಿಯಾಗಿ ಕಂಡುಬರುವುದಿಲ್ಲ.

ಇವತ್ತು ಭಾರತದ ದುರಂತವೇನೆಂದರೆ, ಯಾವ ವಾದಗಳನ್ನು ಪಾಶ್ಚಾತ್ಯರು ವಿವಾಹ ಮತ್ತು ಕುಟುಂಬ ಜೀವನಗಳ ಭದ್ರತೆಗೆ ಪ್ರತಿಕೂಲಕಾರಿ ಎಂದು ಹೆಚ್ಚುಹೆಚ್ಚಾಗಿ ಮನವರಿಕೆ ಮಾಡಿಕೊಂಡು ತ್ಯಜಿಸುತ್ತಿದ್ದಾರೋ ಅವನ್ನು ಪರೀಕ್ಷಿಸಿ ನೋಡುವುದಕ್ಕೆ ಭಾರತೀಯರು ಪ್ರಯೋಗಪಶುಗಳಾಗುತ್ತಿದ್ದೇವೆ.

ಇತ್ತೀಚಿಗೆ ಭಾರತೀಯ ಪಂಡಿತರೊಬ್ಬರು ಸಮಾಜ ಶಾಸ್ತ್ರದ ಆಚಾರ್ಯರಾದ ಜರ್ಮನ್ ಪಂಡಿತರನ್ನು ಆತಿಥ್ಯಕ್ಕೆ ಕರೆದಿದ್ದರು. ಆಗ ಆ ಜರ್ಮನ್ ಆಚಾರ್ಯ ಭಾರತದಲ್ಲಿ ವಿವಾಹವು ತಾವು ಕಂಡ ಇತರೇ ನಾಗರಿಕರೆನಿಸಿಕೊಂಡಿರುವ ದೇಶಗಳಲ್ಲಿರುವುದಕ್ಕಿಂತ ಹೆಚ್ಚು ಯಶಪ್ರದವಾಗಿದೆಯೆಂದೂ ಭಾರತದ ಕುಟುಂಬ ಜೀವನದಲ್ಲಿ ಸಾಮರಸ್ಯವಿರುವುದು ಎದ್ದು ಕಾಣುತ್ತದೆಂದೂ ವಿವೇಚಿಸಿದರು.

ಇದಕ್ಕೆ ಭಾರತೀಯ ಆಚಾರ್ಯರು ಕೊಟ್ಟ ಉತ್ತರವೇನೆಂದರೆ: ಭಾರತೀಯರು ವಿವಾಹದ ಭದ್ರತೆಗೂ ಕುಟುಂಬದ ಸಾಮರಸ್ಯಕ್ಕೂ ಕೂಡ ತಂದೆ ತಾಯಿಗಳು ವಿವಾಹ ನಿಶ್ಚಯಿಸಲು ವಧೂವರರ ಜಾತಕಗಳನ್ನು ಮೊದಲು ಹೋಲಿಕೆ ಮಾಡಿಸಿ ನೋಡುವ ಸಂಪ್ರದಾಯ. ಬಹುಶಃ ಕಾರಣವಿದ್ದೀತು. ತರುವಾಯ ಈ ಭಾರತೀಯ ವಿದ್ವಾಂಸ ವಿವಾಹಿತ ದಂಪತಿಗಳ ಜಾತಕಗಳನ್ನು ಸಂಗ್ರಹಿಸಲು ಪ್ರಾರಂಭಿಸಿ 603 ಕುಂಡಲಿಗಳನ್ನು ಪಡೆದುಕೊಂಡು ಅಧ್ಯಯನ ನಡೆಸಿದರು. ಈ ಜಾತಕದ ವಯೋವಧಿ 30-40 ವರ್ಷಗಳು. ಸಂಬಂಧಪಟ್ಟವರೆಲ್ಲರೂ 1931-40 ರ ಅವಧಿಯಲ್ಲಿ ಹುಟ್ಟಿ 1959-60ರ ಅವಧಿಯಲ್ಲಿ ಮದುವೆ ಆದವರು. ಅವರ ಆರ್ಥಿಕ ಹಿನ್ನೆಲೆ ಬಹುತೇಕ ಗ್ರಾಮೀಣ ವಾಸ, ವ್ಯವಸಾಯ ವೃತ್ತಿ. ಶೇಕಡ 22ರಷ್ಟು ಮಾತ್ರ ವ್ಯಾಪಾರ ಕೈಗಾರಿಕೆ ಉದ್ಯೋಗಗಳಲ್ಲಿದ್ದುಕೊಂಡು ಜೀವನೋಪಾಯ ಪಡೆಯುತ್ತಿದ್ದರು. ಬಹುತೇಕ ಪ್ರಕರಣಗಳಲ್ಲಿ ಉತ್ತರವಿತ್ತವರು ಗಂಡಸರು. ಇದರಿಂದ ಸ್ಪಷ್ಟಪಟ್ಟ ಸಂಗತಿಗಳು ಹೀಗಿವೆ. ವಿವಾಹ ವಿಚ್ಛೇದ ಅಥವಾ ವಿಯೋಗ ಶೇಕಡ 6. ಗಂಡ ಹೆಂಡಿರ ಸಾವು ಶೇಕಡ 10. ಉತ್ತರವಿತ್ತವರಲ್ಲಿ ಶೇಕಡ 47ಮಂದಿ. ಸಮ್ಮತಕಾರರು ಶೇಕಡ 42 ಮಂದಿ. ತಟಸ್ಥರಾಗಿದ್ದರು. ಶೇಕಡ 11 ಮಂದಿ ಅಸಮ್ಮತ ಸೂಚಿಸಿದರು. ತಟಸ್ಥರು ಎಂದರು ಕುಟುಂಬ ಜೀವನದಲ್ಲಿ ಸಾಕಷ್ಟು ಸಮರಸ್ಯವಿತ್ತೆಂದು ಸೂಚಿಸಿದರು. ಅಸಮ್ಮತಿ ಎಂದರೆ ಸಂಸಾರದಲ್ಲಿ ವಿರಸ. ಈ

ಅಂಕಿ ಅಂಶಗಳು ವಿವಾಹ ನಿಶ್ಚಯದಲ್ಲಿ ಜ್ಯೋತಿಷವು ತನ್ನ ಪ್ರಯೋಜಕತೆಯನ್ನು ಸೂಚಿಸುತ್ತವೆಂದು ಆ ಪಂಡಿತರ ಅಭಿಪ್ರಾಯವಾಗಿದೆ.

ಗ್ರಹ ನಕ್ಷತ್ರಗಳ ನಡುವಣ ಸ್ಥಿತಿಗತಿಗಳ ಸಂಬಂಧಗಳಿಗೂ ಸ್ತ್ರೀ ಪುರುಷರ ರಾಗ ಭಾವಗಳಿಗೂ ಅತಿ ನಿಕಟವಾದ ಅನು ಸಂಬಂಧವಿದೆ. ಇತರೆ ಜ್ಯೋತಿಷಿಕ ಪರಿಗಣನೆಗಳ ಜತೆಗೆ ಕುಜ ಪರಸ್ಪರ ಸಂಬಂಧಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಬೇಕು. ಕುಜ ಶುಕ್ರರು ಆಕಾಶದಲ್ಲಿ ಜತೆಗೂಡಿದಾಗೆಲ್ಲ ತತ್ಸಾಪಿ ಸಂಬಂಧಪಟ್ಟ ನಕ್ಷತ್ರಗಳು ಅಶುಭ ಗ್ರಹಗಳದಾಗಿರುವಾಗಲಂತೂ ವಿಚ್ಛೇದ ವಿಯೋಗ ಕಾಮಾಪರಾಧಗಳು ಹೆಚ್ಚಾಗುವುದು ಕೇವಲ ಆಕಸ್ಮಿಕವೇ ಆಗಿರಲಾರದು. ಕುಜ ಶುಕ್ರರ ಸಮಾಗಮವು ಕಾರಣಗಳ ಪೈಕಿ ಒಂದಾಗಿರಲಿಕ್ಕೆ ಸಾಧ್ಯ. ಕುಜ ಶುಕ್ರರ ಸಮಾಗಮ ಕಾಲದಲ್ಲಿ ಜನಿಸಿದ ಮಕ್ಕಳನ್ನು ಒಳ್ಳೆ ಶಿಸ್ತಿನಲ್ಲಿ ಬೆಳಸಬೇಕು ಮತ್ತು ಸದ್ಯಸ್ಸುಖಗಳನ್ನು ಅವರು ಅರಸುವಂಥ ಅಭ್ಯಾಸಗಳನ್ನು ನಿವಾರಿಸಬೇಕು. ಈ ಗ್ರಹ ಸಮಾಗಮಕ್ಕೆ ಗುರು ದೃಷ್ಟಿಯಿದ್ದರೆ ಅಥವಾ ಗುರುವು ಕೇಂದ್ರ ಸ್ಥಾನದಲ್ಲಿದ್ದರೆ, ಈ ಪ್ರತಿಕೂಲ ಪ್ರಭಾವಗಳನ್ನು ಸೃಜನಾತ್ಮಕವಾದ ದಾರಿಗಳಲ್ಲಿ ಹರಿಯುವಂತೆ ಮಾಡಬಹುದು.

ಶುಕ್ರನು ಬದುಕಿನ ಅನೇಕ ಸರ್ವೋಪಹಕವಾದ ಪ್ರಕಾರಗಳಿಗೆ ಸಂಬಂಧಪಟ್ಟವನಾಗಿದ್ದಾನೆ. ಹೆಂಡತಿ, ವಾಹನ, ಅಂಗ ಸಾಮರಸ್ಯ, ಸ್ತ್ರೀ ಪುರುಷ ಸಂಬಂಧ, ಕಲೆ, ಮಮತೆ, ಕುಟುಂಬ ಸೌಖ್ಯ, ಮದುವೆ, ಸತ್ವ, ಸಂತಾನ ಶಕ್ತಿ, ದೈಹಿಕ ಸೌಂದರ್ಯ ಮತ್ತು ಸ್ನೇಹ.

ಕುಜನಾದರೋ ಚೈತನ್ಯ, ಆಕ್ರಮಣ ಶೀಲ, ಸ್ಥೈರ್ಯ, ಮುನ್ನಡೆವ ಸಾಮರ್ಥ್ಯಗಳನ್ನು ಸೂಚಿಸುತ್ತಾನೆ. ಶುಕ್ರ ಜತೆಗೂಡಿದಾಗ ಇಂದ್ರಿಯ ಭೋಗವನ್ನು ಸೂಚಿಸುತ್ತಾನೆ.

ಆದಕಾರಣ ವಧೂವರರ ಜಾತಕಗಳಲ್ಲಿ ಕುಜ-ಶುಕ್ರ ಸಮಾಗಮ ಅಥವಾ ಪ್ರತಿಯೋಗಕ್ಕೆ ಶುಭದಾಯಕನಾಗಿ ಅನುಕೂಲನಾದ ಗುರುವಿನ ಪ್ರಭಾವವಿರಬೇಕು. ಅಥವಾ ಈ ಸಮಾಗಮ ಅಥವಾ ಪ್ರತಿಯೋಗ ಗುರು ಅಥವಾ ಬುಧ ಇಲ್ಲವೆ ಶುಕ್ರ ಇವರ ನಕ್ಷತ್ರ ಯಾವುದರಲ್ಲಾದರೂ ಉಂಟಾಗಬೇಕು. ಈ ಪೈಕಿ ಗುರು ಬುಧರ ನಕ್ಷತ್ರ ಹೆಚ್ಚು ಅಪೇಕ್ಷಣೀಯ.

ದೈಹಿಕವಾದ ಆಕರ್ಷಣೆಗೆ ಶುಕ್ರ-ಕುಜರ ಸಂಬಂಧ ಮುಖ್ಯವಾದ ಕಾರಕ. ಗುರುವಿನ ಪ್ರಭಾವವಿಲ್ಲವಾದರೆ, ಸೂರ್ಯನ ಪ್ರಭಾವವಾದರೂ ಪರವಾಯಿಲ್ಲ. ಆದರೆ ಆಗ ಸಾಮರಸ್ಯ ಇಲ್ಲವಾಗಬಹುದು. ಶುಕ್ರ ಕುಜ ಸಮಾಗಮವು

ಸುಖಾಭಿಲಾಷೆ, ಪ್ರದರ್ಶನೇಚ್ಛೆ ಕೊಟ್ಟು, ಭೋಗ ಜೀವನಕ್ಕೆ ಒಂದು ಹುರುಪು ಕೊಡುತ್ತದೆ. ಶುಕ್ರ ಕುಜರ ಪ್ರತಿಕೂಲ ದೃಷ್ಟಿಯುಳ್ಳವರಾಗಿದ್ದರೆ ಸುಖಾತಿರೇಕದಿಂದ ತೊಂದರೆ, ವಿವಾಹ ಮೂಲಕವಾದ ತಕರಾರುಗಳು ಬಂದೇ ಬರುತ್ತವೆ. ಶುಕ್ರನು ಒಳ್ಳೆ ನಕ್ಷತ್ರ ಅಥವಾ ರಾಶಿಯಲ್ಲಿದ್ದರೆ, ಕುಜನ ಒರಟುತನವನ್ನು ಹದಗೊಳಿಸಬಲ್ಲ. ಆದರೆ ರಾಹುವಿನ ಸಂಪರ್ಕವಿದ್ದರೆ, ವ್ಯಕ್ತಿ ವಿಷಯಲಾಲಸನಾಗುತ್ತಾನೆ. ಲಂಪಟನೂ ಕೆಡಕನೂ ಆಗಬಹುದು. ಹುಡುಗನ ಜಾತಕದಲ್ಲೋ, ಹುಡುಗಿಯ ಜಾತಕದಲ್ಲೋ ಕುಜ–ಶುಕ್ರ–ಕೇತು ಸಮಾಗಮ ಅಥವಾ ದೃಷ್ಟಿ ಇರುವುದು ಈ ಸಮಾಗಮವು ಗುರು ಅಥವಾ ಬುಧ ಇಲ್ಲವೆ ಶುಭನಾದ ಚಂದ್ರ ಇವರ ಯಾವುದಾದರೂ ನಕ್ಷತ್ರದಲ್ಲಿ ಉಂಟಾಗಿದ್ದರೆ ವಿನಾ – ಅಪೇಕ್ಷಣೀಯವಲ್ಲ. ನಕ್ಷತ್ರ ಪ್ರಭಾವವಿದ್ದರೂ ಕೂಡ ಜಾತಕನ/ಳ ಮನೋಭಾವ ಅತಿಶಯವಾಗಿ ಲಾಲನೆಯದೇ ಆಗಿರುತ್ತದೆ. ಕೇತು–ಶುಕ್ರ–ಕುಜ (ಅಥವಾ ಶನಿ) ಸಮಾಗಮವು ವಿವಾಹಕ್ಕೆ ಸಂಬಂಧಿಸಿದಂತೆ ಅಪವಾದಕ್ಕೆ ಕಾರಣವಾಗುತ್ತದೆ. ಆದರೆ ಹತ್ತನೆ ಮನೆ ಅಥವಾ ಕರ್ಮಸ್ಥಾನ ಶುಭದಾಯಕವಾಗಿದ್ದರೆ, ದೋಷವು ಕೊಂಚ ಕಡಿಮೆಯಾಗುತ್ತದೆ.

ವೃಶ್ಚಿಕ ಲಗ್ನದ ಜಾತಕನಿಗೆ ವೃಷಭದಲ್ಲಿ ಕುಜ–ಶುಕ್ರ ಸಮಾಗಮವಿದೆ ಎನ್ನೋಣ. ಕಳತ್ರ ಕಾರಕನಾದ ಶುಕ್ರನು ಏಳರಲ್ಲಿರುವುದು ಸಾಧಾರಣವಾಗಿ ಶಾಸ್ತ್ರಕಾರರಿಂದ ಪುರಸ್ಕೃತವಾಗಿಲ್ಲ. "ಕಾರಕೋಭಾವನಾಶಾಯ ಎಂಬ ತತ್ವದ ಮೇರೆಗೆ ಏಳನೆ ಮನೆಯ ಭಾವಸೂಚನೆಗಳು ಕುಂಠಿತವಾಗಬಹುದೆಂದು ವಾದ. ಆದರೆ ಅನುಭವದ ಪ್ರಕಾರ ಈ ಶಾಸ್ತ್ರ ವಚನ ಸಿದ್ಧವಾಗುವುದಿಲ್ಲ. ವಾಸ್ತವವಾಗಿ ಸಪ್ತಮ ಶುಕ್ರನು ಸುಖವಿವಾಹ, ದಾಂಪತ್ಯದಲ್ಲಿ ಅನುರಾಗ – ಇವುಗಳಿಗೆ ಉತ್ಕೃಷ್ಟವಾದ ಯೋಗ. ಉದಾಹೃತವಾದ ಪ್ರಕರಣದಲ್ಲಿ ಶುಕ್ರನು ಸೂರ್ಯ ನಕ್ಷತ್ರವಾದ ಕೃತ್ತಿಕೆಯಲ್ಲೂ ಕುಜ ಮೃಗಶಿರದಲ್ಲೂ ಇರುವ ಕಾರಣ ಏಳನೆ ಮನೆಯು ಗಣನೀಯವಾಗಿ ಬಲಗೊಂಡು ವಿವಾಹ ಜೀವನದಲ್ಲಿ ಆಗಿಂದಾಗ್ಗೆ ಕೋಪ ಕಲಹಗಳುಂಟಾಗುತ್ತಿದ್ದರೂ ಕೂಡ ಸೌಖ್ಯವಿರುತ್ತದೆ. ಇಂಥ ಜಾತಕನಿಗೆ ಶುಕ್ರ ವೃಷಭ ಲಗ್ನದಲ್ಲೂ ಕುಜ, ವೃಶ್ಚಿಕದಲ್ಲೂ ಇರುವ ಹುಡುಗಿಯೊಡನೆ ಮದುವೆ ಆದರೆ, ಪರಸ್ಪರ ಮೆಚ್ಚಿಕೆಯಾಗುವಂತೆ ನಡೆದುಕೊಳ್ಳುತ್ತ ವಿಷಯಸುಖದಲ್ಲಿ ಅತಿ ಪ್ರವೃತ್ತರಾಗಿ ಆರೋಗ್ಯಕ್ಕೆ ಹಾನಿ ತಂದುಕೊಳ್ಳುವ ಸಂಭವವುಂಟಾಗುತ್ತದೆ. ವೃಷಭದಲ್ಲಿ ಶುಕ್ರನಿರುವುದು ಒಳ್ಳೆಯದು. ಆದರೆ ಅಗ್ನಿ ನಕ್ಷತ್ರವಾದ ಕೃತ್ತಿಕೆಯಲ್ಲಿರುವುದರಿಂದ ಹಠಸ್ವಭಾವವನ್ನು ಕೊಡುತ್ತಾನೆ.

ಆದರೆ ಶುಕ್ರ ರೋಹಿಣಿಯಲ್ಲಿದ್ದರೆ ಶುಕ್ರನ ಉತ್ಕೃಷ್ಟ ಲಕ್ಷಣಗಳು ವ್ಯಕ್ತಪಡುತ್ತವೆ.

ಕುಜ, ಶುಕ್ರರು ಲಗ್ನ ಅಥವಾ ಚಂದ್ರನಿಂದ ಕೇಂದ್ರದಲ್ಲೋ ಕೋಣದಲ್ಲೋ ಇರುವುದನ್ನು ನಿರೀಕ್ಷಿಸುವುದು ಒಳ್ಳೆಯದು. ಅವರಿಬ್ಬರೂ ಸಮಾಗಮ ಹೊಂದಿದ್ದರೂ ಬೇರೆ ನಕ್ಷತ್ರಗಳಿದ್ದರೆ ಪರವಾ ಇಲ್ಲ. ವಧೂವರರ ಪೈಕಿ ಯಾರೊಬ್ಬರ ಕುಂಡಲಿಯಲ್ಲಿ ಇಂಥದೇ ಯೋಗವಿರದಿದ್ದರೂ ಅಷ್ಟು ಮುಖ್ಯವಲ್ಲ.

ಮುರಿದ ಮದುವೆಗೆ ಉದಾಹರಣೆಯಾಗಿ ಮುಂದೆ ಒಂದು ಜಾತಕವನ್ನು ಕೊಡುತ್ತೇವೆ. ಜಾತಕನು ಓಂದುವಾದ ಕಾರಣ, ವಿಚ್ಛೇದಕ್ಕೆ ಕಾನೂನಿನ ಅವಕಾಶವಿಲ್ಲ.

| | | | |
|---|---|---|---|
| ರವಿ | ಚಂದ್ರ ಬುಧ | | ಶನಿ |
| ಕೇತು ಶುಕ್ರ | ರಾಶಿ | | |
| | | | ರಾಹು ಕುಜ |
| | | ಲಗ್ನ ಮಾಂದಿ | ಗುರು |

| | | | |
|---|---|---|---|
| ಗುರು | ಬುಧ | ಕೇತು | |
| ರವಿ | ಅಂಶ | | |
| ಶನಿ ಶುಕ್ರ | | | ಕುಜ |
| | ರಾಹು | ಲಗ್ನ | ಚಂದ್ರ |

ಸಪ್ತಮಾಧಿಪತಿ ಕುಜ ಹನ್ನೊಂದರಲ್ಲಿ ರಾಹುವಿನೊಡನೆ ಶುಕ್ರ ನಕ್ಷತ್ರದಲ್ಲಿದ್ದು, ಆರ್ದ್ರಾ ನಕ್ಷತ್ರದಲ್ಲಿರುವ ಶನಿಯು ದೃಷ್ಟಿಗೆ ಒಳಗಾಗಿದ್ದಾನೆ. ಕಳತ್ರಕಾರಕನಾದ ಶುಕ್ರನು ರಾಹು ನಕ್ಷತ್ರದಲ್ಲಿರುವ ಕೇತುವಿನ ಸಂಬಂಧ ಪಡೆದವನಾಗಿ ಕುಜ ದೃಷ್ಟಿಗೆ ಒಳಗಾಗಿದ್ದಾನೆ. ಹೀಗೆ ಸಪ್ತಮಾಧಿಪತಿಯೂ ಶುಕ್ರನೂ ಪೀಡಿತರಾಗಿದ್ದರೆ. ಜಾತಕನು ಪ್ರತಿಷ್ಠಿತನಾದ ಉನ್ನತಾಧಿಕಾರಿಯ ಮಗಳನ್ನು ಮದುವೆಯಾದ. ಮದುವೆಗೆ ಮುಂಚೆ ಕನ್ಯಾ ಪಿತೃವಿಗೆ ಈ ವರನನ್ನು ತ್ಯಜಿಸಬೇಕೆಂದೂ ಮದುವೆ ಆದರೆ ಹುಡುಗಿಯು ಹೇಳಲಾರದಷ್ಟು ದುಃಖವನ್ನು ಅನುಭವಿಸಬೇಕಾಗುವುದಲ್ಲದೆ, ಜಾತಕನು ವ್ಯಭಿಚಾರಿಯಾಗುವುದರ ಜತೆಗೆ ಹುಡುಗಿಯನ್ನು ಹೊರಗಟ್ಟಬಹುದು ಎಂದೂ ಎಚ್ಚರಿಸಲಾಗಿತ್ತು. ಆದರೂ ಮದುವೆ ಆಯಿತು. ಹುಡುಗಿಯು ಬೆಕ್ಕಸ ಬೆರಗಾಗುವಂತೆ ಜಾತಕನು ವಿಷಯಲಂಪಟನಾಗಿದ್ದು, ಆಕೆಯನ್ನು ಕೊಂಚವೂ ಪ್ರೀತಿಸುತ್ತಿರಲಿಲ್ಲ. ಕೆಟ್ಟ ಚಾಳಿಯಿಂದ ಅವನನ್ನು ತಪ್ಪಿಸಲು ಆಕೆ ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾಗಲು, ಕೇವಲ ಜುಗುಪ್ಸೆಯಿಂದ ಆಕೆ ತವರು ಮನೆಗೆ ವಾಪಸಾದಳು. ಜಾತಕನು ನಡೆಸಿದ ಕಾಮಜೀವನದಿಂದಾಗಿ ಅವನಿಗೆ ಘೋರವಾದ ಕಾಯಿಲೆಗಳೂ ಕಾಲುಹಾಕಿಕೊಂಡವು.

ಯಾವುದೇ ವ್ಯಕ್ತಿಯ-ಹುಡುಗನಾಗಲಿ ಹುಡುಗಿಯಾಗಲಿ-ಸ್ವರೂಪವನ್ನು ಚಂದ್ರನ ಪರಿಸ್ಥಿತಿಯೊಂದರ ಆಧಾರದ ಮೇಲೆಯೇ ಗೊತ್ತುಪಡಿಸಲಾಗುವುದಿಲ್ಲ. ಆ ಆಧಾರದ ಮೇಲೆ ಹಲಕೆಲವು ಮಾನಸಿಕ ಸಂಗತಿಗಳನ್ನು ಕಂಡುಕೊಳ್ಳಬಹುದು. ವಿವಾಹಕ್ಕಾಗಿ ವಧೂವರರ ಸಾಮರಸ್ಯವನ್ನು ಗೊತ್ತುಪಡಿಸಿಕೊಳ್ಳುವುದಕ್ಕೆ ಮುಂಚೆ ಇಡೀ ಕುಂಡಲಿಗಳ ಒಟ್ಟಾರೆಯ ನಿರ್ಣಯವನ್ನು ಮಾಡತಕ್ಕದ್ದು.

ನಾವು ಪರಿಶೀಲಿಸಿರುವ ಗಂಡಹೆಂಡಂದಿರ ಜಾತಕಗಳಲ್ಲಿ ಕೆಲವು ವಿಶಿಷ್ಟವಾದ ಲಕ್ಷಣಗಳು ಕಂಡು ಬಂದಿವೆ.

ಒಂದು ಕುಂಡಲಿಯ ಶುಕ್ರ ಕುಜ ಗುರುಗಳು ಮತ್ತೊಂದು ಕುಂಡಲಿಯ ಕೋಣದಲ್ಲೋ ಅಥವಾ ಮೂರನೆ, ಹನ್ನೊಂದನೆ, ಮನೆಯಲ್ಲೋ ಇದ್ದರೆ ಅರ್ಥಾತ್ ಗಂಡನ ಜಾತಕದಲ್ಲಿ ಶುಕ್ರನು ವೃಷಭದಲ್ಲಿದ್ದಾಗ ಹೆಂಡತಿಯ ಜಾತಕದಲ್ಲಿ ಕಟಕ ಅಥವಾ ಕನ್ಯೆಯಲ್ಲೋ ಇಲ್ಲವೆ ವೃಶ್ಚಿಕದಲ್ಲೋ ಇದ್ದರೆ, ಅದು ಅನುಕೂಲವಾದ ಪರಿಸ್ಥಿತಿ. ಹೀಗೆ ಸೂರ್ಯ ಚಂದ್ರರೂ ಸಾಮರಸ್ಯ ಸೂಚಕವಾದ ಸ್ಥಿತಿಗಳಲ್ಲಿದ್ದರೆ – ದ್ವಿರ್ದ್ವಾದಶ ಎಂದರೆ ಎರಡು ಹನ್ನೆರಡು ಆಗಿರದೆ-ಸಾಧಾರಣವಾಗಿ ಗಂಡ ಹೆಂಡಿರಲ್ಲಿ ಗಾಢಾನುರಕ್ತಿ ಇರುತ್ತದೆ. ಸೂರ್ಯನು ಗಂಡನ ಜಾತಕದಲ್ಲಿ ಕಟಕದಲ್ಲಿರುವಾಗ ಹೆಂಡತಿಯ ಜಾತಕದಲ್ಲಿ ಕನ್ಯೆಯಲ್ಲಿದ್ದರೆ, ಅವಶ್ಯಕವಾದಷ್ಟು ಸಾಮರಸ್ಯವಿರುತ್ತದೆ. ಮೇಲೆ ಹೇಳಿದಂತೆ ಸೂರ್ಯ ಚಂದ್ರರಿಬ್ಬರೂ ವರನ ಕುಜನು ವಧುವಿನ ಶುಕ್ರನಿಂದ ಹನ್ನೆರಡರಲ್ಲಿದ್ದರೆ ಅಥವಾ ಅದು ಅದಲು ಬದಲಾಗಿದ್ದರೆ, ಅನುರಾಗವೇನೋ ಇರುತ್ತದೆ. ಆದರೂ ಅಂತರಂಗದಲ್ಲಿ ಸೌಖ್ಯವಿರುವುದಿಲ್ಲ. ಒಂದು ಜಾತಕದಲ್ಲಿ ಶುಕ್ರನಿರುವ ಸ್ಥಾನದಲ್ಲಿ ಮತ್ತೊಂದು ಜಾತಕದ ಶನಿಯಿದ್ದರೆ, ಗಂಭೀರ ಸ್ವಭಾವದ ಉದ್ಯಮಶೀಲ ಸಂಗಾತಿ ಸೂಚಿತವಾಗುತ್ತದೆ. ಏಳರಲ್ಲಿ ಕುಜನಿದ್ದು ಶುಭರಿಂದ ಈಕ್ಷಿತನಾಗದೆ ಇದ್ದರೆ, ವೈಮನಸ್ಯಕ್ಕೆ ಕಾರಣವಾಗುವ ವ್ಯಾಜ್ಯಗಳು ಪದೇ ಪದೇ ಉಂಟಾಗುತ್ತವೆ. ಎಂಟರಲ್ಲಿ ಶನಿಯಿದ್ದು ಕುಜನಿಂದ (ವಿಶೇಷವಾಗಿ ನಾಲ್ಕನೆ ಅಥವಾ ಎಂಟನೆ ಮನೆ ದೃಷ್ಟಿಯಿಂದ ವೀಕ್ಷಿತನಾಗದೆ ಹೋಗಿದ್ದರೆ, ಪರಸ್ಪರವಾದ ಒಮ್ಮತಕ್ಕೆ ಪ್ರೇರಕವಾಗುವುದಿಲ್ಲ. ಶನಿಯು ಏಳರಲ್ಲಿದ್ದರೆ ಮದುವೆ ಸ್ಥಿರವಾಗಿಯೇನೋ ಇರುತ್ತದೆ. ಆದರೆ ಗಂಡಹೆಂಡಿರಲ್ಲಿ ಆದರಣೆ ಇರುವುದಿಲ್ಲ. ಉದಾಸೀನ ಭಾವವಿರುತ್ತದೆ. ನಾಲ್ಕನೆ ಮನೆಯಲ್ಲಿ ಬಲಯುತನಾದ ಪಾಪಗ್ರಹವಿದ್ದರೆ, ವಿವಾಹ ಸೌಖ್ಯಕ್ಕೆ ಧಕ್ಕೆಯುಂಟಾಗುತ್ತದೆ. ಶುಭದೃಷ್ಟಿಯು ಇದನ್ನು ನಿವಾರಿಸುತ್ತದೆ. ಹೆಂಡತಿಯ (ಅಥವಾ ಗಂಡನ) ಜನ್ಮ ರಾಶಿಯು ಗಂಡನ (ಅಥವಾ ಹೆಂಡತಿಯ) ಲಗ್ನವಾದರೆ

ಇಲ್ಲವೆ ಹೆಂಡತಿಯ (ಅಥವಾ ಗಂಡನ) ಲಗ್ನವು ಗಂಡನ (ಅಥವಾ ಹೆಂಡತಿಯ) ಸಪ್ತಮಾಧಿಪತಿಯ ಸ್ಥಾನದಿಂದ ಏಳನೆಯ ಮನೆಯಾದರೆ ವಿವಾಹ ಜೀವನವು ಸುಭದ್ರವಾಗಿದ್ದು ಪರಸ್ಪರ ಒಮ್ಮತ ಪ್ರೀತಿಗಳ ಮೇಲೆ ಆಧಾರಗೊಂಡಿರುತ್ತದೆ.

ಒಂದು ಕುಂಡಲಿಯಲ್ಲಿ ದೋಷಗಳಿದ್ದರೆ ಇಂಥದೇ ದೋಷಗಳಿರುವ ಮತ್ತೊಂದು ಕುಂಡಲಿಯ ಜಾತಕನೊ/ಳೊಡನೆ ಕೂಡಿಸುವುದರಿಂದ ಪರಿಹಾರವಾಗುತ್ತವೆಂದು ಹೇಳುತ್ತಾರೆ.

ಜನ್ಮಕುಂಡಲಿಯ ಪ್ರಕಾರ ವಧುವಿನ (ವರನ) ಆಯುರಾರೋಗ್ಯ ಶೀಲ ಸೌಜನ್ಯಗಳನ್ನು ಖಚಿತಪಡಿಸಿಕೊಂಡ ತರುವಾಯ ಎರಡೂ ಜಾತಕಗಳು ಹೊಂದುತ್ತವೆಂದು ನಿಶ್ಚಯ ಮಾಡಬಹುದು.

ವಧುವಿನ ಜಾತಕದಲ್ಲಿ ವಿವಾಹಿತ ಜೀವನದಲ್ಲಿ ಕಷ್ಟಕಾರ್ಪಣ್ಯಗಳು ಸೂಚಿತವಾಗಿದ್ದರೆ ಅಂಥದೇ ಲಕ್ಷಣಗಳುಳ್ಳ ಜಾತಕನೊಡನೆ ವಿವಾಹ ಮಾಡುವುದರಿಂದ ಪರಿಹಾರಪಡೆದುಕೊಳ್ಳಬಹುದು. ಈ ರೀತಿಯಾಗಿ ವಿವಾಹ ಸಾಮರಸ್ಯವನ್ನು ಜಾತಕಗಳಲ್ಲಿನ ಕೆಡುಕುಗಳ ನಿವಾರಣೆ ಮಾಡಿಕೊಳ್ಳುವ ಮೂಲಕವೂ ಮತ್ತು ತಕ್ಕ ಮುಹೂರ್ತದಲ್ಲಿ ಮದುವೆ ನಡೆಸುವ ಮೂಲಕವೂ ಕುದುರಿಸಬಹುದು.

ಅಪ್ರಿಯ ಪರಿಣಾಮಗಳನ್ನು ಹೋಗಲಾಡಿಸಿಕೊಳ್ಳುವ ಸಲುವಾಗಿ ಮಹರ್ಷಿಪ್ರೋಕ್ತವಾದ ಜ್ಯೋತಿಷ ಶಾಸ್ತ್ರ ಗ್ರಂಥಗಳು ಕೆಲವು ಬಲಸೂಚಕವಾದ ಘಟಕಗಳನ್ನು ಗೊತ್ತುಪಡಿಸಿಕೊಟ್ಟಿವೆ. ಇವು ಸಮರ್ಪಕವಾಗಿದ್ದರೆ, ವಿವಾಹಿತರು ಬಡತನ ಮುಂತಾದ ಈತಿಬಾಧೆಗಳೂ ದೈಹಿಕ ಅಸೌಕರ್ಯಗಳೂ ಎಷ್ಟೇ ಇದ್ದರೂ ಸುಖವಾಗಿ ಬಾಳಬಹುದು.

ಸರಿಯಾದ ವಿವಾಹ ಮುಹೂರ್ತವನ್ನು ಆಯ್ದುಕೊಳ್ಳುವುದರಿಂದ ವಧೂ ವರರ ಜಾತಕಗಳಲ್ಲಿ ಕಂಡುಬರುವ ಹಲವಾರು ದೋಷಗಳನ್ನು ಬಹುಮಟ್ಟಿಗೆ ಕಡಿಮೆ ಮಾಡಿಕೊಳ್ಳಬಹುದು ಎಂದು ಮಹರ್ಷಿಗಳು ಹೇಳುತ್ತಾರೆ.

ಈ ಅಧ್ಯಾಯವನ್ನು ವಿವಾಹ ಸಾಮರಸ್ಯವನ್ನು ಕುರಿತ ವಿಧಾನಗಳನ್ನು ವಿವರಿಸುವಷ್ಟಕ್ಕೆ ಮಾತ್ರ ಪರಿಮಿತಗೊಳಿಸಿಕೊಂಡಿದ್ದೇನೆ. ಈ ವಿಧಾನಗಳನ್ನು ಪ್ರಯೋಗಿಸುವುದಕ್ಕೆ ಮುಂಚಿತವಾಗಿ, ಜಾತಕಗಳ ಏಳನೆ ಮತ್ತು ಎಂಟನೆ ಮನೆಗಳ ತಾಳಿಕೆಯನ್ನು ನಿಷ್ಕರ್ಷಿಸಿರಬೇಕು. ಎಂದು ಭಾವಿಸಿದೆ.

ವಿವಾಹ ಸಂಬಂಧಕ್ಕೆ ತಾಳಿಕೆಯನ್ನು ನಿಷ್ಕರ್ಷಿಸುವಾಗ ಪರಿಗಣಿಸಬೇಕಾದ 12 ಕೂಟಗಳ ಪೈಕಿ ಎಂಟು ಅತ್ಯಂತ ಪ್ರಾಮುಖ್ಯವಾದವು. ಈ ದ್ವಾದಶಕೂಟಗಳು ಯಾವುವೆಂದರೆ: (1) ದಿನ,(2) ಗಣ (3)ಮಹೇಂದ್ರ (4) ಸ್ತ್ರೀ ದೀರ್ಘ (5)

ಯೋನಿ (6) ರಾಶಿ (7) ರಾಶ್ಯಧಿಪತಿ (8) ವಶ್ಯ (9) ರಜ್ಜು (10) ವೇಧ (11) ವರ್ಣ ಮತ್ತು ನಾಡಿ.

ಈ ವಿಧಾನವನ್ನು ವಿಶದೀಕರಿಸಲು ನಾವಿಲ್ಲಿ ಮೃಗಶಿರ ಶತಭಿಷಗಳಲ್ಲಿ ಹುಟ್ಟಿದ ಗಂಡು ಹೆಣ್ಣುಗಳ ಕುಂಡಲಿಗಳನ್ನು ಪರಿಶೀಲಿಸೋಣ. ಏಳನೆ ಎಂಟನೆ ಮನೆಗಳು ಬಲಯುತವಾಗಿರುವುದಷ್ಟೆ ಅಲ್ಲದೆ ಪರಸ್ಪರ ಹೊಂದಿಕೆಯು ಆಗುತ್ತದೆಂದು ಅಂದು ಕೈಗೊಂಡಿದ್ದೇವೆ.

*1. ದಿನ ಕೂಟ :* ಹುಡುಗಿಯ ನಕ್ಷತ್ರದಿಂದ ಹುಡುಗನ ನಕ್ಷತ್ರದವರೆಗೆ ಎಣಿಸಿ. ಆ ಸಂಖ್ಯೆಯನ್ನು ಒಂಭತ್ತರಿಂದ ಭಾಗಿಸಿ. ಶೇಷವು ಎರಡು ನಾಲ್ಕು ಆರು ಎಂಟು ಅಥವಾ ಸೊನ್ನೆ ಆದರೆ ಆಗ ಒಳ್ಳೆಯದು. ಈ ಕೂಟದ ಒಪ್ಪಂದಕ್ಕೆ ಕೊಟ್ಟಿರುವ ಅಂಕಿ ಮೂರು.

*ಉದಾಹರಣೆ :* ಹುಡುಗನ ನಕ್ಷತ್ರ ವೃಷಭ ರಾಶಿಯ ಮೃಗಶಿರ. ಹುಡುಗಿಯ ನಕ್ಷತ್ರವಾದ ಧನಿಷ್ಠ (ಮಕರ) ದಿಂದ ಎಣಿಸಿದರೆ ಹತ್ತು ಬರುತ್ತದೆ. ಇದನ್ನು ಒಂಭತ್ತರಿಂದ ಭಾಗಿಸಿದರೆ, ಶೇಷ ಒಂದಾಗುತ್ತದೆ. ಆದಕಾರಣ ದಿನ ಕೂಟವು ಆಗುವುದಿಲ್ಲ ಆದುದರಿಂದ ಯಾವ ಅಂಕವೂ ಬರುವುದಿಲ್ಲ.

*2. ಗಣ ಕೂಟ :* ಸಂಬಂಧಪಟ್ಟ ಜೋಡಿಯ ಶೀಲ ಮತ್ತು ಸ್ವಭಾವ ಇವನ್ನು ಈ ಕೂಟ ಕುರಿತದ್ದೆಂದು ತೋರುತ್ತದೆ. ಜ್ಯೋತಿಷವು ಅಪೇಕ್ಷಿಸುವುದು ಶೀಲೈಕ್ಯವನ್ನಲ್ಲ, ಶೀಲ ಸಾಮರಸ್ಯವನ್ನು ಮಾತ್ರ. ಎರಡು ಬೇರೆ ಬಗೆಯ ಸ್ವಭಾವಗಳು ಪರಸ್ಪರ ಪೂರಕವಾಗಿ ಒಮ್ಮತಕ್ಕೆ ಕಾರಣವಾಗಬಹುದು. ಆದರೆ ಸ್ವಭಾವಸಾಮರಸ್ಯವು ಮಾತ್ರ ಸಮರ್ಪಕವಾದ ವಿವಾಹ ಜೀವನಕ್ಕೆ ಅವಶ್ಯಕ ಜ್ಯೋತಿಷಿಕವಾದ ವಿವಾಹ ಜೀವನಕ್ಕೆ ಅವಶ್ಯಕ. ಜ್ಯೋತಿಷಿಕವಾಗಿ ಮೂರು ಗಣಗಳನ್ನು (ಶೀಲಸ್ವಭಾವಗಳನ್ನು) ಗಣನೆಗೆ ತಂದುಕೊಳ್ಳುತ್ತಾರೆ:– ದೇವ, ಮನುಷ ಮತ್ತು ರಾಕ್ಷಸ. ದೇವ ಗಣವು ಧಾರ್ಮಿಕ ಪ್ರವೃತ್ತಿ ಶೀಲ ಸೌಜನ್ಯ ಉದಾರ ಸ್ವಭಾವ ಸೂಚಿಸುತ್ತವೆ. ಮನುಷವು ಒಳ್ಳೆಯದು ಕೆಟ್ಟದು ಬೆರಕೆ. ರಾಕ್ಷಸವು ದರ್ಪ ದುಮ್ಮಾನ ಹಿಂಸ್ರ ಲಕ್ಷಣಗಳನ್ನು ಕುರಿತದ್ದು. ಈ ಲಕ್ಷಣಗಳನ್ನು ಜನ್ಮ ನಕ್ಷತ್ರವು ಸೂಚಿಸುತ್ತದೆ. ಧಾರ್ಮಿಕತೆ ಮತ ಶುದ್ಧಗಳ ಬಗ್ಗೆ ಅನಾದರಣೆ ಇರುವವರನ್ನು ಆದರಣೆಯಿರುವವರ ಸಂಗಡ ಸೇರಿಸಲು ಆಗುವುದಿಲ್ಲ. ಕೇವಲ ಲೈಂಗಿಕವಾದ ಸಾಮ್ಯತೆಯಿಂದ ತತ್ವ ಸಿದ್ಧಾಂತಗಳ ನಂಬಿಕೆಗಳಲ್ಲಿರುವ ವಿಭಿನ್ನತೆಯನ್ನು ಹೋಗಲಾಡಿಸಿಕೊಳ್ಳಲು ಆಗುವುದಿಲ್ಲ. ಆದ ಕಾರಣ ದೇವಗಣದಲ್ಲಿ ಹುಟ್ಟಿದ ವ್ಯಕ್ತಿ ರಾಕ್ಷಸ ಗಣದ ವ್ಯಕ್ತಿಯೊಡನೆ ಏಗುವುದು

ಕಷ್ಟವಾಗುತ್ತದೆ. ಅಂದರೆ ದೇವಗಣದವರು ಪರಸ್ಪರ ಮದುವೆಯಾಗಬಹುದು. ಮನುಷ ಗಣದವರೂ ಅಷ್ಟೆ. ರಾಕ್ಷಸ ಗಣದವರೂ ಅಷ್ಟೆ.

ಮನುಷ ಅಥವಾ ದೇವ ಗಣದವನು ರಾಕ್ಷಸ ಗಣದವಳನ್ನು ಮದುವೆಯಾಗಕೂಡದು. ಆಗಬೇಕಾದರೆ ನಿವಾರಕ ಸಂದರ್ಭಗಳಿರಬೇಕು. ಆದರೆ ರಾಕ್ಷಸ ಗಣದವನು ದೇವ ಅಥವಾ ಮನುಷ ಗಣದವಳನ್ನು ಮದುವೆಯಾಗಬಹುದು. ನಿಷಿದ್ಧ ಗಣದವರು ಮದುವೆ ಆದರೆ ವ್ಯಾಜ್ಯ ವೈಮನಸ್ಯ ತಪ್ಪಿದ್ದಲ್ಲ. ಗಂಡಹೆಂಡಿರು ವಿಯೋಗ ವಿಚ್ಛೇದಗಳಿಗಾಗಿ ಹಾತೊರೆಯುವಂತಾಗುತ್ತದೆ. ಮುಂದೆ ಸೂಚಿಸಿರುವಂತೆ ದೇವ ಮನುಷ ರಾಕ್ಷಸ ಗಣಗಳನ್ನು ಸೂಚಿಸುವ ನಕ್ಷತ್ರಗಳು ಇರುತ್ತವೆ.

*ದೇವಗಣ* : ಪುನರ್ವಸು ಪುಷ್ಯಮಿ ಸ್ವಾತಿ ಹಸ್ತ ರೇವತಿ ಅನೂರಾಧ ಮೃಗಶಿರ ಅಶ್ವಿನಿ.

*ಮನುಷಗಣ* : ರೋಹಿಣಿ, ಪುಬ್ಬಾ, ಪೂರ್ವಾಷಾಢ, ಪುರ್ವಾಭಾದ್ರಪದ, ಭರಣಿ, ಆರ್ದ್ರ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ.

*ರಾಕ್ಷಸಗಣ* : ಕೃತ್ತಿಕ, ಆಶ್ಲೇಷ, ಮಖ, ಚಿತ್ತ, ವಿಶಾಖ, ಜ್ಯೇಷ್ಠ, ಮೂಲ, ಧನಿಷ್ಠ, ಶತಭಿಷ.

ಈ ಗಣದ ಒಪ್ಪಿಗೆಗೆ ಕೊಟ್ಟಿರುವ ಅಂಕ ಆರು.

ಉದಾಹರಣೆ: ಮೃಗಶಿರ ದೇವಗಣ. ಧನಿಷ್ಠ ರಾಕ್ಷಸಗಣ. ಆದಕಾರಣ ಗಣಕೂಟವಿಲ್ಲ. ವರನ ನಕ್ಷತ್ರಕ್ಕಿಂತ 14 ನಕ್ಷತ್ರಗಳಾಚೆಗೆ ವಧುವಿನ ನಕ್ಷತ್ರವಿದ್ದರೆ ದೋಷವಿರುವುದಿಲ್ಲ.

*3. ಮಹೇಂದ್ರ* : ಹುಡುಗಿಯ ನಕ್ಷತ್ರದೋಷದಿಂದ ಹುಡುಗನ ನಕ್ಷತ್ರ ನಾಲ್ಕನೆ, ಏಳನೆ, ಹತ್ತನೆ, ಹದಿಮೂರನೆ, ಹದಿನಾರನೆ, ಹತ್ತೊಂಭತ್ತನೆ, ಇಪ್ಪತ್ತೆರಡನೆ ಅಥವಾ ಇಪ್ಪತ್ತೈದನೆಯದಾಗಿರಬೇಕು. ಇದು ಹಿತಕಾರಿ, ಆಯುಸ್ಸನ್ನು ವರ್ಧಿಸುತ್ತದೆ.

ಉದಾಹರಣೆ: ಮೃಗಶಿರ (ಹುಡುಗನ ನಕ್ಷತ್ರ) ಹುಡುಗಿಯ ನಕ್ಷತ್ರ ಧನಿಷ್ಠದಿಂದ ಹತ್ತನೆಯದು. ಆದ ಕಾರಣ ಒಳ್ಳೆಯದು.

*4. ಸ್ತ್ರೀದೀರ್ಘ* : ಹುಡುಗನ ನಕ್ಷತ್ರವು ಹುಡುಗಿಯ ನಕ್ಷತ್ರಕ್ಕಿಂತ ಒಂಭತ್ತರ ಆಚೆಯಿರಬೇಕು. ಕೆಲವು ಶಾಸ್ತ್ರಕಾರರ ಪ್ರಕಾರ ಏಳು ನಕ್ಷತ್ರಗಳಿಗಿಂತ ಹೆಚ್ಚಾಗಿದ್ದರೆ ಸಾಕು.

*ವಿನಾಯಿತಿ* : ರಾಶಿ ಕೂಟ ಗ್ರಹ ಕೂಟಗಳು ಸಲ್ಲುವುದಾದರೆ ಇದನ್ನು ಕಡೆಗಾಣಬಹುದು.

*ಉದಾಹರಣೆ :* ಧನಿಷ್ಠಕ್ಕಿಂತ ಮೃಗಶಿರ ಒಂಭತ್ತು ನಕ್ಷತ್ರಗಳಾಚೆಗಿದೆ. ಆದಕಾರಣ ಸ್ತ್ರೀ ದೀರ್ಘಕೂಟವು ಕೂಡಿಬರುತ್ತದೆ.

*5. ಯೋನಿ ಕೂಟ :* ಯೋನಿ ಅಂದರೆ ಲಿಂಗ. ಯೋನಿ ಕೂಟ ಎಂದರೆ ಲಿಂಗ ಸಾಮರಸ್ಯ. ಚಿತ್ತ ನಕ್ಷತ್ರದಲ್ಲಿ ಹುಟ್ಟಿದವನ ಕಾಮ ಪ್ರವೃತ್ತಿ ಹುಲಿಯಷ್ಟು ಪ್ರಬಲ ಎನ್ನುತ್ತಾರೆ. ಮಾನವ ಭ್ರೂಣವು ತನ್ನ ಬೆಳವಣಿಗೆಯ ಅನುಕ್ರಮದಲ್ಲಿ ವಿವಿಧ ವಿಕಾಸಾವಸ್ಥೆಗಳನ್ನು ದಾಟುತ್ತದೆ. ವಸ್ತುನಿಪ್ರಾಣಿಗಳು ಮುಂತಾಗಿ ಆ ಆದಕಾರಣ, ಕೆಲವು ಪ್ರಾಣಿಗಳ ಪ್ರವೃತ್ತಿಗಳು ಪ್ರಬಲವಾಗಿರುತ್ತವೆ. ಜನ್ಮ ನಕ್ಷತ್ರವು ಈ ಪ್ರಾಬಲ್ಯವನ್ನು ಸೂಚಿಸುತ್ತವೆಂದು ಕಾಣಬರುತ್ತದೆ. ರಾಶಿ ಚಕ್ರದ ಪ್ರತಿಯೊಂದು ರಾಶಿಯೂ ಪ್ರತಿಯೊಂದು ಅಂಶವೂ ವ್ಯಕ್ತಿಯ ವಿಕಾಸಾವಸ್ಥೆಗಳನ್ನು ವ್ಯಕ್ತಪಡಿಸುತ್ತವೆ. ಹೇಗೆಂದರೆ, ಸಿಂಹದಲ್ಲಿ ಹುಟ್ಟಿದವನಿಗೆ ಸಿಂಹ ಲಕ್ಷಣವಿರುತ್ತವೆ. ಮೇಷಜಾತನು ಸಾಧುಭಾವದವನು ಪುಕ್ಕಲನೂ ಆಗಿರುತ್ತಾನೆ. ಈ ಜೈವಿಕ ಪ್ರವೃತ್ತಿಗಳೇ ಜ್ಯೋತಿಷಿಕ ಪರಿಗಣನೆಗಳ ಮೂಲವೆಂದು ಕಾಣುತ್ತದೆ. ವಧೂವರರಿಬ್ಬರೂ ಗಂಡು ನಕ್ಷತ್ರದವರಾದರೆ, ಸದಾ ಜಗಳ, ಲಿಂಗ ವ್ಯವಹಾರಗಳಲ್ಲಿ ಒಮ್ಮತವಿರುವುದಿಲ್ಲ. ಆದ ಕಾರಣ ಗಂಡು ನಕ್ಷತ್ರದ ಒಬ್ಬರನ್ನು ಹೆಣ್ಣು ನಕ್ಷತ್ರದ ಮತ್ತೊಬ್ಬರೊಡನೆ ಜತೆಗೂಡಿಸಬೇಕು. ಕೂಟಗಳ ವಿವಾಹ ಸೌಖ್ಯಕ್ಕೆ ಅಡಿಪಾಯವನ್ನು ಹಾಕಿಕೊಡುತ್ತದೆ.

ಆದ ಕಾರಣ ಯೋನಿ ಕೂಟವು ವಿವಾಹ ಜೀವನದ ಲಿಂಗ ಸಂಬಂಧವಾದ ವಿಷಯಗಳನ್ನು ಪರಿಗಣನೆಗೆ ತೆಗೆದುಕೊಂಡು ಲಿಂಗ ಪ್ರವೃತ್ತಿಯ ತಾರತಮ್ಯ, ಲಿಂಗ ಸಾಮರಸ್ಯ, ಜನನೇಂದ್ರಿಯಗಳ ಪ್ರಮಾಣ ಮುಂತಾದ ಲೈಂಗಿಕ ಸಾಮ್ಯಗಳನ್ನು ಸೂಚಿಸುತ್ತದೆ. ಹ್ಯಾವಲಾಕ್ ಎಲ್ಲಿಸ್ ಹೇಳುವಂತೆ ಸಲಹೆ ಕೇಳಲು ಬಂದ 500 ನಿರಂತರವಾದ ಪ್ರಕರಣಗಳ ಪೈಕಿ (1930) ಒಬ್ಬರು ವಿನಾ ಉಳಿದವರೆಲ್ಲರೂ ಲೈಂಗಿಕವಾದ ಹೊಂದಿಕೆಯಿಲ್ಲದೆ ತೊಡಕಿಗೆ ಸಿಕ್ಕಿಬಿದ್ದವರಾಗಿದ್ದರು. ಇದು ಯೋನಿ ಕೂಟದ ಪ್ರಾಮುಖ್ಯವನ್ನು ಸೂಚಿಸುತ್ತದೆ. ಇಪ್ಪತ್ತೇಳು ನಕ್ಷತ್ರಗಳಿಗೂ ಮುಂದೆ ಕೊಟ್ಟಿರುವ ಒಂದೊಂದು ಪ್ರಾಣಿಗೆ ಒಂದೊಂದು ಲಿಂಗ ಲಕ್ಷಣವನ್ನು ಕೊಡಲಾಗಿದೆ.

| ಗಂಡು | ಹೆಣ್ಣು | ಯಾವ ಯೋನಿ |
|---|---|---|
| 1. ಅಶ್ವಿನಿ | ಶತಭಿಷ | ಕುದುರೆ |
| 2. ಭರಣಿ | ರೇವತಿ | ಆನೆ |
| 3. ಪುಷ್ಯ | ಕೃತ್ತಿಕ | ಕುರಿ |
| 4. ರೋಹಿಣಿ | ಮೃಗಶಿರ | ಹಾವು |

| | | |
|---|---|---|
| 5. ಮೂಲ | ಆರ್ದ್ರ | ನಾಯಿ |
| 6. ಆಶ್ಲೇಷ | ಪುನರ್ವಸು | ಬೆಕ್ಕು |
| 7. ಮಖ | ಪುಬ್ಬ | ಇಲಿ |
| 8. ಉತ್ತರ | ಉತ್ತರಾಭಾದ್ರ | ಹಸು |
| 9. ಸ್ವಾತಿ | ಹಸ್ತ | ಎಮ್ಮೆ |
| 10. ವಿಶಾಖ | ಚಿತ್ತ | ಹುಲಿ |
| 11. ಜ್ಯೇಷ್ಠ | ಅನೂರಾಧ | ಮೊಲ |
| 12. ಪೂರ್ವಾಷಾಢ | ಶ್ರವಣ | ಕಪಿ |
| 13. ಪೂರ್ವಾಭಾದ್ರ | ಧನಿಷ್ಠ | ಸಿಂಹ |
| 14. ಉತ್ತರಾಷಾಢ | ಪೂರ್ವಾಷಾಢ | ಮುಂಗಸಿ |

ಒಂದೇ ಯೋನಿ ವರ್ಗಕ್ಕೆ ಸೇರಿದ ನಕ್ಷತ್ರಗಳವರಿಗೂ ಒಂದೇ ನಕ್ಷತ್ರ ಪುಂಸ್ತ್ರೀ ಯೋನಿಗಳಿಗೆ ಸೇರಿದವರಿಗೂ ಮದುವೆ ಆದರೆ ಸುಖ ಸಂತೋಷ. ಪರಸ್ಪರ ಸಾಮರಸ್ಯ ಮತ್ತು ಸತ್ಸಂತಾನವುಂಟಾಗುತ್ತದೆಂದು ಹೇಳುತ್ತಾರೆ. ಸ್ತ್ರೀಪುರುಷರಿಬ್ಬರೂ ಮಿತ್ರಯೋನಿಗಳಲ್ಲಿ ಜನಿಸಿದ್ದರೆ, ಒಂದು ವೇಳೆ ಅವೆರಡು ನಕ್ಷತ್ರಗಳಿಗೂ ಸ್ತ್ರೀ ನಕ್ಷತ್ರಗಳೇ ಆಗಿದ್ದರೂ ಕೂಡ ಒಮ್ಮತ ಸುಖವುಂಟಾಗುತ್ತದೆ. ದಂಪತಿಗಳಿಬ್ಬರೂ ಪುರುಷ ಯೋನಿಗೆ ಸೇರಿದವರಾದರೆ ಸದಾ ಕಾಟ ಕೋಟಲೆಗಳಿರುತ್ತವೆ. ಮಿತ್ರರಲ್ಲದ ಯೋನಿಗಳಿಗೆ ಸೇರಿದವರು ಮದುವೆ ಆಗುವುದು ಬೇಡ. ಅದನ್ನು ತ್ಯಜಿಸಬೇಕು. ಉದಾಹರಣೆಗೆ ಮೂಲಾ ನಕ್ಷತ್ರದ ಗಂಡಿಗೂ ಆರ್ದ್ರ ನಕ್ಷತ್ರದ ಹೆಣ್ಣಿಗೂ ಮದುವೆ ಆಗುತ್ತದೆನ್ನಿ. ಅದು ಸುಖದಾಯಕವಾಗುತ್ತದೆ. ಮಖ ಆರ್ದ್ರ ನಕ್ಷತ್ರಗಳು ನಾಯಿ ವರ್ಗದ ಗಂಡು ಹೆಣ್ಣು ಯೋನಿಗಳನ್ನು ಪ್ರತಿನಿಧಿಸುತ್ತವೆ. ಇಂಥ ವಿವಾಹ ವಿಹಿತಕಾರಿ, ಪೂರ್ಣ ಪ್ರಮಾಣದ ಅನುಕೂಲ ಫಲಗಳನ್ನು ಕೊಡುತ್ತದೆ. ಆದರೆ ಶತಭಿಷ ನಕ್ಷತ್ರದಲ್ಲಿ ಹುಟ್ಟಿದ ಗಂಡಿಗೂ ಪುನರ್ವಸು ನಕ್ಷತ್ರದಲ್ಲಿ ಹುಟ್ಟಿದ ಹೆಣ್ಣಿಗೂ ಮದುವೆ ಆದರೆ, ಆ ಎರಡು ನಕ್ಷತ್ರಗಳಿಗೂ ಸ್ತ್ರೀ ವರ್ಗಕ್ಕೆ ಸೇರಿರುವ ಕಾರಣ ಮದುವೆಯು ಪರವಾ ಇಲ್ಲವೆನಿಸಿದರೂ ಮುಂದೆ ಹೇಳಿರುವ ಜೋಡಿಯಷ್ಟು ಅನುಕೂಲ ದಾಂಪತ್ಯವಾಗಿರುವುದಿಲ್ಲ. ಶತ್ರು ವರ್ಗಗಳಿಗೆ ಸೇರಿದ ಯೋನಿಗಳಾದ ನಕ್ಷತ್ರ ಜಾತರಿಗೆ ವಿವಾಹವು ಉಕ್ತವಾಗಿಲ್ಲ. ಯೋನಿ ಕೂಟದ ಅಂಕಿ ನಾಲ್ಕು.

*ಉದಾಹರಣೆ :* ಮೃಗಶಿರ ಧನಿಷ್ಠ ಎರಡೂ ಸ್ತ್ರೀ ನಕ್ಷತ್ರಗಳೂ, ಒಂದರದು ಸರ್ಪಯೋನಿಯಾದರೆ ಮತ್ತೊಂದರದು ಸಿಂಹ ಯೋನಿ. ಆದಕಾರಣ ಯೋನಿ ಕೂಟ ಆಗಿಬರುವುದಿಲ್ಲ.

ಮುಂದೆ ಸೂಚಿಸಿರುವಂತೆ ವೈರ ಯೋನಿಗಳು ಇರುತ್ತವೆ. ಅದನ್ನು ವಿವಾಹಕ್ಕೆ ತ್ಯಜಿಸಬೇಕು:

*ಹಸು ಮತ್ತು ಹುಲಿ :* ಸಿಂಹ ಮತ್ತು ಆನೆ: ಕುದುರೆ ಮತ್ತು ಎಮ್ಮೆ ನಾಯಿ ಮತ್ತು ಮೊಲ, ಹಾವು ಮತ್ತು ಮುಂಗಸಿ, ಕಪಿ ಮತ್ತು ಮೇಕೆ, ಬೆಕ್ಕು ಮತ್ತು ಇಲಿ. ಇದೇ ರೀತಿಯಲ್ಲಿ ವೈರವಿರುವ ಜೋಡಿಗಳನ್ನು ಸೂಚಿಸುವ ನಕ್ಷತ್ರಗಳಿರುವವರ ಜೋಡಿಗಳನ್ನು ತ್ಯಜಿಸಬೇಕು. (ಪುಟ 92ರಲ್ಲಿ ಕೊಟ್ಟಿರುವ ಪಟ್ಟಿಯನ್ನು ನೋಡಿ).

*6. ರಾಶಿ ಕೂಟ :* ಹುಡುಗನ ರಾಶಿಯು ಹುಡುಗಿಯ ರಾಶಿಯಿಂದ ಎರಡನೆಯದೂ ಹುಡುಗಿಯ ರಾಶಿಯು ಹುಡುಗನ ರಾಶಿಯಿಂದ ಹನ್ನೆರಡನೆಯದೂ ಆಗಿದ್ದರೆ, ಕೆಟ್ಟ ಪರಿಣಾಮವುಂಟಾಗುತ್ತದೆ. ಆದರೆ, ಇದಕ್ಕೆ ಪ್ರತಿಯಾಗಿ ಹುಡುಗನ ರಾಶಿಯು ಹುಡುಗಿಯ ರಾಶಿಯಿಂದ ಹನ್ನೆರಡನೆಯವಾದರೆ, ಅರ್ಥಾತ್ ಹುಡುಗಿಯ ರಾಶಿಯು ಹುಡುಗನ ರಾಶಿಯಿಂದ ಎರಡನೆಯದಾದರೆ , ಅಂಥ ಜೋಡಿಗೆ ದೀರ್ಘಾಯುಸ್ಸುಂಟಾಗುತ್ತದೆಂದು ಜ್ಯೋತಿಷ ಶಾಸ್ತ್ರವು ನುಡಿಯುತ್ತದೆ. ಹುಡುಗಿಯ ರಾಶಿಯು ಹುಡುಗನ ರಾಶಿಯಿಂದ ಮೂರನೆಯದಾದರೆ ಕಷ್ಟ, ಕಾರ್ಪಣ್ಯಗಳುಂಟಾಗುತ್ತವೆ.

ಅದೇ ಹುಡುಗನ ರಾಶಿಯಿಂದ ಹುಡುಗಿಯ ರಾಶಿಯು ಮೂರನೆಯದಾದರೆ ಸೌಖ್ಯವುಂಟಾಗುತ್ತದೆ. ಹುಡುಗಿಯ ರಾಶಿಯಿಂದ ಹುಡುಗನ ರಾಶಿಯು ನಾಲ್ಕನೆಯದಾದರೆ ದಟ್ಟ ದಾರಿದ್ರ್ಯವುಂಟಾಗುತ್ತದೆ. ಆದರೆ ಹುಡುಗನ ರಾಶಿಯಿಂದ ಹುಡುಗಿಯರಾಶಿಯು ನಾಲ್ಕನೆಯದಾದರೆ ಸಂಪತ್ಸಮೃದ್ಧಿಯುಂಟಾಗುತ್ತದೆ. ಹುಡುಗನ ರಾಶಿಯು ಹುಡುಗಿಯ ರಾಶಿಯಿಂದ ಐದನೆಯದಾದರೆ, ಅಸೌಖ್ಯವುಂಟಾಗುತ್ತದೆ. ಆದರೆ ಹುಡುಗಿಯ ರಾಶಿಯು ಹುಡುಗನ ರಾಶಿಯಿಂದ ಐದನೆಯದಾದರೆ, ಸುಖೋಪಭೋಗ ಸಂಪತ್ಸಮೃದ್ಧಿಯುಂಟಾಗುತ್ತದೆ. ಆದರೆ ಹುಡುಗ ಹುಡುಗಿಯರ ರಾಶಿಗಳು ಪರಸ್ಪರ ಸಪ್ತಮದಲ್ಲಿದ್ದರೆ ಆರೋಗ್ಯ ಒಮ್ಮನಸ್ಸು ಸಂತೋಷಗಳು ಒದಗುತ್ತವೆ. ಹುಡುಗನ ರಾಶಿಯು ಹುಡುಗಿಯ ರಾಶಿಯಿಂದ ಆರನೆಯದಾದರೆ ಸಂತಾನ ನಷ್ಟವುಂಟಾಗುತ್ತದೆ. ಆದರೆ ಹುಡುಗಿಯ ರಾಶಿಯು ಹುಡುಗನ ರಾಶಿಯಿಂದ ಆರನೆಯದಾದರೆ ಸಂತಾನವು ಉಚ್ಛ್ರಾಯ ಪಡೆಯುತ್ತವೆ.

ಈ ಪಟ್ಟಿಯಲ್ಲಿ ಕೂಡಿಬರುವ ಯೋನಿ ಜೋಡಿಗಳನ್ನು ಕೊಟ್ಟಿದೆ. ಹುಡುಗನ ನಕ್ಷತ್ರ ಕುರಿ ವರ್ಗದ ಕೃತ್ತಿಕ ಅನ್ನಿ. ಹುಡುಗಿಯದು ಹುಲಿ ವರ್ಗದ ಚಿತ್ತ ನಕ್ಷತ್ರವೆನ್ನಿ. ಅಂಕಣದಲ್ಲಿ ಕುರಿಗೆ ಎದುರಾಗಿ ಎಡದಿಂದ ಬಲಕ್ಕಿರುವ ಪಂಕ್ತಿಯಲ್ಲಿ ಹುಲಿಯ ಅಂಕಣವನ್ನು ನೋಡಿ. ಅಲ್ಲಿ ಕೊಟ್ಟಿರುವ ಕೂಟದ ಅಂಕಿ ೧.

LANDSCAPE TABLE

| ಯೋನಿ | ಕುದುರೆ | ಆನೆ | ಕುರಿ | ಹಾವು | ನಾಯಿ | ಬೆಕ್ಕು | ಇಲಿ | ಹಸು | ಎಮ್ಮೆ | ಹುಲಿ | ಮೊಲ | ಕಪಿ | ಮುಂಗುಸಿ | ಸಿಂಹ |
|---|---|---|---|---|---|---|---|---|---|---|---|---|---|---|
| ಕುದುರೆ | 4 | 2 | 2 | 3 | 2 | 2 | 2 | 1 | 0 | 1 | 3 | 3 | 2 | 1 |
| ಆನೆ | 2 | 4 | 3 | 3 | 2 | 2 | 2 | 2 | 3 | 1 | 2 | 3 | 2 | 0 |
| ಕುರಿ | 2 | 3 | 4 | 2 | 1 | 2 | 1 | 3 | 3 | 1 | 2 | 0 | 3 | 1 |
| ಹಾವು | 3 | 3 | 2 | 4 | 2 | 1 | 1 | 1 | 1 | 2 | 2 | 2 | 0 | 2 |
| ನಾಯಿ | 2 | 2 | 1 | 2 | 4 | 2 | 1 | 2 | 2 | 1 | 0 | 2 | 1 | 1 |
| ಬೆಕ್ಕು | 2 | 2 | 2 | 1 | 2 | 4 | 0 | 2 | 2 | 1 | 3 | 3 | 2 | 1 |
| ಇಲಿ | 2 | 2 | 1 | 1 | 1 | 0 | 4 | 2 | 2 | 2 | 2 | 2 | 1 | 2 |
| ಹಸು | 1 | 2 | 3 | 1 | 2 | 2 | 2 | 4 | 3 | 0 | 3 | 2 | 2 | 1 |
| ಎಮ್ಮೆ | 0 | 3 | 3 | 1 | 2 | 2 | 2 | 3 | 4 | 1 | 2 | 2 | 2 | 1 |
| ಹುಲಿ | 1 | 1 | 1 | 2 | 1 | 1 | 2 | 0 | 1 | 4 | 1 | 1 | 2 | 1 |
| ಮೊಲ | 1 | 2 | 2 | 2 | 0 | 3 | 2 | 3 | 2 | 1 | 4 | 2 | 2 | 1 |
| ಕಪಿ | 3 | 3 | 0 | 2 | 2 | 3 | 2 | 2 | 2 | 2 | 4 | 4 | 3 | 2 |
| ಮುಂಗುಸಿ | 2 | 2 | 3 | 0 | 1 | 2 | 1 | 2 | 2 | 2 | 2 | 3 | 4 | 2 |
| ಸಿಂಹ | 1 | 0 | 1 | 2 | 1 | 1 | 2 | 1 | 2 | 1 | 1 | 2 | 2 | 4 |

ರಾಶಿಕೂಟಕ್ಕೆ ಕೊಟ್ಟಿರುವ ಅಂಕಿ 7.

*ವಿನಾಯಿತಿ:* ಉಭಯ ರಾಶಿಗಳ ಒಡೆಯನು ಒಬ್ಬನೇ ಗ್ರಹವಾದರೆ, ಅಥವಾ ಉಭಯ ರಾಶಿಗಳ ಒಡೆಯರೂ ಪರಸ್ಪರ ಮಿತ್ರರಾದರೆ, ಮೇಲೆ ಸೂಚಿಸಿರುವ ಕೆಡಕುಗಳು ನಿವಾರಣೆಯಾಗುತ್ತವೆ.

2. *ರಾಶ್ಯಧಿಪತಿ ಅಥವಾ ಗ್ರಹ ಮೈತ್ರಿ:* ಇದು ತುಂಬ ಮುಖ್ಯವಾದ ಕೂಟ. ಏಕೆಂದರೆ ದಂಪತಿಗಳ ಮಾನಸಿಕ ಪರಿಸ್ಥಿತಿಯನ್ನು ಇದು ಕುರಿತದ್ದಾಗಿದೆ. ಉಭಯತ್ರರ ಮಾನಸಿಕ ಲಕ್ಷಣಗಳೂ ಪರಸ್ಪರ ಪ್ರೀತಿ ವಿಶ್ವಾಸಗಳೂ ಅವರ ಸುಖಕ್ಕೆ ಅತ್ಯಂತ ಮುಖ್ಯವಾದುದೆಂಬುದು ನಿರ್ವಿವಾದ. ಈ ಕೂಟವನ್ನು ಮದುವೆಗೆ ಮುಂಚಿ ಪರೀಕ್ಷಿಸಿ ನೋಡಬೇಕು. ಗ್ರಹ ಮೈತ್ರಿಯನ್ನು ವಿಚಕ್ಷಿಸುವಾಗ ಜನ್ಮ ರಾಶಿಗಳ ಅಧಿಪತಿಗಳು ಮಿತ್ರರು ಹೌದೇ ಅಲ್ಲವೆ ಎಂಬುದನ್ನು ಗಮನಿಸುವುದು ಮುಖ್ಯ. ಗ್ರಹಗಳ ನಡುವಣ ಮೈತ್ರಿ ವೈರ ಮುಂತಾಗಿ ಕುರಿತ ಪಟ್ಟಿಯನ್ನು ಎಲ್ಲ ಜ್ಯೋತಿಷ ಗ್ರಂಥಗಳಲ್ಲೂ ಕೊಟ್ಟಿರುತ್ತವೆ. ಆದರೆ ವಾಚಕರು ಬೇರೆ ಕಡೆ ಹುಡುಕಾಡದಿರುವಂತೆ ಸಹಾಯವಾಗಲು ನಾನು ಈ ಪಟ್ಟಿಯನ್ನು ಇಲ್ಲಿ ಕೊಟ್ಟಿದ್ದೇನೆ.

## ಗ್ರಹಗಳ ಮೈತ್ರಿ ಪಟ್ಟಿ

| | ಮಿತ್ರ | ಸಮ | ಶತ್ರು |
|---|---|---|---|
| ರವಿ | ಚಂದ್ರ, ಕುಜ ಗುರು | ಬುಧ | ಶನಿ, ಶುಕ್ರ |
| ಚಂದ್ರ | ರವಿ, ಬುಧ | ಕುಜ, ಗುರು ಶುಕ್ರ ಶನಿ | – |
| ಕುಜ | ರವಿ, ಚಂದ್ರ | ಶುಕ್ರ ಶನಿ | ಬುಧ |
| ಗುರು | ರವಿ, ಚಂದ್ರ ಕುಜ | ಶನಿ | ಬುಧ, ಶುಕ್ರ |
| ಶುಕ್ರ | ಬುಧ, ಶನಿ | ಗುರು, ಕುಜ | ರವಿ, ಚಂದ್ರ |
| ಶನಿ | ಬುಧ, ಶುಕ್ರ | ಗುರು | ರವಿ, ಚಂದ್ರ, ಕುಜ |

ಗ್ರಹಗಳ ಸಂಬಂಧಗಳನ್ನು ಪರಿಶೀಲಿಸುವಾಗ, ತಾತ್ಕಾಲಿಕ ಸಂಬಂಧಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು. ನನ್ನ ನಮ್ರವಾದ ಅಭಿಪ್ರಾಯದಲ್ಲಿ ಇದು ಅಗತ್ಯವೇಕೆಂದರೆ, ಸಾಮರಸ್ಯ ಅಥವಾ ಹೊಂದಾಣಿಕೆ ಕುರಿತ ಇಡೀ ಪ್ರಸಂಗವು ಜನ್ಮ ನಕ್ಷತ್ರಗಳನ್ನು ಅವಲಂಬಿಸಿರುವುದಾಗಿರುತ್ತದೆ: ಅದು ಇಡೀ ಜಾತಕವನ್ನು ಕುರಿತದ್ದಲ್ಲ.

ವಧೂವರರ ಜನ್ಮ ರಾಶಿಗಳ ಅಧಿಪತಿಗಳು ಮಿತ್ರರಾಗಿದ್ದರೆ, ಆಗ್ಗೆ ಇಡೀ ರಾಶಿಕೂಟವು ಪೂರ್ತಿ ಇರುತ್ತದೆಂದು ಹೇಳಬಹುದು. ಒಬ್ಬ ಮಿತ್ರನಾಗಿ ಮತ್ತೊಬ್ಬ ಸಮನಾದರೆ, ಅದು ಪರವಾಯಿಲ್ಲ. ಇಬ್ಬರೂ ಸಮನಾದರೆ, ರಾಶಿಕೂಟವು ಸಾಧಾರಣತರದ್ದು. ಇಬ್ಬರೂ ಶತ್ರುಗಳಾಗಿದ್ದರೆ, ರಾಶಿ ಕೂಟವು ಇರುವುದಿಲ್ಲ.

*ವಿನಾಯಿತಿ :* ಜನ್ಮ ರಾಶಿಗಳ ಅಧಿಪತಿಗಳಲ್ಲಿ ಮೈತ್ರಿಯಿಲ್ಲವಾದರೂ ಕೂಡ, ಚಂದ್ರನ ನವಾಂಶಗಳಲ್ಲಿರುವ ಗ್ರಹಗಳ ನಡುವೆ ಮೈತ್ರಿ ಇದ್ದರೆ, ರಾಶಿ ಕೂಟವಿದೆ ಎಂದು ಭಾವಿಸಬಹುದು. ರಾಶಿ ಕೂಟಕ್ಕೆ ಕೊಟ್ಟಿರುವ ಅಂಕಿ ಇದು.

*ಉದಾಹರಣೆ :* ನಾವು ಕೊಟ್ಟಿರುವ ಉದಾಹರಣೆಯಲ್ಲಿ ಜನ್ಮ ರಾಶಿಗಳ ಅಧಿಪತಿಗಳು ಶುಕ್ರ ಮತ್ತು ಶನಿ. ಇಬ್ಬರೂ ಮಿತ್ರರು. ಆದ ಕಾರಣ ರಾಶಿ ಕೂಟವು ಪೂರ್ತಿ ಇದೆ. ವಧೂವರರು ಕ್ರಮವಾಗಿ ಮಖ 2 (ಸಿಂಹ), ಶತಭಿಷ 2 (ಕುಂಭ)ಗಳಲ್ಲಿ ಹುಟ್ಟಿದವರು ಎನ್ನೋಣ. ಆಗ್ಗೆ ರಾಶ್ಯಾಧಿಪತಿಗಳು ರವಿ ಶನಿಗಳಾಗುತ್ತಾರೆ. ಅವರು ಸ್ನೇಹಿತರಲ್ಲ, ಅಂಥ ಪ್ರಸಂಗದಲ್ಲಿ ನವಾಂಶಾಧಿಪತ್ಯವನ್ನು ಗಮನಿಸಬೇಕು. ಚಂದ್ರ ವೃಷಭ(ಶುಕ್ರ) ದಲ್ಲೂ ಮಕರ (ಶನಿ) ದಲ್ಲೂ ಇರುತ್ತಾನೆ. ಶುಕ್ರ ಶನಿಗಳೂ ಸ್ನೇಹಿತರು. ಆದಕಾರಣ ಸಂಬಂಧ ಕೂಡಿಬರುತ್ತದೆ. ಈ ಅಂಶಗಳನ್ನು ಪರಿಗಣಿಸುವಾಗ ತುಂಬ ಎಚ್ಚರದಿಂದಿರಬೇಕು. ಕೇವಲ ತೋರಿಕೆಯ ಆಧಾರದ ಮೇಲೆ ಯಾವ ಜಾತಕವನ್ನೂ ಹೊಂದುವುದಿಲ್ಲವೆಂದು ತಳ್ಳಿಕ್ಕಬಾರದು.

8. *ವಶ್ಯ ಕೂಟ :* ಇದು ಮುಖ್ಯ ಗಂಡ ಹೆಂಡರಲ್ಲಿ ಪರಸ್ಪರವಾಗಿ ಅನುಸರಣೆ ಇದೆಯೇ ಅಥವಾ ಅವರು ಪರಸ್ಪರ ಬೇರಬಲ್ಲರಾಗಿದ್ದಾರೆಯೇ ಎಂಬುದನ್ನು ಇದು ತೋರಿಸುತ್ತದೆ. ಮೇಷಕ್ಕೆ ಸಿಂಹ ವೃಶ್ಚಿಕ ವಶವಾಗುತ್ತದೆ. ವೃಷಭಕ್ಕೆ –ಕಟಕ, ತುಲ, ಮಿಥುನಕ್ಕೆ ಕನ್ಯ. ಕಟಕಕ್ಕೆ – ವೃಶ್ಚಿಕ, ಧನುಸ್. ಸಿಂಹಕ್ಕೆ ತುಲ ಕನ್ಯೆಗೆ – ಮೀನ, ಮಿಥುನ. ತುಲಾಕ್ಕೆ–ಮಕರ, ಕನ್ಯ. ವೃಶ್ಚಿಕಕ್ಕೆ –ಕಟಕ. ಧನುಸ್ಸಿಗೆ –ಮೀನ. ಮಕರಕ್ಕೆ–ಮೇಷ, ಕುಂಭ. ಕುಂಭಕ್ಕೆ – ಮೇಷ. ಮೀನಕ್ಕೆ – ಮಕರ. ಈ ಕೂಟಕ್ಕೆ ಕೊಟ್ಟಿರುವ ಅಂಕಿ ಎರಡು.

*ಉದಾಹರಣೆ :* ಉದಾಹರಣೆಯಲ್ಲಿ ಹುಡುಗನ ಜಾತಕವಾಗಲಿ ಹುಡುಗಿಯ ಜಾತಕವಾಗಲಿ ಪರಸ್ಪರ ಹತೋಟಿಗೆ ಸಗ್ಗುವುದಿಲ್ಲ.

9. ರಜ್ಜು: ಇದು ವಿವಾಹ ಜೀವನವು ಎಷ್ಟು ದೀರ್ಘ,ಎಷ್ಟು ಬಲಯುತ ಎಂದು ಸೂಚಿಸುತ್ತದೆ. ಆದಕಾರಣ, ವಿಶೇಷ ಗಮನವನ್ನು ಇದಕ್ಕೆ ಕೊಡತಕ್ಕದ್ದು. ಇಪ್ಪತ್ತೇಳು ನಕ್ಷತ್ರಗಳನ್ನು ಐದು ರಜ್ಜುಗಳಾಗಿ ವಿಂಗಡಿಸಿದೆ.

*ಪಾದರಜ್ಜು:* ಅಶ್ವಿನಿ, ಅಶ್ಲೇಷ, ಮಖ, ಜ್ಯೇಷ್ಠ, ಮೂಲ, ರೇವತಿ.

*ಕಟಿರಜ್ಜು:* ಭರಣಿ, ಪುಷ್ಯಮಿ, ಪುಬ್ಬ, ಅನೂರಾಧ, ಪೂರ್ವಾಷಾಢ, ಉತ್ತರಾಷಾಢ.

*ನಾಭಿ ಅಥವಾ ಉದರ ರಜ್ಜು :* ಕೃತ್ತಿಕ, ಪುನರ್ವಸು, ಉತ್ತರ, ವಿಶಾಖಾ, ಉತ್ತರಷಾಢ, ಪೂರ್ವಾಬಾದ್ರ.

*ಕಂಠರಜ್ಜು:* ರೋಹಿಣಿ, ಆರ್ದ್ರ, ಹಸ್ತ, ಸ್ವಾತಿ, ಶ್ರವಣ, ಶತಭಿಷ.

*ಶತೋರಜ್ಜು:* ಧನಿಷ್ಠ, ಚಿತ್ತ, ಮೃಗಶಿರ.

ವಧೂವರರ ಜನ್ಮ ನಕ್ಷತ್ರಗಳು ಒಂದೇ ರಜ್ಜುವಿನಲ್ಲಿ ಬೀಳಬಾರದು. ಅವು ಶತೋರಜ್ಜು (ತಲೆ)ವಿನಲ್ಲಿ ಬಿದ್ದರೆ ಗಂಡನ ಸಾವು ಸಂಭವ. ಕಂಠ (ಕತ್ತು) ರಜ್ಜುವಿನಲ್ಲಾದರೆ ಹೆಂಡತಿ ಸಾಯಬಹುದು. ಉದರ (ಹೊಟ್ಟೆ) ರಜ್ಜುವಿನಲ್ಲಾದರೆ ಮಕ್ಕಳು ಸಾಯಬಹುದು. ಕಟಿ (ನಡು)ವಿನಲ್ಲಾದರೆ, ಬಡತನ ಒದಗಬಹುದು. ಪಾದ(ಕಾಲು)ದಲ್ಲಾದರೆ ದಂಪತಿಗಳು ಸದಾ ಅಲೆಯುತ್ತಿರುವಂತಾಗಬಹುದು. ಆದ ಕಾರಣ ಹುಡುಗ ಹುಡುಗಿಯರ ನಕ್ಷತ್ರಗಳು ಪ್ರತ್ಯೇಕವಾದ ರಜ್ಜುಗಳಲ್ಲಿ ಬೀಳುವನಾಗಬೇಕು.

*10. ವೇಧ :* ವೇಧೆ ಎಂದರೆ ಬಾಧೆ. ಕೆಲವು ನಕ್ಷತ್ರಗಳು ತಮ್ಮಿಂದ ಇಂತಿಷ್ಟು ದೂರದಲ್ಲಿರುವ ನಕ್ಷತ್ರಗಳಿಗೆ ವೇಧೆಯುಂಟುಮಾಡುವ ಸಾಮರ್ಥ್ಯ ಪಡೆದಿರುತ್ತವೆ. ಉದಾಹರಣೆಗೆ, ಅಶ್ವಿನಿ ತನ್ನಿಂದ ಹದಿನೆಂಟನೆ ನಕ್ಷತ್ರರಾದ ಜ್ಯೇಷ್ಠಕ್ಕೆ ವೇಧೆಯುಂಟುಮಾಡುತ್ತದೆ ಎಂದು ಹೇಳಲಾಗಿದೆ. ಭರಣಿ ಹದಿನಾರನೆ ನಕ್ಷತ್ರಕ್ಕೆ ಮುಂತಾಗಿ ಮುಂದೆ ಕೊಟ್ಟಿರುವ ನಕ್ಷತ್ರ ಜೋಡಿಗಳು ಪರಸ್ಪರ ಪರಿಣಾಮವುಂಟುಮಾಡುತ್ತವೆ. ಆದಕಾರಣ ವಧೂವರರ ಜನ್ಮ ನಕ್ಷತ್ರಗಳು ಒಂದೇ ಜೋಡಿಗೆ ಸೇರಿದವುಗಳಾಗಬಾರದು. ಇದಕ್ಕೆ ಇತರೆ ಪರಿಹಾರಕ ಪರಿಸ್ಥಿತಿಗಳಿದ್ದರೆ ಆಗ ಪರವಾಯಿಲ್ಲ.

ಅಶ್ವಿನಿ ಮತ್ತು ಜ್ಯೇಷ್ಠ, ಭರಣಿ ಮತ್ತು ಅನೂರಾಧ; ಕೃತ್ತಿಕ ಮತ್ತು ವಿಶಾಖ; ರೋಹಿಣಿ ಮತ್ತು ಸ್ವಾತಿ; ಆರ್ದ್ರ ಮತ್ತು ಶ್ರವಣ; ಪುನರ್ವಸು ಮತ್ತು ಉತ್ತರಾಷಾಢ; ಪುಷ್ಯಮಿ ಮತ್ತು ಪೂರ್ವಾಷಾಢ; ಆಶ್ಲೇಷ ಮತ್ತು ಮೂಲ, ಮಖ ಮತ್ತು ರೇವತಿ; ಪುಬ್ಬ ಮತ್ತು ಉತ್ತರಾಭಾದ್ರ; ಉತ್ತರ ಮತ್ತು ಪೂರ್ವಾಭಾದ್ರ; ಹಸ್ತ ಮತ್ತು ಶತಭಿಷ; ಮೃಗಶಿರ ಮತ್ತು ಧನಿಷ್ಠ. ಉದಾಹರಣೆಯಲ್ಲಿ ವಧೂವರರ ನಕ್ಷತ್ರಗಳು (ಮೃಗಶಿರ ಮತ್ತು ಧನಿಷ್ಠ) ನಿಷಿದ್ಧವಾದ ಗುಂಪಿಗೆ ಸೇರಿವೆ. ಆದಕಾರಣ ವೇಧ ಕೂಟವಿರುವುದಿಲ್ಲ.

*11. ವರ್ಗ;* ಇದು ಮದುವೆಯಾಗುವ ಜೋಡಿಯ ಆಧ್ಯಾತ್ಮಕ ಅಥವಾ ಆತ್ಮದ ಉನ್ನತಿಯನ್ನು ಸೂಚಿಸುತ್ತದೆಂದು ಕಾಣಬರುತ್ತದೆ. ಮೀನ, ವೃಶ್ಚಿಕ, ಕಟಕ ಅತ್ಯುನ್ನತವಾದ ಬೆಳವಣಿಗೆಯನ್ನು ಸೂಚಿಸುತ್ತದೆ. ಬ್ರಾಹ್ಮಣ, ಸಿಂಹ, ಧನುಸ್, ತುಲ – ಎರಡನೆ ಅಂತಸ್ತಿನ ಬೆಳವಣಿಗೆ –ಕ್ಷತ್ರಿಯ. ಮೇಷ, ಮಿಥುನ, ಕುಂಭ ಇವು ಮೂರನೆಯ ಹಂತ – ವೈಶ್ಯ. ವೃಷಭ, ಕನ್ಯ ಮಕರ ಕಡೆಯ ಹಂತ – ಶೂದ್ರ. ಮೇಲ್ಮಟ್ಟದ ಹಂತಕ್ಕೆ ಸೇರಿದ ಹುಡುಗಿಯನ್ನು ಕೀಳ್ಮಟ್ಟದ ಹುಡುಗನಿಗೆ ಕೊಟ್ಟು ಮದುವೆ ಮಾಡಬಾರದು. ಇದಕ್ಕೆ ಪ್ರತಿಯಾಗಿ ಆಗಬಹುದು. ಅಥವಾ ಒಂದೇ ಹಂತದವರ ವಿವಾಹವೂ ಆಗಬಹುದು.

ಈ ಕೂಟದ ಅಂಕ ಒಂದು.

*12. ನಾಡಿ ಕೂಟ :* ಇದು ಅತ್ಯಂತ ಮುಖ್ಯವೂ ಗಮನಾರ್ಹವೂ ಆದ ಕೂಟ. ಸಂಸ್ಕೃತದಲ್ಲಿ ನಾಡಿ ಎಂಬ ಮಾತಿಗೆ ನಾನಾರ್ಥಗಳಿವೆ. ಜ್ಯೋತಿಷಕ್ಕೆ ಸಂಬಂಧಪಟ್ಟಂತೆ ನಾಡಿ ಅಂದರೆ ರಕ್ತಧಮನಿಯ ಮಿಡಿತ ಅರ್ಥಾತ್ ನರದ ಶಕ್ತಿ. ದೈಹಿಕ ಲಕ್ಷಣಗಳನ್ನು ಕೊಂಚ ಮಟ್ಟಿಗೆ ಆನುವಂಶಿಕ ಲಕ್ಷಣಗಳನ್ನು ಇದು ತಿಳಿಸುತ್ತದೆ. ಹಿಂದೂ ವೈದ್ಯಕೀಯ (ಆಯುರ್ವೇದ) ಗ್ರಂಥಗಳು ಮೂರು ನಾಡಿಗಳನ್ನು ಹೇಳುತ್ತವೆ. ವಾತ, ಪಿತ್ತ ಮತ್ತು ಶ್ಲೇಷ್ಮ ಈ ಮೂರರ ಪೈಕಿ ಯಾವೊಂದು ನಾಡಿಯು ಪ್ರಾಧಾನವಾಗಿರುವ ಹುಡುಗನೂ ಅದೇ ನಾಡಿ ಪ್ರಧಾನವಾದ ಹುಡುಗಿಯನ್ನು ಮದುವೆಯಾಗಬಾರದು. ಬೇರೆ ಪ್ರಕೃತಿಗೆ ಸೇರಿದ ಹುಡುಗಿಯಾಗಿರಬೇಕು. ಮೂರು ನಾಡಿಗಳಿಗೂ ಬೇರೆ ಬೇರೆ ನಕ್ಷತ್ರಗಳನ್ನು ಕೊಡಲಾಗಿದೆ.

| ವಾತ | ಪಿತ್ತ | ಶ್ಲೇಷ್ಮ |
|---|---|---|
| ಅಶ್ವಿನಿ | ಭರಣಿ | ಕೃತ್ತಿಕ |
| ಆರ್ದ್ರ | ಮೃಗಶಿರ | ರೋಹಿಣಿ |
| ಪುನರ್ವಸು | ಪುಷ್ಯಮಿ | ಆಶ್ಲೇಷ |
| ಉತ್ತರ | ಪುಬ್ಬ | ಮಖ |
| ಹಸ್ತ | ಚಿತ್ತ | ಸ್ವಾತಿ |
| ಜ್ಯೇಷ್ಠ | ಅನೂರಾಧ | ವಿಶಾಖಾ |
| ಮೂಲ | ಪೂರ್ವಾಷಾಢ | ಉತ್ತರಾಷಾಢ |
| ಶತಭಿಷ | ಧನಿಷ್ಠ | ಶ್ರವಣ |
| ಪೂರ್ವಾಷಾಢ | ಉತ್ತರಾಭಾದ್ರ | ರೇವತಿ |

ಒಂದು ಗುಂಪಿಗೆ ಸೇರಿದ ನಕ್ಷತ್ರವುಳ್ಳ ಹುಡುಗ ಬೇರೆ ಗುಂಪಿಗೆ ಸೇರಿದ ನಕ್ಷತ್ರವುಳ್ಳ ಹುಡುಗಿಯನ್ನು ಮದುವೆ ಆದರೆ, ಆಗ ಆ ಜೋಡಿಗೆ ಒಮ್ಮನಸ್ಸು ಉಂಟಾಗುತ್ತದೆ. ಎರಡು ನಕ್ಷತ್ರಗಳು ಮಧ್ಯದ ಗುಂಪಿಗೆ ಸೇರಿದವಾಗಬಾರದು. ಕೆಲವು ಸಂದರ್ಭಗಳಲ್ಲಿ ನಕ್ಷತ್ರಗಳು ಒಂದೇ ಗುಂಪಿನ ಮೊದಲ ಮತ್ತು ಕಡೆಯ ಪಂಕ್ತಿಗೆ ಸೇರಿದವಾಗಬಹುದು.

ನಕ್ಷತ್ರಗಳ ಪ್ರಕಾರ ನಾಡೀಕೂಟವಿಲ್ಲವಾದರೆ ನಕ್ಷತ್ರಪಾದಗಳ ಪ್ರಕಾರ ಎಣಿಸಿ ನೋಡಬೇಕು. ಬೇರೆ ಬೇರೆ ಪಾದಗಳಿಗೆ ಬೇರೆ ಬೇರೆ ನಾಡಿಗಳಿವೆ. ವಾತ, ಪಿತ್ತ ಶ್ಲೇಷ್ಮಗಳು ಈ ರೀತಿ ನಕ್ಷತ್ರ ಪಾದಗಳಿಗೆ ವಿಂಗಡನೆಯಾಗುತ್ತವೆ.

| | | | | | |
|---|---|---|---|---|---|
| ಅಶ್ವಿನಿ | 1 | ಅಶ್ವಿನಿ | 2 | ಅಶ್ವಿನಿ | 3 |
| ಭರಣಿ | 2 | ಭರಣಿ | 1 | ಅಶ್ವಿನಿ | 4 |
| ಭರಣಿ | 3 | ಭರಣಿ | 4 | ಕೃತ್ತಿಕ | 1 |
| ಕೃತ್ತಿಕ | 4 | ಕೃತ್ತಿಕ | 3 | ಕೃತ್ತಿಕ | 2 |
| ರೋಹಿಣಿ | 1 | ರೋಹಿಣಿ | 2 | ರೋಹಿಣಿ | 3 |

ಮೇಲೆ ಕೊಟ್ಟಿರುವಂತೆ ಇತರೆ ನಕ್ಷತ್ರ ಪಾದಗಳಿಗೂ ಮೂರು ಪಾದಗಳು ಮುಂದಕ್ಕೆ, ತರುವಾಯ ಮೂರು ಹಿಂದಕ್ಕೆ ಎಣಿಸಿ ವಿಂಗಡಿಸಿಕೊಳ್ಳತಕ್ಕದ್ದು.

ಈ ಕೂಟಕ್ಕೆ ಎಂಟು ಅಂಕ ಕೊಟ್ಟಿದೆ.

ಮೇಲೆ ಕೊಟ್ಟಿರುವ ಉದಾಹರಣೆಯಲ್ಲಿ ಎರಡು ನಕ್ಷತ್ರಗಳೂ ಮಧ್ಯದ ಪಂಕ್ತಿಯಲ್ಲಿ ಬೀಳುತ್ತವೆ. ಆದಕಾರಣ ನಾಡಿ ಕೂಟವು ಪೂರ್ತಿಯಾಗಿ ಇಲ್ಲವಾಗಿದೆ.

ಪರಿಶಿಷ್ಟ 1 ಕೂಟಸಾಮ್ಯವನ್ನು ತೋರಿಸುವ ಪಟ್ಟಿ. ಮೊದಲನೆ ಅಂಕಣದಲ್ಲಿ ಮೇಲನಿಂದ ಕೆಳಕ್ಕೆ ವಧುವಿನ ನಕ್ಷತ್ರಗಳನ್ನು ಕೊಟ್ಟಿದೆ.

ಅಡ್ಡ ಪಂಕ್ತಿಯಲ್ಲಿ ಎಡದಿಂದ ಬಲಕ್ಕೆ ವರನ ನಕ್ಷತ್ರಗಳನ್ನು ಕೊಟ್ಟಿದೆ. ವಧೂವರರ ನಕ್ಷತ್ರಗಳೆರಡೂ ಕೂಡುವ ಕಡೆ ಕೊಟ್ಟಿರುವ ಅಂಕಿಯನ್ನು ತೆಗೆದುಕೊಳ್ಳಿ ವರನ ನಕ್ಷತ್ರ ಮೃಗಶಿರ-1 ಎನ್ನಿ. ಅದು ವೃಷಭ ರಾಶಿಯಾಗುತ್ತದೆ.

ವಧುವಿನ ನಕ್ಷತ್ರ ಶತಭಿಷ-2 ಅದು ಕುಂಭ ರಾಶಿಗೆ ಸೇರುತ್ತದೆ. ವೃಷಭ ರಾಶಿಯ ಮೃಗಶಿರ-2 ರಿಂದ ನಮ್ಮ ಕಣ್ಣನ್ನು ಅಂಕಣದಲ್ಲಿ ಕೆಳಕ್ಕೆ ಹಾಯಿಸೋಣ. ಅಡ್ಡ ಪಂಕ್ತಿ ಎಡದಿಂದ ಬಲಕ್ಕೆ ಬರುವಾಗ ಕುಂಭದ ಶತಭಿಷ-4 ಸಿಗುತ್ತದೆ. ಅಲ್ಲಿ ಕೊಟ್ಟಿರುವ ಅಂಕಿ 26.6. ಅದು ಕೂಟಗಳ ಸಾಮ್ಯದ ಸೂಚಕ.

## ವಿಶೇಷ ಪರಿಗಣನೆಗಳು

ಮೇಲೆ ನಾವು ಮದುವೆಯ ಸಾಮರಸ್ಯ ಮತ್ತು ವಿವಿಧ ಕೂಟಗಳ ಪ್ರಾಮುಖ್ಯ ಕುರಿತು ಸವಿಸ್ತಾರವಾಗಿ ವಿವೇಚಿಸಿದ್ದೇವೆ. ಅರ್ಥಾತ್ ಮನುಷ್ಯ ದೇಹದಲ್ಲಿರುವ ದೈಹಿಕ ಮಾನಸಿಕ ಸಂಧಿಗಳು ಸಂಗಮ ಸ್ಥಾನಗಳು ಯಾವುವು, ಹೀಗೆ ಪ್ರತಿಕೂಟವನ್ನು ಪರಿಶೀಲಿಸುವ ಮೂಲಕ ವಧೂವರರ ನಡುವೆ ವಿವಾಹ ಜೀವನದಲ್ಲಿ ಏರ್ಪಡಬಹುದಾದ ಸಾಮರಸ್ಯ ಅಥವಾ ವಿರಸವನ್ನು ಗ್ರಹಿಸಲು ಸಾಧ್ಯವಾಗುತ್ತದೆ ಎಂಬುದನ್ನು ಪರಿಶೀಲಿಸಿದ್ದೇವೆ.

## ವಿನಾಯಿತಿಗಳು

ನಾವು ಈಗ ಒಂದೇ ಜನ್ಮರಾಶಿ, ಒಂದೇ ಜನ್ಮ ನಕ್ಷತ್ರ ಮತ್ತು ಕೆಲವು ಕೂಟಗಳು ಇಲ್ಲದಿರುವಿಕೆ–ಈ ಸಂದರ್ಭಗಳಿಂದ ಉಂಟಾಗಬಹುದಾದ ಪ್ರಸಂಗಗಳನ್ನು ತೆಗೆದುಕೊಳ್ಳುತ್ತೇವೆ.

(1)ಸ್ತ್ರೀದೀರ್ಘ (ಪುಟ ....) ವಿಲ್ಲದಿರುವಾಗ ರಾಶಿಕೂಟ ಮತ್ತು ಗ್ರಹಮೈತ್ರಿ ಇದ್ದರೆ, ಸ್ತ್ರೀದೀರ್ಘವನ್ನು ಕಡೆಗಾಣಬಹುದು.

(2) ವಧುವಿನ ರಾಶಿಯು ಬೆಸ ಸಂಖ್ಯೆಯದಾದರೆ, ಅದರಿಂದ 6ನೇ ಮತ್ತು 8ನೇ ರಾಶಿಗಳು ಮಿತ್ರ ರಾಶಿಗಳಾಗುತ್ತವೆ. ವಧುವಿನ ರಾಶಿಯು ಸಮಸಂಖ್ಯೆಯದಾದರೆ, ಅಲ್ಲಿಂದ 2ನೇ ಮತ್ತು 12ನೇ ರಾಶಿಗಳು ಮಿತ್ರ ರಾಶಿಗಳಾಗುತ್ತವೆ. ವಧುವಿನ ಜನ್ಮ ನಕ್ಷತ್ರವು ರಾಕ್ಷಸ ಗಣಕ್ಕೆ ಸೇರಿ ದೋಷಯುಕ್ತವಾಗಿದ್ದಾಗ, ಜನ್ಮರಾಶಿಯು 2-12, 9-5 ಅಥವಾ 6-8 ಆಗಿ ಆ ರಾಶಿಗಳ ಅಧಿಪತಿಗಳು ಒಬ್ಬರೇ ಆಗಿದ್ದರೆ ಅಥವಾ ಮಿತ್ರರಾಗಿದ್ದರೆ, ದೋಷವನ್ನು ಕಡೆಗಾಣಬಹುದು.

(3)ಗ್ರಹಮೈತ್ರಿಯು ಅತ್ಯಂತ ಮುಖ್ಯವಾದ ಪರಿಗಣನೆಯಾದರೂ ವಧೂವರರ ಜನ್ಮರಾಶಿಗಳು ಪರಸ್ಪರ ಸಮಸಪ್ತಕ (1-7) ಆಗಿದ್ದರೆ, ಗ್ರಹಮೈತ್ರಿಯನ್ನು ಕಡೆಗಾಣಬಹುದು.

(4)ಗ್ರಹಮೈತ್ರಿ ರಾಶಿ ದಿನ ಮಹೇಂದ್ರ ಕೂಟಗಳು ಇದ್ದಾಗ ರಜ್ಜುಕೂಟವನ್ನು ಕಡೆಗಾಣಬಹುದು.

(5) ನಾಡಿಕೂಟದ ದೋಷವನ್ನು ಕಡೆಗಾಣಬಹುದಾದ ಪ್ರಸಂಗಗಳು ಯಾವುವೆಂದರೆ:– (1) ರಾಶಿ ಮತ್ತು ರಜ್ಜುಕೂಟಗಳಿರಬೇಕು. (2) ವಧೂವರರ ಜನ್ಮರಾಶಿಗಳ ಅಧಿಪತಿ ಒಬ್ಬನೇ ಆಗಿರಬೇಕು. (3) ವಧೂವರರ ಜನ್ಮರಾಶ್ಯಾಧಿಪತಿಗಳು ಮಿತ್ರರಾಗಿರಬೇಕು.

ಎಷ್ಟೋ ಪ್ರಕರಣಗಳಲ್ಲಿ ವಧೂವರರ ಜನ್ಮರಾಶಿಗಳೋ ಜನ್ಮ ನಕ್ಷತ್ರಗಳೋ ಒಂದೇ ಆಗಿರುತ್ತವೆ. ಅಂಥ ಪ್ರಕರಣಗಳಲ್ಲಿ ಗಮನಿಸಬೇಕಾದ ವಿನಾಯಿತಿಗಳಿಗೆ ಶಾಸ್ತ್ರಕಾರರು ವಿಶೇಷ ಗಮನವನ್ನು ಕೊಟ್ಟಿದ್ದಾರೆ. ವಾಚಕರ ಪ್ರಯೋಜನಾರ್ಥವಾಗಿ ಅವನ್ನು ಕುರಿತು ಪ್ರಸ್ತಾಪಿಸುತ್ತೇವೆ.

*ಒಂದೇ ಜನ್ಮರಾಶಿ* : ಸಮಾನವಾದ ಜನ್ಮರಾಶಿಯಿರುವುದರಿಂದ ಉಂಟಾಗುವ ಪರಿಣಾಮಗಳನ್ನು ಕುರಿತಂತೆ ಭಿನ್ನಾಭಿಪ್ರಾಯಗಳಿವೆ. ನಾರದನ ಪ್ರಕಾರ, ವಿವಿಧ ನಕ್ಷತ್ರಗಳಲ್ಲಿ ಹುಟ್ಟಿದ ಸಮಾನ ರಾಶಿಯರಿಗೆ ದಾರಿ ಪ್ರತ್ಯಾನುಕೂಲವಾಗಿರುತ್ತದೆ. ಇಂಥ ಸಂದರ್ಭದಲ್ಲಿ ವಿವಾಹವು ಸುಖಮಯವಾಗಿರಬೇಕಾದರೆ ಹುಡುಗನ ನಕ್ಷತ್ರವು ಹುಡುಗಿಯ ನಕ್ಷತ್ರಕ್ಕೆ ಮುಂಚಿನದಾಗಿರಬೇಕು ಎನ್ನುತ್ತಾನೆ ಗಾರ್ಗ. ಅಂದರೆ ಪುಂಪೂರ್ವ ನಕ್ಷತ್ರ ಪ್ರಶಸ್ತ. ಇದಕ್ಕೆ ಪ್ರತಿಯಾಗಿ ಸ್ತ್ರೀಪೂರ್ವ (ಹೆಡತಲೆ) ನಕ್ಷತ್ರವಾದರೆ ಅಂದರೆ ಹುಡುಗಿಯ ನಕ್ಷತ್ರವಾದ ಬಳಿಕ ಹುಡುಗನ ನಕ್ಷತ್ರವೆಂದರೆ ಆ ಸಂಬಂಧವನ್ನು ತ್ಯಜಿಸಬೇಕು. ಈ ಅಭಿಮತವನ್ನು ಬೃಹಸ್ಪತಿ ಭೃಗು ಮುಂತಾದ ಋಷಿಗಳು ಒಪ್ಪುತ್ತಾರೆ. ವಾಸ್ತವವಾಗಿ ಮುಹೂರ್ತದ ತತ್ವದಲ್ಲಿ ಸಮಾನ ಜನ್ಮ ರಾಶಿಗಳಿರುವಾಗ ಪುಂಪೂರ್ವ ನಕ್ಷತ್ರವಾದರೆ ಬೇರೆ ಯಾವ ಕೂಟಗಳ ಸಾಮ್ಯವನ್ನೂ ನೋಡಬೇಕಾಗಿಯೇ ಇರುವುದಿಲ್ಲ ಎನ್ನುವಷ್ಟು ಮಟ್ಟಿಗೆ ಹೋಗಿದೆ.

*ಒಂದೇ ಜನ್ಮ ನಕ್ಷತ್ರ* : ಇದು ಸಮಾನ ಜನ್ಮರಾಶಿಗೆ ಸಂಬಂಧಪಟ್ಟ ತತ್ವದ ವಿಸ್ತರಣ ವಧೂವರರ ಜನ್ಮ ನಕ್ಷತ್ರಗಳು ಒಂದೇ ಆಗಿದ್ದರೂ ಮುಂದೆ ಹೇಳುವ ನಕ್ಷತ್ರಗಳಿಗೆ ಅವು ಸಮ್ಮತ: ರೋಹಿಣಿ, ಆರ್ದ್ರಾ, ಮಖ, ಹಸ್ತ, ವಿಶಾಖ, ಶ್ರವಣ, ಉತ್ತರಾಭಾದ್ರ ಮತ್ತು ರೇವತಿ. ಸಮಾನ ಜನ್ಮ ನಕ್ಷತ್ರಗಳು ಅಶ್ವಿನಿ, ಕೃತ್ತಿಕ, ಮೃಗಶಿರ, ಪುನರ್ವಸು, ಪುಷ್ಯ, ಪುಬ್ಬ, ಉತ್ತರ, ಚಿತ್ರ, ಅನೂರಾಧಾ, ಪೂರ್ವಾಷಾಢ, ಉತ್ತರಾಷಾಢ ಆಗಿದ್ದರೆ ಆಗ್ಗೆ ಸಾಮಾನ್ಯ. ಭರಣಿ, ಆಶ್ಲೇಷ, ಸ್ವಾತಿ, ಜ್ಯೇಷ್ಠ, ಮೂಲ, ಧನಿಷ್ಠ, ಶತಭಿಷ, ಪೂರ್ವಾಭಾದ್ರ ಸಮಾನ ನಕ್ಷತ್ರಗಳು ಆಗಿದ್ದರೆ, ಆಗ ಮಾನ್ಯವಲ್ಲ.

ಜನ್ಮ ನಕ್ಷತ್ರಗಳು ಒಂದೇ ಆಗಿದ್ದರೂ ಅವುಗಳ ಪಾದಗಳು ಭೇದವಾಗಿದ್ದರೆ ದೋಷ ಪರಿಹಾರವಾಗುತ್ತದೆ. ಎಂದು ಕೆಲವು ಶಾಸ್ತ್ರಕಾರರು ಅಭಿಪ್ರಾಯಪಡುತ್ತಾರೆ. ಜನ್ಮ ನಕ್ಷತ್ರ ಒಂದೇ ಆಗಿದ್ದು, ಎರಡು ರಾಶಿಗಳಿಗೆ ಸೇರಿದ್ದರೆ (ಉದಾಹರಣೆಗೆ ಕೃತ್ತಿಕ), ಹುಡುಗಿಯ ನಕ್ಷತ್ರ ಪಾದವು ಹಿಂದಿನ ರಾಶಿಗೆ ಸೇರಿರತಕ್ಕುದಾಗಿರಬೇಕು. ಉದಾಹರಣೆಗೆ ಕೃತ್ತಿಕ, ಸಮಾನ ನಕ್ಷತ್ರವೆನ್ನಿ. ಆಗ ಹುಡುಗಿಯ ಜನ್ಮರಾಶಿಯು ಮೇಷವಾಗಿದ್ದರೆ, ಹುಡುಗನದು ವೃಷಭವಾಗಿರಬೇಕು. ಆದರೆ ಸಮಾನ ನಕ್ಷತ್ರವು

ಎರಡು ರಾಶಿಗಳಿಗೆ ಸಮನಾಗಿ ಹಂಚಿಕೆ (ಮೃಗಶಿರ, ಚಿತ್ತ ಇತ್ಯಾದಿ)ಯಾಗಿದ್ದರೆ ಮೊದಲೆರಡು ನಕ್ಷತ್ರಪಾದಗಳು ಹುಡುಗನವಾಗಿರಬೇಕು.

ವಧೂವರರದು ಸಮಾನ ಜನ್ಮರಾಶಿ, ಸಮಾನ ಜನ್ಮ ನಕ್ಷತ್ರ, ಸಮಾನ ಪಾದ ಆಗಿರಕೂಡದು. ಹಾಗಿದ್ದರೂ ಶತಭಿಷ, ಹಸ್ತ, ಸ್ವಾತಿ, ಅಶ್ವಿನಿ, ಕೃತ್ತಿಕೆ, ಪೂರ್ವಾಷಾಢ, ಮೃಗಶಿರ, ಮಖಗಳ ರಾಶಿ ನಕ್ಷತ್ರ ಪಾದಗಳು ಮೂರೂ ಒಂದೇ ಆದಾಗ, ಇಬ್ಬರು ಪ್ರಥಮ ಪಾದದಲ್ಲಿ ಹುಟ್ಟಿದವರಾದರೆ ಬಾಧಕವಿಲ್ಲ.

## ದುಷ್ಟ ನಕ್ಷತ್ರಗಳು

ಕೆಲವು ನಕ್ಷತ್ರಗಳಲ್ಲಿ ಹುಟ್ಟಿದ ಹುಡುಗಿಯರು ಕೆಲವು ಸಂಬಂಧಿಗಳ ಮರಣಕ್ಕೆ ಕಾರಣರಾಗುತ್ತಾರೆಂಬ ಒಂದು ನಂಬಿಕೆ ಜನರಲ್ಲಿ ನೆಲೆಸಿದೆ. ಉದಾಹರಣೆಗೆ ವಿಶಾಖದಲ್ಲಿ ಹುಟ್ಟಿದ ಹುಡುಗಿಯು ತನ್ನ ಗಂಡನ ತಮ್ಮನನ್ನು ವಿನಾಶ ಮಾಡುತ್ತಾಳೆ ಎನ್ನಲಾಗಿದೆ. ಆದಕಾರಣ ಅಂಥ ಹುಡುಗಿಗೆ ತಮ್ಮನಿಲ್ಲದ ವರನನ್ನು ಹುಡುಕುತ್ತಾರೆ. ಜಾತಕದಲ್ಲಿ ಇತರೆ ಸಲ್ಲಕ್ಷಣಗಳಿದ್ದರೂ ವಿಶಾಖಾ ನಕ್ಷತ್ರ ಜೊತೆ ಎಂಬ ಕಾರಣಕ್ಕಾಗಿ ಆ ಸಂಬಂಧವನ್ನು ತಳ್ಳಿಹಾಕುತ್ತಾರೆ. ಇಂಥ ಪ್ರಸಂಗಗಳಿಗೆ ಅನ್ವಯವಾಗುವ ಜ್ಯೋತಿಷಿಕ ತತ್ವಗಳಾವುವೆಂಬುದರ ಪರಿಜ್ಞಾನವಿಲ್ಲದೆ ಇರುವುದು ಇದಕ್ಕೆ ಕಾರಣ. ಇಡೀ ನಕ್ಷತ್ರವೇ ದೋಷಪೂರ್ಣವಲ್ಲ. ಕೆಲವು ಪಾದಗಳು ಮಾತ್ರ ತ್ಯಾಜ್ಯ. ವಿಶಾಖಾ ನಕ್ಷತ್ರವನ್ನೇ ತೆಗೆದುಕೊಳ್ಳಿ. ಇದರ ಕಡೆಯ ಪಾದ ಕೆಟ್ಟದು, ಮೊದಲ ಮೂರು ಪಾದಗಳಲ್ಲ ಆದುದರಿಂದ ವಿಶಾಖ ನಕ್ಷತ್ರದ ಮೊದಲ ಮೂರು ಪಾದಗಳಲ್ಲಿ ಹುಟ್ಟಿದ ಹುಡುಗಿಯು ಗಂಡನ ತಮ್ಮನಿಗೆ ದೌರ್ಭಾಗ್ಯವುಂಟುಮಾಡುತ್ತಾಳೆಂದು ಭಾವಿಸಕೂಡದು. ಇದೇ ರೀತಿಯಲ್ಲಿ ಮೂಲ ಮೊದಲ ಪಾದದಲ್ಲಿ ಹುಟ್ಟಿದ ಹುಡುಗಿಯೂ ಹುಡುಗನೂ ಮಾವನ ಸಾವಿಗೆ ಕಾರಣರಾಗುತ್ತಾರೆಂದು ತ್ಯಾಜ್ಯ. ಮೂಲದ ಕಡೆ ಮೂರು ಪಾದಗಳು ಶುಭಕರ. ಜ್ಯೇಷ್ಠ ನಕ್ಷತ್ರದ ಹುಡುಗಿಯು ಗಂಡನ ಅಣ್ಣನಿಗೆ ಹಾನಿ ತರುತ್ತಾಳೆಂದು ಹೇಳಿದೆ. ಎಲ್ಲ ಶಾಸ್ತ್ರಕಾರರೂ ಕೂಡ ಮೂಲ ಜ್ಯೇಷ್ಠ, ವಿಶಾಖ ನಕ್ಷತ್ರಗಳ ಕೆಲವು ಪಾದಗಳು ವಿನಾಶಕಾರಿ ಎಂದು ಒಪ್ಪಿಕೊಂಡಿದ್ದಾರೆ. ಅವು ಯಾವುವೆಂದರೆ ಮೂಲ ಮೊದಲ ಪಾದ, ಗಂಡನ ತಂದೆಗೆ ವಿಪತ್ಕಾರಿ. ಆಶ್ಲೇಷ ಮೊದಲ ಪಾದವು ಗಂಡನ ತಾಯಿಗೆ ಹಾನಿಕರ. ಜ್ಯೇಷ್ಠ ಮೊದಲ ಪಾದವು ಗಂಡನ ಅಣ್ಣನಿಗೆ ಅಪಾಯಕಾರಿ. ವಿಶಾಖ ಕಡೆಯ ಪಾದವು ಗಂಡನ ತಮ್ಮನಿಗೆ ವಿಪತ್ಕಾರಕ. *

* ಮೂಲರೌಕ್ಷಶುರಂ ಹಂತಿ ವ್ಯಾಶಾರೌಚಭಿವಂತನಂ
ಜ್ಯೇಷ್ಠಾರೌತ್ಯೇಷ್ಠಜಹಂತಿ ವಿಶಾಖಾಂತೇ ಚ ದೇವರಂ.

## ಕುಜದೋಷ ಎಂಬುದು

ಮದುವೆಯ ಸಂಬಂಧವನ್ನು ನಿರ್ಧರಿಸುವಾಗ ಶುಕ್ರ ಕುಜರ ಪರಿಸ್ಥಿತಿಯು ತುಂಬ ಪ್ರಾಮುಖ್ಯವುಳ್ಳದ್ದು. ಕುಜನು ಅಗ್ನಿತತ್ತ್ವದವನಿದ್ದು ವಿವಾಹ ಕಾರಕನೂ ಆಗಿದ್ದಾನೆ. ಸ್ತ್ರೀ ಪುರುಷರ ಜಾತಕದಲ್ಲಿ ಅವನು ಕೆಟ್ಟ ಸ್ಥಾನದಲ್ಲಿದ್ದರೆ ಅಥವಾ ಕೆಟ್ಟ ಸಹವಾಸದಲ್ಲಿದ್ದರೆ ಆಗ ಯೋಮಾಗ್ನಿಯು ನಂದಿಹೋಗುತ್ತದೆ ಎಂದು ಸ್ಪಷ್ಟಪಡುತ್ತದೆ. ಅಂಥ ಪ್ರತಿಕೂಲಸ್ಥನಾಗಿ ಕುಜನಿದ್ದರೆ, ಅದಕ್ಕೆ ಕುಜದೋಷವೆಂದು ಹೆಸರು.

ವಧೂವರರ ಮದುವೆ ಹೊಂದಾಣಿಕೆಯನ್ನು ನಿಷ್ಕರ್ಷಿಸುವುದಕ್ಕೆ ಕುಜ ದೋಷಕ್ಕಿಂತ ಮುಖ್ಯವಾಗಿ ಪರಿಗಣಿಸಬೇಕಾದ ಹಲವು ಇತರ ಪ್ರಸಂಗಗಳಿವೆ ಎಂಬುದನ್ನು ಗಮನಿಸತಕ್ಕದ್ದು. ಕುಜನು ಕೆಟ್ಟ ಸ್ಥಾನದಲ್ಲಿರುವುದರಿಂದ ಉಂಟಾಗುವ ದುಷ್ಪರಿಣಾಮಗಳು ಆ ಪೈಕಿ ಒಂದು ಮಾತ್ರ.

ದಕ್ಷಿಣ ಭಾರತದಲ್ಲಿ, ವಿಶೇಷತಃ ತಮಿಳು ಸೀಮೆಯಲ್ಲಿ ಕುಜದೋಷವನ್ನು ಅತಿಯಾಗಿ ಎಣಿಸುತ್ತಿರುವುದು ದುರದೃಷ್ಟಕರ. ಏಕೆಂದರೆ ಈ ಭೀತಿಯಿಂದ ಹಲವು ಕುಟುಂಬಗಳು ಹಂಬಲಿಸುವಂತ ಯೋಗ್ಯವಾದ ಸಂಬಂಧಗಳು ತಪ್ಪಿಹೋಗುತ್ತವೆ. ನಮ್ಮ ನಮ್ಮಾನುಭವದಲ್ಲಿ ಕೇರಳ ಶಾಸ್ತ್ರ ಎಂಬ ಗ್ರಂಥವೊಂದರಲ್ಲೇ ಈ ದೋಷದ ಪ್ರಸ್ತಾಪವೆತ್ತಿರುವುದು. ಸಂಬಂಧಪಟ್ಟ ಶ್ಲೋಕ ಹೀಗಿದೆ.

*ಧನೇವ್ಯಯೇಚ ಪಾತಾಳೆ ಜಾಮಿತ್ರೇ ಚಾಷ್ಟ ಮೇ ಕುಜಃ*

*ಸ್ತ್ರೀಣಾಂ ಭರ್ತೃ ವಿನಾಶಾಯ ಭರ್ತೃಣಾಂ ಸ್ತ್ರೀ ವಿನಾಶಂ*

ಎಂದು ಇದರ ಅರ್ಥ ಹೀಗೆ, ಕುಜನು ಎರಡರಲ್ಲೋ, ಹನ್ನೆರಡರಲ್ಲೋ, ನಾಲ್ಕರಲ್ಲೋ, ಏಳರಲ್ಲೋ, ಎಂಟರಲ್ಲೋ ಇದ್ದರೆ ಹೆಂಡತಿಗೆ ಗಂಡನ ಸಾವುಂಟಾಗುತ್ತದೆ. ಗಂಡನಿಗೆ ಹೆಂಡತಿಯ ಸಾವುಂಟಾಗುತ್ತದೆ.

ಲಗ್ನ ದೇಹಕ್ಕೆ, ಚಂದ್ರ ಮನಸ್ಸಿಗೆ ಮತ್ತು ಶುಕ್ರ ಲಿಂಗ ಸಂಬಂಧಗಳಿಗೆ ಸಂಕೇತ. ಆದ ಕಾರಣ ಈ ಮೂರರ ಅಪೇಕ್ಷೆಯೂ ಮನೆಗಳನ್ನು ಎಣಿಸಬೇಕು. ಲಗ್ನದಲ್ಲಿ ದೋಷವಿದ್ದರೆ, ಅದು ದುರ್ಬಲವಾಗಿರುತ್ತದೆ. ಚಂದ್ರನಿಂದ ದೋಷವಿದ್ದರೆ ಅದು ಕೊಂಚ ಪ್ರಬಲಕರ ಶುಕ್ರನಿಂದಿದ್ದರೆ, ಅದು ಹೆಚ್ಚು ಪ್ರಬಲ.

ಎರಡನೆ ಮನೆಯು ಕುಟುಂಬ ಸ್ಥಾನ. ಹನ್ನೆರಡನೆ ಮನೆಯ ಶಯನ ಸೌಖ್ಯ ಸಂಕೇತಿಸುತ್ತದೆ. ನಾಲ್ಕನೆ ಮನೆ ಸುಖ ಸ್ಥಾನ. ಏಳನೆಯದು ಗಂಡನನ್ನೂ ಎಂಟನೆಯದು ಗಂಡನ ಅಥವಾ ಹೆಂಡತಿಯ ಆಯುರ್ದಾಯವನ್ನು ಸೂಚಿಸುತ್ತದೆ.

ಆದಕಾರಣದಿಂದ ಈ ಮನೆಗಳಲ್ಲಿ ಕುಜನಿದ್ದರೆ ದೋಷವುಂಟುಮಾಡುತ್ತಾನೆಂದು ಭಾವನೆ. ವಧೂವರರಲ್ಲಿ ಸಮಾನವಾದ ಕುಜದೋಷವಿದ್ದರೆ ಆಗ ಒಂದನ್ನೊಂದು ತೊಡೆದುಹಾಕುತ್ತದೆ. ವಿವಾಹ ಸಾಮರಸ್ಯವನ್ನು ಖಚಿತಪಡಿಸಿಕೊಡುವ ಹಲವಾರು ಯೋಗಗಳಿವೆ. ಕುಜದೋಷವೊಂದಕ್ಕೇ ಹೆಚ್ಚು ಮಹತ್ವವನ್ನು ಕೊಡಬೇಕಾಗಿಲ್ಲ.

ಕುಜದೋಷವನ್ನು ಕಡೆಗಾಣಬಾರದು, ಅದನ್ನು ಗಣನೆಗೆ ತೆಗೆದುಕೊಳ್ಳಬೇಕು ಎಂದು ಇಟ್ಟುಕೊಂಡರೂ ಅದಕ್ಕೆ ಪರಿಹಾರಗಳಿವೆ. ಜ್ಯೋತಿಷಿಗಳನೇಕರಿಗೆ ಇದು ತಿಳಿದಿರಲಿಕ್ಕಿಲ್ಲ. ಕುಜದೋಷಕ್ಕಿರುವ ವಿನಾಯಿತಿಗಳು ಯಾವುವೆಂದರೆ: ಕುಜನು ಎರಡರಲ್ಲಿದ್ದರೆ ದೋಷವುಂಟಾದರೂ ಇದು ಮಿಥುನ ಕನ್ಯೆಗಳಿಗೆ ಅನ್ವಯವಾಗುವುದಿಲ್ಲ, ಹನ್ನೆರಡರಲ್ಲಿದ್ದರೆ ದೋಷವುಂಟಾದರೂ ಇದು ವೃಷಭ, ತುಲಾಗಳಿಗೆ ಅನ್ವಯರಾಗುವುದಿಲ್ಲ, ನಾಲ್ಕರಲ್ಲಿರುವುದು ದೋಷವಾದರೂ ಮೇಷ, ವೃಶ್ಚಿಕಗಳಿಗೆ ಇದು ಅನ್ವಯವಲ್ಲ; ಏಳರಲ್ಲಿದ್ದರೆ ದೋಷವಾದರೂ ಇದು ಮಕರ, ಕರ್ಕಾಟಕಗಳಿಗೆ ಅನ್ವಯವಲ್ಲ; ಎಂಟರಲ್ಲಿದ್ದರೆ ದೋಷವಾದರೂ ಇದು ಧನುಸ್, ಮೀನಗಳಿಗೆ ಅನ್ವಯವಾಗುವುದಿಲ್ಲ. ಅಲ್ಲದೆ ಕುಂಭ, ಸಿಂಹಗಳಲ್ಲಿ ಕುಜನಿರುವುದು ದೋಷವೇ ಅಲ್ಲ. ಕುಜದೋಷವು ಇದ್ದರೂ ಕೂಡ ಕುಜ ಗುರುವಿನೊಡನೆ ಅಥವಾ ಚಂದ್ರನೊಡನೆ ಇದ್ದರೆ ದೋಷ ಪರಿಹಾರವಾಗುತ್ತದೆ. ಅಥವಾ ಲಗ್ನದಲ್ಲಿ ಗುರು ಅಥವಾ ಶುಕ್ರನಿದ್ದರೂ ದೋಷ ಪರಿಹಾರವಾಗುತ್ತದೆ.

ಈ ರೀತಿಯಲ್ಲಿ ಕುಜದೋಷಕ್ಕೆ ಈಗ ನಾವು ಕೊಡುತ್ತಿರುವಷ್ಟು ಪ್ರಾಮುಖ್ಯ ಸಲ್ಲುವುದಿಲ್ಲ. ವಿವಾಹ ಸಾಮರಸ್ಯವನ್ನು ಪರಿಗಣಿಸುವಾಗ ಮುಖ್ಯವಾಗಿ ಪರಿಶೀಲಿಸಬೇಕಾದ ಇತರೆ ಕೆಲವು ಪ್ರಸಂಗಗಳಿವೆ.

ನಾವೀಗ ವಿವಾಹ ಸಾಮರಸ್ಯದ ಪ್ರಶ್ನೆಗೆ ಸಂಬಂಧಿಸಿದಂತೆ ಸಾಕಷ್ಟು ವ್ಯಾಪಕವಾಗಿ ವಿಚಾರ ಮಾಡಿದ್ದು ಆಗಿದೆ. ವಾದಗ್ರಸ್ತವಾದ ಪ್ರಮೇಯಗಳನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸಿದ್ದೇವೆ. ಏಕೆಂದರೆ ಈ ಪುಸ್ತಕ ಉದ್ದಿಷ್ಟವಾಗಿರುವುದು ಸಾಮಾನ್ಯ ಜನಕ್ಕಾಗಿ. ಜ್ಯೋತಿಷಿಕ ತತ್ವ ಸಿದ್ಧಾಂತ ವಿಧಾನಗಳನ್ನು ಸಾಮಾನ್ಯ ವಾಚಕನು ತನ್ನ ಉಪಯೋಗಕ್ಕೆ ಬಳಸಿಕೊಳ್ಳುವಂತಾಗಲಿ ಎಂಬುದಷ್ಟೇ ನಮ್ಮ ಉದ್ದೇಶವಾಗಿದೆ.

## ಮದುವೆಗೆ ಮುಹೂರ್ತ ಮಾಡುವುದು

ಸಾಧಾರಣವಾಗಿ ಎಲ್ಲ ಭಾರತೀಯ ಪಂಚಾಂಗಗಳೂ ಮದುವೆ ನೆರವೇರಿಸುವುದಕ್ಕೆ ಸೂಕ್ತವಾದ ದಿವಸ ಕಾಲ ಮುಂತಾಗಿ ಮುಹೂರ್ತಗಳನ್ನು ಕೊಟ್ಟಿರುತ್ತವೆ. ಅದನ್ನು ವಾಚಕರು ನೆಚ್ಚಿಕೊಳ್ಳುವಂತಿರುವುದಿಲ್ಲ. ಏಕೆಂದರೆ ಕೆಲವು ಮುಖ್ಯವಾದ

ದೋಷಗಳಿಂದ ಅವು ಮುಕ್ತವಾಗಿರುವುದಿಲ್ಲ. ಅಷ್ಟೇ ಅಲ್ಲದೆ ಚುನಾಯಿಸಿ ಕೊಟ್ಟಿರುವ ದಿವಸಗಳು ಸ್ಥಳೀಯ ವಾಡಿಕೆಗಳಿಗೆ ಅನುಗುಣವಾಗಿರುತ್ತವೆ. ಉದಾಹರಣೆಗೆ, ತಮಿಳರು, ಆಷಾಡಮಾಸದಲ್ಲಿ (ರವಿಯು ಇನ್ನೂ ಕರ್ಕಾಟಕವನ್ನು ಪ್ರವೇಶಿಸದೆ ಇರಬೇಕು) ಮದುವೆ ಮಾಡಲು ಅನುಮತಿಸುವುದಿಲ್ಲ. ಆದರೆ ಆಂಧ್ರ ಕರ್ನಾಟಕದಲ್ಲಿರುವವರು ಇದಕ್ಕೆ ಪ್ರಬಲವಾದ ಆಕ್ಷೇಪವೆತ್ತುತ್ತಾರೆ. ಇದು ಬಿಟ್ಟರೆ ವಿವಾಹ ಮುಹೂರ್ತವನ್ನು ಕುರಿತು ಉಳಿದ ಕಾಲ ವಾರ ನಕ್ಷತ್ರ ಗ್ರಹ ಪರಿಸ್ಥಿತಿಗಳ ಬಗ್ಗೆ ಭಾರತದಲ್ಲೆಲ್ಲ ಸಾರ್ವತ್ರಿಕವಾದ ಏಕಾಭಿಮತವಿದೆ.

ನಾನು ಪಂಡಿತಮಾನ್ಯವಾದ,ಅನುಭವಸಿದ್ಧವಾದ ಮತ್ತು ಪ್ರಾಚೀನ ಆಚಾರ್ಯರಿಗೆ ಸಮ್ಮತವಾದ ಅತ್ಯಂತ ಪ್ರಮಾಣಭೂತವಾದ ವಿಧಾನಗಳನ್ನು ಇಲ್ಲಿ ಕೊಟ್ಟಿದ್ದೇನೆ.

ಮಾಘ, ಫಾಲ್ಗುಣ, ವೈಶಾಖ, ಮತ್ತು ಜ್ಯೇಷ್ಠ ಚಾಂದ್ರಮಾನದ ಈ ಮಾಸಗಳು ಒಳ್ಳೆಯವು. ಕಾರ್ತಿಕ, ಮಾರ್ಗಶಿರ ಸಾಧಾರಣ. ಉಳಿದವು ಪ್ರಶಸ್ತವಾದುವಲ್ಲ. ಕೆಲವು ಋಷಿಗಳ ಅಭಿಪ್ರಾಯದ ಪ್ರಕಾರ, ಪುಷ್ಯಮಾಸದಲ್ಲಿ ಸೂರ್ಯನು ಮಕರ ರಾಶಿಯಲ್ಲಿರುವಾಗ ಮತ್ತು ಚೈತ್ರಮಾಸದಲ್ಲಿ ಸೂರ್ಯನು ಮೇಷದಲ್ಲಿರುವಾಗ ಮದುವೆಗಳನ್ನು ನೆರವೇರಿಸಬಹುದು.

ಮುಂದೆ ಕೊಟ್ಟಿರುವ ತಿಥಿಗಳನ್ನು ತಿರಸ್ಕರಿಸತಕ್ಕುದು. ಕೃಷ್ಣಪಕ್ಷದ ಏಕಾದಶಿಯಿಂದ ಅಮಾವಾಸ್ಯೆವರೆಗೆ ರಿಕ್ತ ತಿಥಿಗಳಾದ ಅಷ್ಟಮಿ, ದ್ವಾದಶಿ, ಷಷ್ಠಿ, ತ್ಯಾಜ್ಯ. ಉತ್ಕೃಷ್ಟವಾದ ತಿಥಿಗಳೆಂದರೆ ಶುಕ್ಲಪಕ್ಷದ ಬಿದಿಗೆ, ತದಿಗೆ, ಪಂಚಮಿ, ಸಪ್ತಮಿ, ದಶಮಿ, ಏಕಾದಶಿ, ತ್ರಯೋದಶಿ.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಪ್ರಶಸ್ತ. ಭಾನುವಾರ, ಶನಿವಾರ ಮಧ್ಯಸ್ಥ. ಮಂಗಳವಾರ ಕೂಡಲೇಕೂಡದು.

ಉತ್ಕೃಷ್ಟವಾದ ನಕ್ಷತ್ರಗಳು ಯಾವುವೆಂದರೆ : ರೋಹಿಣಿ, ಮೃಗಶಿರ, ಮಖ, ಉತ್ತರ, ಹಸ್ತ, ಸ್ವಾತಿ, ಅನೂರಾಧ, ಮೂಲ, ಉತ್ತರಾಷಾಢ, ಉತ್ತರಾಭಾದ್ರ, ರೇವತಿ. ಈ ಪೈಕಿ ಮಖ ನಕ್ಷತ್ರ ಪ್ರಥಮ ಪಾದ, ಮೂಲ ಕಡೆಯ ಪಾದ ಶುಭವಲ್ಲ, ಅವನ್ನು ತ್ಯಜಿಸಬೇಕು. ಇಲ್ಲಿ ಹೇಳದೆ ಬಿಟ್ಟಿರುವ ನಕ್ಷತ್ರಗಳು ತಕ್ಕವಲ್ಲ, ಅವನ್ನು ಬಿಡಬೇಕು.

ಮುಂದೆ ಕೊಟ್ಟಿರುವ ಯೋಗಗಳು ತ್ಯಾಜ್ಯವಾದವು. ವ್ಯತೀಪಾತ, ಧ್ರುವ, ಮೃತ್ಯು ಗಂಡ, ವಜ್ರ, ಶೂಲ, ನಿಷ್ಕಂಭ, ಅರೆಗಂಡ, ವ್ಯಾಘಾತ, ತರಿಫ್.

ವಿಷ್ಕಿಕರಣ ಯೋಗವನ್ನು ತಪ್ಪದೆ ತ್ಯಜಿಸಬೇಕು.

ರಾಶಿಗಳ ಪೈಕಿ ಮಿಥುನ, ಕನ್ಯಾ, ತುಲಾ ಉತ್ಕೃಷ್ಟವಾದವು. ವೃಷಭ, ಕಟಕ, ಸಿಂಹ, ಧನುಸ್, ಕುಂಭ, ಮಧ್ಯಸ್ಥ. ಉಳಿದವು ಅಪ್ರಶಸ್ತ.

ಮದುವೆಗೆ ಮುಹೂರ್ತವನ್ನು ಕಟ್ಟುವಾಗ ಮೇಲೆ ಹೇಳಿರುವಂಥ 21 ದೋಷಗಳನ್ನು ಸಾಧ್ಯವಾದ ಮಟ್ಟಿಗೂ ನಿವಾರಿಸಿಕೊಳ್ಳತಕ್ಕದ್ದು. ಇಲ್ಲಿ ನಾವು ವಿವೇಚಿಸಬೇಕಾದ ಮುಖ್ಯ ಅಂಶಗಳೆಂದರೆ (1) ಏಳನೆ ಮನೆಯಲ್ಲಿ ಯಾವ ಗ್ರಹವೂ ಇರಬಾರದು. (2) ಕುಜನು ಎಂಟನೆ ಮನೆಯಲ್ಲಿರಬಾರದು. (3) ಶುಕ್ರನು ಆರನೆ ಮನೆಯಲ್ಲಿರಬಾರದು. (4) ಲಗ್ನದ ಎರಡು ಕಡೆಯೂ ಅಶುಭರಾದ ಗ್ರಹಗಳು ಇರಬಾರದು ಮತ್ತು (5) ಮುಹೂರ್ತ ಲಗ್ನದಲ್ಲಿ ಚಂದ್ರನು ಬೇರೆ ಯಾವ ಗ್ರಹದ ಸಂಗಡವೂ ಇರಬಾರದು.

ಮೇಲೆ ಹೇಳಿರುವುದಲ್ಲದೆ, ಮಾಮೂಲಾಗಿ ತಾರಾಬಲ ಪಂಚಕ ಮುಂತಾದವನ್ನು ನೋಡಿಕೊಳ್ಳಬೇಕು. ಪ್ರತಿಕೂಲ ಪ್ರಭಾವಗಳನ್ನು ನಿಷ್ಕ್ರಿಯೆಗೊಳಿಸುವುದೆಂದು ನಂಬಲಾದ ಇತರ ಕೆಲವು ವಿಶೇಷ ಯೋಗಗಳನ್ನು ಬೇರೆ ಕಡೆ ಕೊಟ್ಟಿದೆ. ಸಾಧ್ಯವಾದಷ್ಟು ಮಟ್ಟಿಗೆ ಅಂಥ ಯೋಗಗಳನ್ನು ಒಳ್ಳೆ ಮುಹೂರ್ತವಿಡಲು ಉಪಯೋಗಿಸಿಕೊಳ್ಳತಕ್ಕದು. ಗುರು, ಬುಧ ಅಥವಾ ಶುಕ್ರ ಲಗ್ನದಲ್ಲಿ, ಅಶುಭರು ಮೂರರಲ್ಲಿ ಅಥವಾ ಹನ್ನೊಂದರಲ್ಲಿ ಇದ್ದರೆ ಲಗ್ನವನ್ನು ಇದು ಬಲಪಡಿಸುವಂಥ ಮಹತ್ತರವಾದ ಪ್ರಭಾವವಾಗುತ್ತದೆ. ವಿವಾಹ ಮುಹೂರ್ತದ ಲಗ್ನವನ್ನು ಭದ್ರಪಡಿಸತಕ್ಕವೆಂದು ಹೇಳಲಾಗಿರುವ ಕೆಲವು ಇತರ ಯೋಗಗಳು ಹೀಗಿವೆ:-

(1) ಗುರು ಲಗ್ನದಲ್ಲಿ, ಶುಕ್ರ ಎಂಟರಲ್ಲಿ ಮತ್ತು ರವಿ ಹನ್ನೊಂದರಲ್ಲಿ-ಇದು ಮಹೇಂದ್ರಯೋಗ.

(2) ಶುಕ್ರ ಲಗ್ನದಲ್ಲಿ, ಗುರು ಹತ್ತರಲ್ಲಿ ಮತ್ತು ರವಿ ಬುಧರು ಹನ್ನೊಂದರಲ್ಲಿ-ಇದು ವಿಷ್ಣುಪ್ರಿಯ ಯೋಗ.

(3) ಶುಕ್ರ ಎರಡರಲ್ಲಿ, ಗುರು ಹನ್ನೆರಡರಲ್ಲಿ, ರವಿ ಎಂಟರಲ್ಲಿ, ಶನಿ ಆರರಲ್ಲಿ-ಇದು ಶ್ರೀನಾಥ ಯೋಗ.

(4) ಶುಕ್ರ ಲಗ್ನದಲ್ಲಿ, ಗುರು ನಾಲ್ಕರಲ್ಲಿ, ಬುಧ ಎರಡರಲ್ಲಿ, ಶನಿ ಹನ್ನೊಂದರಲ್ಲಿ-ಇದು ಸಮುದ್ರ ಯೋಗ.

(5) ಬುಧ, ಗುರು, ಶುಕ್ರ ಲಗ್ನದಲ್ಲಿ - ವಿಜಯ ಯೋಗ.

(6) ಶುಕ್ರ, ಗುರು ಲಗ್ನದಲ್ಲಿ ಪ್ರಬಲರಾಗಿರಬೇಕು - ಇದು ಜಯಯೋಗ.

(7) ಶನಿ ಮೂರರಲ್ಲಿ, ಗುರು ಆರರಲ್ಲಿ, ರವಿ ಹತ್ತರಲ್ಲಿ, ಕುಜ ಹನ್ನೊಂದರಲ್ಲಿ-ಪುಷ್ಯ ಯೋಗ.

(8) ಕುಜ ಮೂರರಲ್ಲಿ, ಶನಿ ಆರರಲ್ಲಿ, ಶುಕ್ರ ಒಂಭತ್ತರಲ್ಲಿ, ಗುರು ಹನ್ನೆರಡರಲ್ಲಿ – ಮಹರ್ಷಿ ಯೋಗ.

(9) ಶುಕ್ರ ಲಗ್ನದಲ್ಲಿ, ಗುರು ಹನ್ನೊಂದರಲ್ಲಿ – ಅರ್ಧಮ ಯೋಗ.

ಈ ರೀತಿಯಲ್ಲಿ ಓಂದುಗಳು, ಬದುಕಿನಲ್ಲಿ ಉಂಟಾಗುವ ಏರುಪೇರುಗಳನ್ನು ನಿಭಾಯಿಸಿಕೊಂಡು ತಮ್ಮ ವಿವಾಹ ಜೀವನವನ್ನು ನಡೆಸುವಂತೆ ಮಾಡಲು ದಂಪತಿಗಳ ವಿವಾಹ ಸಾಮರಸ್ಯವನ್ನು ಜ್ಯೋತಿಷಿಕವಾಗಿ ನಿರ್ಣಯಿಸುವ ವಿಧಾನಗಳನ್ನು ಅಳವಡಿಸಿಕೊಂಡಿರುವುದು ಸ್ಪಷ್ಟಪಡುತ್ತದೆ. ಜ್ಯೋತಿಷಿಕ ಸಲಹೆಗಳನ್ನು ತಕ್ಕಂತೆ ಅವಲಂಬಿಸಿದರೆ ಈಗಿರುವುದಕ್ಕಿಂತ ದುರಂತಗಳು ಕಡಿಮೆಯಾಗಿ ಉಂಟಾದಾವು. ದಾಂಪತ್ಯ ದೋಷಗಳು ಕಡಿಮೆಯಾದಾವು. ಆಧುನಿಕ ಲಿಂಗ ವಿಜ್ಞಾನಿಗಳೂ ಸಮಾಜ ಶಾಸ್ತ್ರಜ್ಞರೂ ಕೂಡ ತಮ್ಮ ಪೂರ್ವಾಗ್ರಹಗಳನ್ನು ತೊರೆದು ಜ್ಯೋತಿಷವನ್ನು ಟೀಕಿಸಿ ಖಂಡಿಸುವುದಕ್ಕೆ ಬದಲಾಗಿ, ವಿವಾಹಕ್ಕೆ ಅನ್ವಯವಾಗುವ ಜ್ಯೋತಿಷಿಕ ವಿಧಿವಿಧಾನಗಳಲ್ಲಿ ಅಡಗಿರುವ ತತ್ವಗಳನ್ನು ಕುರಿತು ಚಿಂತಿಸುವುದು ಒಳ್ಳೆಯದು.

ಅಧ್ಯಾಯ ಹತ್ತು

# ಸಾಧಾರಣ ವಿಷಯಗಳನ್ನು ಕುರಿತ ಮುಹೂರ್ತಗಳು.

ಈ ಅಧ್ಯಾಯದಲ್ಲಿ ವ್ಯಕ್ತಿಯ ಸ್ವಂತ ಜೀವನಕ್ಕೆ ಅನ್ವಯವಾಗುವಂಥ ಮುಹೂರ್ತಗಳನ್ನು ಕುರಿತು ಹೇಳುತ್ತೇವೆ. ಉದಾಹರಣೆಗೆ, ಒಬ್ಬಾತ ಷೇರುಗಳನ್ನು ಕೊಂಡು ಮಾರಬೇಕು ಇಲ್ಲವೆ ಹೊಸಬಟ್ಟೆ ಕೊಂಡು ಮಾರಬೇಕು ಇತ್ಯಾದಿ. ಇಂಥ ಎಲ್ಲ ದೈನಂದಿನ ಕಾರ್ಯಕಲಾಪಗಳಿಗೂ ಶುಭ ಮುಹೂರ್ತಗಳನ್ನು ಗೊತ್ತುಪಡಿಸಿಕೊಳ್ಳಬಹುದು.

**ಹೊಸ ಬಟ್ಟೆ ಧರಿಸುವುದು :**

ಅಶ್ವಿನಿ, ರೋಹಿಣಿ, ಪುನರ್ವಸು, ಪುಷ್ಯಮಿ, ಉತ್ತರ, ಹಸ್ತ, ಚಿತ್ರ, ಸ್ವಾತಿ, ವಿಶಾಖ, ಧನಿಷ್ಠ, ರೇವತಿ ಇವು ಉತ್ತಮ. ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಒಳ್ಳೆಯವು ಭಾನುವಾರ ಮಧ್ಯಸ್ಥ. ಮಂಗಳವಾರ, ಶನಿವಾರ ಅಶುಭ. ಚೌತಿ, ನವಮಿ, ಚತುರ್ದಶಿ, ಅಮಾವಾಸ್ಯೆಗಳು ಆಗಬಾರದು. ಚಂದ್ರ ಸಾಧ್ಯವಾದಷ್ಟು ಮಟ್ಟಿಗೂ ಸೂರ್ಯನ ಕಡೆ ಒಳ್ಳೆ ದೃಷ್ಟಿಯುಳ್ಳವನಾಗಿರಬೇಕು.

**ಪುಸ್ತಕ ಭಂಡಾರ ಸ್ಥಾಪನೆ :**

ಬುಧನು ಉಚ್ಚನಾಗಿರಬೇಕು ಇಲ್ಲವೆ ಲಗ್ನದಲ್ಲಿರಬೇಕು. ಗುರುವಾರ ಉತ್ಕೃಷ್ಟ. ಹನ್ನೊಂದರಲ್ಲಿ ಅಶುಭನಿದ್ದು ಲಗ್ನಕ್ಕೆ ಪುಷ್ಟಿ ಕೊಡಬೇಕು.

**ಜವಾನರ ನೇಮಕ :**

ಮಂಗಳವಾರ ಶನಿವಾರ ಆಗಬಾರದು. ಹನ್ನೊಂದರ ಅಧಿಪತಿಯು ಬಲಯುತನಾಗಿರಬೇಕು. ಹನ್ನೊಂದರಲ್ಲಿ ಶನಿಯು ಕುಜ ಅಥವಾ ರಾಹು ದೃಷ್ಟಿಗೆ ಒಳಗಾಗದೆ ಇರಬೇಕು.

ಆರರ ಅಧಿಪತಿ ಹನ್ನೊಂದರಲ್ಲಿರಬೇಕು. ಸಾಧ್ಯವಾದಷ್ಟು ಮಟ್ಟಿಗೂ ಸ್ಥಿರ ರಾಶಿಯನ್ನು ಆರಿಸಿ. ಬುಧನು ಪೀಡಿತನಾಗಿರಬಾರದು. ಹಾಗಿದ್ದರೆ ಮನೆಯಲ್ಲಿ ಕಳವು ಉಂಟಾಗುತ್ತವೆ.

*ಕ್ಷೌರ :* ನಮ್ಮ ಪ್ರಾಚೀನರೆಲ್ಲ ಹೆಡ್ಡರು ಮತ್ತು ಅವರು ಪ್ರಪಂಚ ವ್ಯವಹಾರಗಳ ನಾನಾ ಪ್ರಕಾರಗಳನ್ನು ಕುರಿತು ಮಾಡಿರುವ ವಿವೇಚನೆ ಸಮೀಕ್ಷೆಗಳಾವುವನ್ನೂ ಗಮನಕ್ಕೆ ತೆಗೆದುಕೊಳ್ಳಬೇಕಾಗಿಲ್ಲವೆಂದು ನಮ್ಮಲ್ಲಿ ಕೆಲವರು ಭ್ರಮಿಸಿದಂತೆ ಕಾಣುತ್ತದೆ. ಆಧುನಿಕ ವೈಜ್ಞಾನಿಕ ಆವಿಷ್ಕಾರಗಳು ಹಲವನ್ನು ಪ್ರಾಚೀನರು ಮನಗಂಡಿದ್ದರು. ಅವರು ಅಭಿವ್ಯಕ್ತಿ ಸಂಪನ್ನವೂ ಸಂಕ್ಷೇಪ ಸಮರ್ಥವೂ ಆಗಿದ್ದ ಭಾಷೆಯನ್ನು ಪಡೆದವರಾಗಿದ್ದು ತಮ್ಮ ವೈಜ್ಞಾನಿಕ ಆವಿಷ್ಕಾರಗಳನ್ನು ಸಂದೇಹಕ್ಕೆಡೆಕೊಡದಂಥ ಸಂಸ್ಕೃತ ಪದಗಳನ್ನು ಉಪಯೋಗಿಸಿ ನಿರೂಪಿಸಿದ್ದಾರೆ. ಬುದ್ಧಿಯ ಪೂರ್ವಾಗ್ರಹಗಳು ಮಹಾಮಹಿಮರಾದವರ ತೀರ್ಮಾನಗಳನ್ನೂ ವಕ್ರಗೊಳಿಸಬಲ್ಲವು ಮತ್ತು ವಿಜ್ಞಾನಿಗಳೆನಿಸಿಕೊಂಡವರು ಕೂಡ ಈ ಮಾಯಾವಿಯಾದ ಬಲೆಗೆ ಬೀಳುತ್ತಾರೆ.

ಪೌರ್ವಾತ್ಯ ದಾರ್ಶನಿಕರು ವಿಪರೀತಾರ್ಥಕ್ಕೆ ಹೋಗುವ ಕುತರ್ಕ ಮಾಡುವವರು ಎಂದು ಇವತ್ತಿನ ದಿನದ ಅಲ್ಪನಾದ ಪ್ರತಿಷ್ಠೆ ಕೋಶ ಹೇಳಿ ಪ್ರಾಚೀನರ ವೈಜ್ಞಾನಿಕ ಜ್ಞಾನವು ಸರ್ವಥಾ ಮಾನವೀಯವಲ್ಲ ಎನ್ನಬಹುದು. ನಮ್ಮ ಪ್ರಾಚೀನರು ಯಾವ ವಿಧಾನಗಳನ್ನು ಅವಲಂಬಿಸಿ ಜ್ಞಾನಾರ್ಜನೆ ಮಾಡಿದರೋ ಅವು ನಮಗೆ ಚನ್ನಾಗಿ ಗೋತ್ತಾಗಿಲ್ಲ. ಆದರೂ ಋಷಿಗಳು ಬಿಟ್ಟು ಹೋಗಿರುವ ಸಾಹಿತ್ಯಕ ಮತ್ತು ವೈಜ್ಞಾನಿಕ ಕೃತಿ ಶೇಷಗಳು ತಮ್ಮದೇ ಆದ ಮೌಲ್ಯವನ್ನು ಪಡೆದಿವೆ.

ಚಂದ್ರ ಮತ್ತು ಭೂಮಿಯ ಜೀವರಾಶಿ ಎಂಬ ಶೀರ್ಷಿಕೆಯಲ್ಲಿ ಶ್ರೀ ಎಂ.ವಿ. ರಾಮಕೃಷ್ಣನ್ ಅವರು ***ದಿ ಆಸ್ಟ್ರಲಾಜಿಕಲ್ ಮ್ಯಾಗಜೈನ್*** ಆಂಗ್ಲ ಮಾಸಿಕದಲ್ಲಿ (1943ರ ಎಪ್ರಿಲ್ ಸಂಚಿಕೆ) ಬರೆದಿರುವ ಲೇಖನವು ಚಂದ್ರನ ಚಲನವಲನಗಳಿಗೂ ಭೂಮಿಯ ಮೇಲಣ ಜೀವರಾಶಿಯ ಮೇಲೆ ಉಂಟಾಗುವ ಪರಿಣಾಮಗಳಿಗೂ ನಡುವೆ ಒಂದು ಕಾಲಾವಧಿಯ ಆವರ್ತವಿರುವುದನ್ನು ತೋರಿಸಿಕೊಟ್ಟಿದ್ದಾರೆ. ಆ ಲೇಖನದಿಂದ ಆಯ್ದು ಕೊಟ್ಟಿರುವ ಕೆಲವು ವಾಕ್ಯಗಳು ಅರ್ಥಗರ್ಭಿತವಾಗಿವೆ. ತಮ್ಮ ಕೂದಲನ್ನು ಹೊರುವಾಗಿಯೂ ಉದ್ದವಾಗಿಯೂ ಬೆಳಸಿಕೊಳ್ಳಲಪೇಕ್ಷಿಸುವವರು ಶುಕ್ಲಪಕ್ಷದಲ್ಲಿ ಕ್ಷೌರ ಮಾಡಿಸಿಕೊಳ್ಳಬೇಕು ಅಥವಾ ಕತ್ತರಿಸಿಕೊಳ್ಳಬೇಕು. ಶುಕ್ಲಪಕ್ಷದಲ್ಲಿ ಉಗುರನ್ನು ಕತ್ತರಿಸಿಕೊಂಡರೆ ಅವು ಬೆಳೆಯಲು ಅವಕಾಶವಾಗುತ್ತದೆ. ಈ ಮಾತನ್ನು ಮುಹೂರ್ತ ಗ್ರಂಥಗಳಲ್ಲಿ ಕ್ಷೌರ ಕರ್ಮಕ್ಕೆ ಸಂಬಂಧಿಸಿದಂತೆ ಕೊಟ್ಟಿರುವ ವಿಧಿಗಳೊಡನೆ ಹೋಲಿಸಿನೋಡಿ. ಕ್ಷೌರವನ್ನು ಇಂಥ ದಿವಸಗಳಲ್ಲಿ ಇಂಥ ಕಾಲಗಳಲ್ಲಿ ಮಾಡಿಸಿಕೊಳ್ಳಬೇಕೆಂದು ಜ್ಯೋತಿಷಿಗಳು ಹೇಳುವುದನ್ನು ಕೆಲವರು ಅಪಹಾಸ್ಯ ಮಾಡುತ್ತಾರೆ.

ವಿದ್ಯುತ್ ವಿಜ್ಞಾನವು ಪ್ರಾಚೀನರಿಗೆ ತಿಳಿದಿತ್ತೆಂದು ಕಾಣುತ್ತದೆ. ಈ ಮುಖ್ಯಾಂಶವನ್ನು ದಿವಂಗತ ಪ್ರೊ. ಬಿ. ಸೂರ್ಯನಾರಾಯಣರಾಯರು ಬೆಳಕಿಗೆ ತರುವುದಕ್ಕೆ ಕಾರಣರಾಗಿದ್ದರು. ಮನುಷ್ಯ ದೇಹವು ವಿದ್ಯುತ್ ಪ್ರವಾಹಗಳ ಒಂದು ಮೂಟೆ. ಈ ಪ್ರವಾಹವು ಹೊರಬರುವ ಕಾಲುವೆಗಳೇ ಕೂದಲು, ಉಗುರು. ಮನುಷ್ಯನಲ್ಲಿರುವ ಎಲ್ಲ ಒಳ್ಳೆಯ ಶಕ್ತಿಗಳನ್ನು ಸಂಗ್ರಹಿಸಿಟ್ಟುಕೊಳ್ಳಲೂ ಕೆಟ್ಟ ಶಕ್ತಿಗಳನ್ನೂ ಹೊರದೂಡಲೂ ಮಹರ್ಷಿಗಳು ಕೆಲವು ನಿಯಮಗಳನ್ನು ವಿಧಿಸಿದ್ದಾರೆ. ಅವನ್ನು ಅಷ್ಟಕ್ಕೆ ತೆಗೆದುಕೊಂಡು ಕಂಡರೆ ಅರ್ಥ ರಹಿತವೂ ಸ್ವೇಚ್ಛಾವರ್ತಿಯೂ ಆಗಿ ಕಾಣಬರುತ್ತವೆ. ಆದರೆ ಅವನ್ನು ಶಕ್ತಿ ಸಂಗೋಪನ ದೃಷ್ಟಿಯಿಂದ ಸಾವಧಾನವಾಗಿ ಪರಿಶೀಲಿಸಿದರೆ ಪ್ರಾಚೀನರಿಗೆ ಭೌತ ವಿಜ್ಞಾನಗಳಲ್ಲಿ ಎಷ್ಟು ತಿಳುವಳಿಕೆಯಿತ್ತು ಎಂಬುದು ವಿಸ್ಮಯಕರವಾಗಿ ಎದ್ದುಕಾಣುತ್ತದೆ.

ವಾತ್ಸಾಯನ ಮಹರ್ಷಿಯ ಪ್ರಕಾರ ಅಕ್ಷಿ (ಕಣ್ಣು), ವಕ್ಷ (ಎದೆ), ಕುಕ್ಷಿ (ಹೊಟ್ಟೆ), ಶಿರ(ತಲೆ), ಹೃದಿ, ಹಸ್ತ ಅಪತ್ಯ (ಸ್ತ್ರೀ ಲಿಂಗಾಂಗ), ನಾಭಿ (ಹೊಕ್ಕಳು), ಮೇಢ್ರ (ಪುರುಷ ಲಿಂಗಾಂಗ), ಅಧೋಭಾಗ (ನಾಳವ್ಯೂಹ) (ಕೆಳ ಕರುಳು), ಬುದ್ಧಿಸ್ಥಾನ, ಬ್ರಹ್ಮರಂಧ್ರ (ಬ್ರಹ್ಮಕಿರಣವಿರುವ ಜಾಗ) ಇವೆಲ್ಲವೂ ವಿದ್ಯುಚ್ಛಕ್ತಿಯಿರುವ ಸ್ಥಾನಗಳು. ಆದಕಾರಣ ತಲೆಯ ಕೂದಲನ್ನು ಕತ್ತರಿಸುವುದು ಎಂದರೆ ದೇಹಕ್ಕೆ ಅಷ್ಟು ಮಟ್ಟಿಗೆ ಚೈತನ್ಯದ ಸ್ವಭಾವಕ್ಕೆ ಅನುಗುಣವಾಗಿ ಕೆಲವು ತಿಥಿಗಳಲ್ಲಿ ದೇಹದಿಂದುಂಟಾಗುವ ಶಕ್ತಿನಾಶವನ್ನು ನಿವಾರಿಸಬಹುದು. ಆದಕಾರಣ ಇಂಥ ವೇಳೆಗಳಲ್ಲಿ ಮಾತ್ರ ಕ್ಷೌರ ಕರ್ಮವನ್ನು ಕೈಕೊಳ್ಳತಕ್ಕದು. ಎಂಟು ವಿಧಿಯಿಂದ ಈ ಮೂಲಗಳಿಂದ ಹರಿಯುವ ವಿದ್ಯುತ್ ಪ್ರವಾಹಗಳನ್ನು ಕಡಿಮೆ ಮಾಡಬಹುದು ಅಥವಾ ನಿಲ್ಲಿಸಲೂಬಹುದು. ಊಟವಾದ ಮೇಲೆ ಕ್ಷೌರ ಮಾಡಿಕೊಂಡರೆ ಅದೊಂದು ದೊಡ್ಡ ಕೆಡುಕೇ ಆಗುತ್ತದೆ. ಏಕೆಂದರೆ ಅನ್ನವು ಜೀರ್ಣಾವಸ್ಥೆಗೆ ಬರುವುದರಿಂದ ದೇಹದಿಂದ ಹೊರಪಡುವ ವಿದ್ಯುತ್ ಪ್ರವಾಹಗಳಿಗೆ ಅಪಾಯಕಾರಿಯಾದ ಅಡಚಣೆಯುಂಟಾಗಿ ಕಾಲಕ್ರಮದಲ್ಲಿ ಆರೋಗ್ಯಕ್ಕೆ ಹಾನಿಯುಂಟುಮಾಡಬಹುದು. ಕ್ಷೌರವೆಂದರೆ ತಲೆಯಿಂದ, ಮುಖದಿಂದ ಕೂದಲನ್ನು ಕತ್ತರಿಸುವುದು. ಆದಕಾರಣ ದೇಹ ಸೌಖ್ಯಕ್ಕೂ ಮಾನಸಿಕವಾದ ಪಟುತ್ವಕ್ಕೂ ಅಗತ್ಯವಾದಂಥ ವಿದ್ಯುತ್ ಶಕ್ತಿಯನ್ನು ಪೋಲು ಮಾಡಿದಂತಾಗುತ್ತದೆ.

ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿದವರು ಸಾಮಾನ್ಯವಾಗಿ ಗಡ್ಡ ಮೀಸೆ ಬೆಳೆಸಿಕೊಳ್ಳುತ್ತಾರೆ. ಚೈತನ್ಯ ನಷ್ಟವಾಗಬಾರದು ಎಂಬುದೇ ಇಲ್ಲಿರುವ ಅಭಿಪ್ರಾಯ. ಕಣ್ಣಿನ ತೊಂದರೆ, ಜ್ಞಾಪಕ ಶಕ್ತಿಯ ನಷ್ಟ, ದೃಷ್ಟಿಹೀನತೆ, ಕಿವುಡು ಮುಂತಾದ

ಕೆಡುಕುಗಳಲ್ಲ ತಿಥಿ ವೇಳೆಗಳಿಗೆ ಲೆಕ್ಕಿಸದೆ ಕ್ಷೌರ ಮಾಡಿಕೊಳ್ಳುವುದರಿಂದ ಉಂಟಾಗುವ ನೇರ ದುಷ್ಪರಿಣಾಮಗಳು. ಜ್ಯೋತಿಷದ ತತ್ವಾಧಾರದ ಪ್ರಕಾರ ಕ್ಷೌರ ಕರ್ಮವನ್ನು ಕೈಕೊಳ್ಳುವುದರಿಂದ ಅನೇಕವಾದ ದೈಹಿಕವಾದ ಕೆಡುಕುಗಳನ್ನು ನಿವಾರಿಸಿಕೊಳ್ಳಬಹುದು.

ಕ್ಷೌರಕ್ಕೆ ಪುಷ್ಯ, ಪುನರ್ವಸು, ರೇವತಿ, ಹಸ್ತ, ಶ್ರವಣ, ಧನಿಷ್ಠ, ಮೃಗಶಿರ, ಅಶ್ವಿನಿ, ಚಿತ್ತ, ಜ್ಯೇಷ್ಠ, ಶತಭಿಷ, ಸ್ವಾತಿ ನಕ್ಷತ್ರಗಳು ತಕ್ಕವು. ಚೌತಿ, ಷಷ್ಠಿ, ಚತುರ್ದಶಿ, ಅಮಾವಾಸ್ಯೆ ಹುಣ್ಣಿಮೆ ತಿಥಿಗಳು ಅಪೇಕ್ಷಣೀಯವಲ್ಲ. ಹುಟ್ಟು (ಪುರುಡು), ಸಾವು (ಸೂತಕ)ಗಳಿಗೆ ಸಂಬಂಧಪಟ್ಟ ಅಶೌಚಗಳಿಗೂ ಸೂರ್ಯ ಚಂದ್ರಗ್ರಹಣಗಳಿಗೂ ಇವೇ ಪರಿಗಣನೆಗಳು ಅನ್ವಯವಾಗುತ್ತವೆ. ಪ್ರಾಚೀನರು ವಿಜ್ಞಾನಗಳನ್ನು ಚೆನ್ನಾಗಿ ಬಲ್ಲವರಾಗಿದ್ದು ಆಚಾರ ನಿಯಮಗಳನ್ನು ಹಾಕಿಕೊಟ್ಟಿದ್ದಾರೆ ಜನಕ್ಕೆ ಪ್ರಯೋಜನವಾಗಲಿ ಎಂದು. ಆಧುನಿಕರಾದ ನಮ್ಮಂಥವರು ಸಂಗತಿಗಳನ್ನು ಪತ್ತೆ ಮಾಡಿಡುವುದರಲ್ಲಿ ನಂಬಿಕೆಯುಳ್ಳವರಾಗಿರಲಿಲ್ಲ. ಈ ಮಾತು ದಟ್ಟವಾದ ಪೂರ್ವಾಗ್ರಹಗಳಿಂದ ಕುರುಡಾಗಿರುವವರಿಗೆ, ಕೈಗೆಟುಕದವರ ಪಾಲಿಗೆ ದ್ರಾಕ್ಷಿ ಹುಳಿ ಎನಿಸುವಂತೆ, ಬೇಡವೆನಿಸಬಹುದು. ಆದರೆ ಯಾರ ದೃಷ್ಟಿ ಸ್ವಚ್ಛವಾಗಿದೆಯೋ ಆವರಿಗೆ ತಮ್ಮ ಪರಮ ಪ್ರಯೋಜನಕ್ಕಾಗಿ ದೈಹಿಕ ಚೈತನ್ಯಗಳು ಪೋಲಾಗುವುದನ್ನು ಕಡಿಮೆ ಮಾಡಿಕೊಳ್ಳಬಯಸುವವರಿಗೂ ಅದು ಅಪ್ಯಾಯಮಾನವಾಗಿ ಕಂಡುಬಂದೀತು.

***ಉಗುರು ಕತ್ತರಿಸುವುದು*** : ಶುಕ್ರವಾರ, ಶನಿವಾರ ಆಗಿಬರುವುದಿಲ್ಲ. ಹಾಗೆ ಅಷ್ಟಮಿ, ನವಮಿ, ಚತುರ್ದಶಿಗಳೂ,-ಹುಣ್ಣಿಮೆ, ಅಮಾವಾಸ್ಯಗಳೂ ಆಗುವುದಿಲ್ಲ. ಉಗುರು ಕತ್ತರಿಸುವುದೆಂದರೆ ದೇಹದಿಂದ ವಿದ್ಯುತ್ ಪ್ರವಾಹ ಹರಿದಂತೆ. ಇದರಿಂದ ದೇಹಕ್ಕೆ ದುಷ್ಪರಿಣಾಮವುಂಟಾಗದಂತೆ ನೋಡಿಕೊಳ್ಳಬೇಕು.

***ಪಾತ್ರೆ ಪದಾರ್ಥಗಳನ್ನು ಕೊಳ್ಳುವುದಕ್ಕೆ*** : ಹಿತ್ತಾಳೆ ಪಾತ್ರೆಗಳನ್ನು ಕೊಳ್ಳುವಾಗ ಚಂದ್ರನಿಗೆ ಗುರು ಒಳ್ಳೆ ದೃಷ್ಟಿಯಲ್ಲಿರಬೇಕು. ತಾಮ್ರದ ಪಾತ್ರೆ ಕೊಳ್ಳುವಾಗ ಕುಜನಿಗೆ ಗುರು ಒಳ್ಳೆಯ ದೃಷ್ಟಿಯಲ್ಲಿರಬೇಕು. ಹೀಗೆ ಉಕ್ಕು ಕಬ್ಬಿಣ –ಶನಿಗೆ; ಬೆಳ್ಳಿ – ಲಗ್ನಕ್ಕೆ ಗುರು ಒಳ್ಳೆಯ ದೃಷ್ಟಿಯಲ್ಲಿರಬೇಕು. ಆಶ್ಲೇಷ, ಮೂಲ, ಜ್ಯೇಷ್ಠ ಒಳ್ಳೆ ನಕ್ಷತ್ರಗಳಲ್ಲ ಯಂತ್ರೋಪಕರಣಗಳನ್ನು ಕೊಳ್ಳಲು ಅದೇ ರೀತಿ ಅಷ್ಟಮಿ, ನವಮಿ, ಹುಣ್ಣಿಮೆ, ಅಮಾವಾಸ್ಯೆ ಬಿಡಿ.

***ಒಡವೆ ಕೊಳ್ಳುವುದಕ್ಕೆ*** : ಸೂರ್ಯ ಚಂದ್ರರು ಒಳ್ಳೆ ಕಡೆ ಇರಬೇಕು ಮತ್ತು ಒಳ್ಳೆ ದೃಷ್ಟಿಗೊಳಗಾಗಿರಬೇಕು. ಪ್ರತಿಕೂಲವಾದ ತಿಥಿಗಳನ್ನೂ ನಕ್ಷತ್ರಗಳನ್ನೂ ಬಿಡಬೇಕು.

***ಸಾಲ ಕೊಡುವುದಕ್ಕೆ*** : ಕೃತ್ತಿಕ, ಮಖ, ಮೂಲ, ಶತಭಿಷ, ಉತ್ತರ, ಪುನರ್ವಸು ಅಥವಾ ಅವರವರ ಜನ್ಮ ನಕ್ಷತ್ರ ಇರುವ ದಿವಸ ಸಾಲವನ್ನು ಕೊಡಬಾರದು. ಈ ದಿವಸಗಳಲ್ಲಿ ಹಣವನ್ನು ಈಸಿಕೊಳ್ಳಬೇಕು. ಮಂಗಳವಾರ, ಶುಕ್ರವಾರಗಳೂ ಅಶುಭ. ಅಮಾವಾಸ್ಯೆ ದಿವಸ ಶನಿವಾರವಾದರೆ, ಹಣವನ್ನು ಕೊಡಬಾರದು. ಲಗ್ನಾಧಿಪತಿಯೂ ಸಪ್ತಮಾಧಿಪತಿಯೂ ಪರಸ್ಪರ ಒಳ್ಳೆಯವಾಗಿರಬೇಕು. ವೃಶ್ಚಿಕದಲ್ಲಿ ಚಂದ್ರನಿದ್ದರೆ ಕೊಡುವವನಿಗೆ ಕೆಡುಕು.

***ಸಾಲ ತೆಗೆದುಕೊಳ್ಳುವುದು*** : ಕೃತ್ತಿಕ, ಮೂಲ, ಪುನರ್ವಸು, ಧನಿಷ್ಠ, ಜನ್ಮ ನಕ್ಷತ್ರ ಇರುವ ದಿವಸ ಸಾಲ ತೆಗೆದುಕೊಳ್ಳಬೇಡಿ. ಚಂದ್ರನು ಕುಜ, ಶನಿಗಳೊಡಗೂಡಿರುವಾಗಲೂ ಕೂಡದು. ಇಲ್ಲವಾದರೆ ತಕರಾರು, ವ್ಯಾಜ್ಯ ತಪ್ಪದು. ಮನೆಯ ವೆಚ್ಚಕ್ಕಾಗಿಯೋ ಸ್ವಂತ ಖರ್ಚಿಗಾಗಿಯೋ ಕೈಸಾಲ ಮಾಡಬೇಕಾಗುವಾಗ ಚಂದ್ರನು ಲಗ್ನಕ್ಕೆ ಒಳ್ಳೆಯ ದೃಷ್ಟಿಯುಳ್ಳವನಾಗಿರಬೇಕು. ಪಡೆದ ಸಾಲದ ಹಣವನ್ನು ವ್ಯಾಪಾರೋದ್ಯಮಗಳಿಗೆ ಉಳಿಸಬೇಕಾಗಿದ್ದರೆ, ಚಂದ್ರನು ಬುಧನಿಗೂ ಲಗ್ನಾಧಿಪತಿಗೂ ಅನುಕೂಲ ಪರಿಸ್ಥಿತಿಯಲ್ಲಿರಬೇಕು. ಯಾವುದೇ ಉದ್ದೇಶಕ್ಕಾದರೂ ತಿಥಿ ವಾರ ನಕ್ಷತ್ರಗಳು ಶುದ್ಧವಾಗಿದ್ದು ತಾರಾಬಲವಿರಬೇಕಾದುದು ಮುಖ್ಯ. ಬಾಕಿ ವಿಚಾರಗಳು ತರುವಾಯ ಬರತಕ್ಕವು.

***ವ್ಯಾಪಾರೋದ್ಯಮವನ್ನು ಕೊಳ್ಳುವುದಕ್ಕೆ*** : ಗುರುವಾರ ದಶಮಿ ತಿಥಿ ಪುಷ್ಯ ನಕ್ಷತ್ರ ಸರ್ವೋತ್ಕೃಷ್ಟ. ಮಂಗಳವಾರ ಸರ್ವಥಾ ಕೂಡದು. ಶನಿವಾರ ಪರವಾ ಇಲ್ಲ. ಬುಧ ದ್ವಿತೀಯಾಧಿಪತಿ ದ್ವಿತೀಯ ಭಾವ ಬಲಯುತವಾಗಿರಬೇಕು. ವಾಣಿಜ್ಯೋದ್ಯಮವನ್ನು ಕೊಳ್ಳುವಾಗ ಬುಧನು ಕುಜ ಪೀಡಿತನಾಗಿರದಂತೆ ನೋಡಿಕೊಳ್ಳಿ. ಹಾಗಿದ್ದರೆ ದಾಸ್ತಾನು ಹಾಳಾಗಿ ಕಲಹ ಕೋಟಲೆಗಳು ಉಂಟಾಗುತ್ತವೆ. ಬುಧ ಗುರುಗಳು ಲಗ್ನದಲ್ಲಿದ್ದರೆ ಅಥವಾ ಪರಸ್ಪರ ದೃಷ್ಟಿ ಪಡೆದಿದ್ದರೆ, ಅತ್ಯಂತ ಶುಭಪ್ರದ.

***ದನವನ್ನು ಕೊಳ್ಳುವುದು*** : ಸೋಮವಾರ, ಮಂಗಳವಾರ, ಬುಧವಾರ, ಶನಿವಾರ ಒಳ್ಳೆಯವು. ಆ ದಿನದ ಅಧಿಪತಿಯು ಲಗ್ನದಲ್ಲಿರುವಾಗ ಕೊಳ್ಳತಕ್ಕುದು. ಕುರಿ ಕೊಳ್ಳಲು ಗುರುವಾರ ಪುಷ್ಯ ನಕ್ಷತ್ರವಿರವಾಗ ಮೇಷ ಲಗ್ನ ಪ್ರಶಸ್ತ.

*ಲಾಭಕ್ಕಾಗಿ ಮಾರುವುದು* : ಚಂದ್ರ ಬುಧರು ಕುಜ ದೃಷ್ಟಿಯಿಂದ ಅಥವಾ ಕುಜ ಸಮಾಗಮದಿಂದ ಮುಕ್ತರಾಗಿರಬೇಕು. ಚಂದ್ರನು ವೃಷಭ, ಕಟಕ ಅಥವಾ ಮೀನದಲ್ಲಿದ್ದರೆ ಮಾರುವವನಿಗೆ ತುಂಬ ಸಹಾಯಕರ. ಲಗ್ನದಿಂದ ಕುಜ ಕೇಂದ್ರದಲ್ಲಿರಲಿ ಅಥವಾ ಗುರುವಿನ ಒಳ್ಳೆ ದೃಷ್ಟಿಗೆ ಒಳಗಾಗಿರಲಿ. ಮಂಗಳವಾರ

ಬೇಡ. ಸೋಮವಾರ ಬುಧವಾರ ಗುರುವಾರ ಉತ್ತಮ. ಶುಕ್ರವಾರ ಅಶುಭವಾದರೆ, ಶನಿವಾರ ಮಧ್ಯಸ್ತ.

***ಸ್ಥಳ ಬದಲಾವಣೆ*** : ಈ ಬಗ್ಗೆ ಹೆಚ್ಚಿನ ವಿವರಗಳನ್ನು ಹದಿಮೂರನೇ ಅಧ್ಯಾಯದಲ್ಲಿ ಕೊಟ್ಟಿದೆ. ಬಹಳ ತ್ವರಿತವಾಗಿ ಸ್ಥಳ ಬದಲಾಯಿಸಬೇಕಾಗಿ ಬಂದಾಗ, ಜನ್ಮ ನಕ್ಷತ್ರ ಕೂಡದು. ಅನೂರಾಧ, ಮೃಗಶಿರ, ಹಸ್ತ ಉತ್ತಮ. ನವಮಿ ಪ್ರಯಾಣ ನಿಷಿದ್ಧ. ಆದರೆ ಅವಸರದ ವೇಳೆಯಲ್ಲಿ ಬೇರೆ ಶುಭಲಕ್ಷಣಗಳಿದ್ದರೆ ಆಗಬಹುದು. ಲಾಭಾಪೇಕ್ಷೆಯಿರುವ ಪ್ರಸಂಗಗಳಲ್ಲಿ ಹದಿನಾಲ್ಕನೆ ಅಧ್ಯಾಯದಲ್ಲಿ ಕೊಟ್ಟಿರುವ ಎಲ್ಲ ಜ್ಯೋತಿಷಿಕ ಆವಶ್ಯಕತೆಗಳನ್ನು ಆಚರಿಸತಕ್ಕದು. ಯಾವ ಪ್ರಕರಣದಲ್ಲಾದರೂ ತಾರಾಬಲ ಚಂದ್ರಬಲಗಳಿರಲಿ. ಲಗ್ನವು ಬಲಯುತವಾಗಿರಲಿ. ಚಂದ್ರ ಮತ್ತು ಲಗ್ನ ಸ್ಥಿರ ರಾಶಿಗಳಲ್ಲಿರಲಿ. ಗುರು ಇಲ್ಲವೆ ಶುಕ್ರ ಲಗ್ನದಲ್ಲಿದ್ದರೆ ಒಳ್ಳೆಯದು. ಹತ್ತರಲ್ಲಾದರೂ ಇರಬೇಕು.

*ಸಾಲದ ವಸೂಲಿ* : ಲಗ್ನಾಧಿಪತಿ ಪ್ರಬಲನಾಗಿರಬೇಕು. ಮುಹೂರ್ತ ಲಗ್ನವು ಜನ್ಮ ಲಗ್ನದಿಂದ ಎಂಟರಲ್ಲೋ ಒಂಭತ್ತರಲ್ಲೋ ಇರಬಾರದು. ಲಗ್ನಾಧಿಪತಿ ದ್ವಿತೀಯಾಧಿಪತಿಗಳು ಒಳ್ಳೆ ಸ್ಥಳಗಳಲ್ಲಿರಬೇಕು.

*ಒತ್ತೆ ಇಡುವುದು* : ವಿಶಾಖ, ಕೃತ್ತಿಕ (ಸಾಧನ), ಭರಣಿ, ಮಖ, ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ (ವಜ್ರ), ಆರ್ದ್ರ, ಆಶ್ಲೇಷ, ಜ್ಯೇಷ್ಠ, ಮೂಲ (ತೀಕ್ಷ್ಣ) ನಕ್ಷತ್ರಗಳಲ್ಲಿ ಒತ್ತೆ ಇಟ್ಟ ಸಾಮಾನುಗಳು ವಾಪಸು ಬರುವುದಿಲ್ಲ. ಗುರು ಚಂದ್ರರು ಪರಸ್ಪರ ಅನುಕೂಲಸ್ಥರಾಗಿರಬೇಕು. ಮಂಗಳವಾರ ಶುಕ್ರವಾರ ಅಶುಭ. ಇತರೇ ಕೆಟ್ಟ ತಿಥಿಗಳೂ ಕೂಡದು.

*ಮರಣಶಾಸನ* : ಚಂದ್ರ ಲಗ್ನ ಲಗ್ನಾಧಿಪತಿ ಸ್ಥಿರರಾಶಿಗಳಲ್ಲಿರಬೇಕು. ಪುಷ್ಯಮಿ ನಕ್ಷತ್ರವು ಪರಮ ಶ್ರೇಷ್ಠ. ಬುಧವಾರ ಗುರುವಾರಗಳೂ ಅಷ್ಟೆ. ಮಂಗಳವಾರ, ಶನಿವಾರ ಬೇಡ. ಮರಣಶಾಸನದ ಪ್ರಯೋಜನ ಪಡೆಯುವವರಿಗೆ ಅನುಕೂಲವಾಗಲು ಲಗ್ನವು ಗುರುವಿನ ಅಥವಾ ಶುಕ್ರನ ರಾಶಿಯಾಗಿರಬೇಕು. ಕುಜ ಶನಿಗಳು ಮೂರರಲ್ಲೋ ಹನ್ನೊಂದರಲ್ಲೋ ಇರತಕ್ಕದು. ಎಂಟನೆ ಮನೆಯು ಬಲಯುತವಾಗಿರಬೇಕು. ಇಲ್ಲವಾದರೆ ಅಂತಿಮ ಪತ್ರ ಬರೆವಾತ ಸಾಯುತ್ತಾನೆ.

*ಹನ್ನೊಂದನೆ ಅಧ್ಯಾಯ*

## ವಿದ್ಯಾಭ್ಯಾಸವನ್ನು ಕುರಿತ ಮುಹೂರ್ತಗಳು

ಪ್ರಾಚೀನ ಮಹರ್ಷಿಗಳ ಪ್ರಕಾರ ವಿದ್ಯೆ ಅಥವಾ ಶಿಕ್ಷಣ ಎಂದರೆ ವೇದಾಧ್ಯಯನ. ವೇದಾಂಗಗಳು ಮೀಮಾಂಸೆ ಧರ್ಮ ಶಾಸ್ತ್ರಗಳು ವೈದ್ಯ ಸಂಗೀತ ಅರ್ಥಶಾಸ್ತ್ರ ರಾಜ್ಯ ಶಾಸ್ತ್ರ ಮುಂತಾದವುಗಳ ಕಲಿಕೆ. ಈ ಎಲ್ಲ ಶಾಸ್ತ್ರಗಳನ್ನೂ ಕುರಿತಂಥ ವಿಪುಲವಾದ ಗ್ರಂಥಗಳಿವೆ. ಯಾವುದೇ ಶಾಸ್ತ್ರ ವಿಷಯದಲ್ಲಿ ಜ್ಞಾನಾರ್ಜನೆ ಮಾಡುವಂತಾಗಬೇಕಾದರೂ ವಿದ್ಯಾಭಾಸವನ್ನು ಗ್ರಹಗಳ ಶುಭ ಪ್ರಭಾವವಿರುವ ಒಳ್ಳೆ ಗಳಿಗೆಯಲ್ಲಿ ಪ್ರಾರಂಭಿಸಬೇಕು. ಯಾವ ಶಾಸ್ತ್ರದಲ್ಲಿ ಪ್ರಾವೀಣ್ಯವನ್ನು ಅಪೇಕ್ಷಿಸಲಾಗುತ್ತದೆಯೋ ಅದಕ್ಕೆ ತಕ್ಕಂತೆ ಮಿದುಳಿನ ಕೋಶಗಳಲ್ಲಿ ಅಡಗಿರುವ ವಿಶಿಷ್ಟ ರೀತಿಯ ಬುದ್ಧಿ ಸಂಪದವನ್ನು ಹೊರಗೆಳೆಯಬಲ್ಲಂಥ ಮನಸ್ಸಿನ ಏಕಾಗ್ರತೆ ಅವಶ್ಯಕ. ಅಂಥ ಏಕಾಗ್ರತೆಯು ಲಭಿಸುವಂತಾಗಲಿ ಎಂದೇ ಜ್ಯೋತಿಷವನ್ನು ಅಪೇಕ್ಷಿಸುವುದು. ಏಕೆಂದರೆ ಯಾವುದೇ ಶಾಸ್ತ್ರದ ಅಧ್ಯಯನ ಪ್ರಾರಂಭಿಸುವುದಕ್ಕೆ ಚುನಾಯಿಸಿದ ಗಳಿಗೆಯು ಮನಸ್ಸಿನ ಧಾರೆಯನ್ನು ಪ್ರಾಕೃತಿಕ ಶಕ್ತಿಗಳೊಡನೆ ಹೊಂದಿಕೊಂಡು ಸಾಮರಸ್ಯ ಸಾಧಿಸುವಂತೆ ಸುಸಂಗತಗೊಳಿಸತಕ್ಕುದಾಗಿರ ಬೇಕಾಗುತ್ತದೆ.

*ವಿದ್ಯಾರಂಭಕ್ಕೆ ಶ್ರೇಷ್ಠವಾದ ನಕ್ಷತ್ರಗಳು* : ಮೃಗಶಿರ, ಆರ್ದ್ರ, ಪುನರ್ವಸು, ಪುಷ್ಯಮಿ, ಹಸ್ತ, ಚಿತ್ತ, ಸ್ವಾತಿ, ಶ್ರವಣ, ಧನಿಷ್ಠ ಮತ್ತು ಶತಭಿಶ. ಕೆಲವು ಶಾಸ್ತ್ರಕಾರರ ಪ್ರಕಾರ ಅಶ್ವಿನಿ, ಸರ್ವಶ್ರೇಷ್ಠವಾದ ನಕ್ಷತ್ರ. ರೋಹಿಣಿ ಉತ್ತರ ಉತ್ತರಾಷಾಢ ರೇವತಿ ನಕ್ಷತ್ರಗಳು ತಟಸ್ಥ, ಉಳಿದವು ತ್ಯಾಜ್ಯ.

ಮಂಗಳವಾರ ಶನಿವಾರಗಳನ್ನು ತಪ್ಪದೆ ಬಿಡಬೇಕು. ಉಳಿದ ಜ್ಯೋತಿಷಿಕ ಅಪೇಕ್ಷೆಗಳು ಸಲ್ಲುವಾಗ ಭಾನುವಾರವಾದರೂ ಬಾಧಕವಿಲ್ಲ ಮುಂದೆ ಸೂಚಿಸುವ ತಿಥಿಗಳು ಶುಭದಾಯಕ.

ಪಾಡ್ಯ (ಬಹುಳ), ಬಿದಿಗೆ, ತದಿಗೆ, ಪಂಚಮಿ, ಷಷ್ಠಿ, ದಶಮಿ, ಏಕಾದಶಿ.

ಬಿಡಬೇಕಾದ ತಿಥಿಗಳು ಚೌತಿ, ಅಷ್ಟಮಿ, ನವಮಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆ

ಲಗ್ನವು ಸ್ಥಿರ ರಾಶಿಯಾಗಿರಬಾರದು. ಉಭಯ ರಾಶಿಗಳು ಉತ್ಕೃಷ್ಟ. ಚರ ರಾಶಿಗಳು ಸಾಧಾರಣ.

ವಿದ್ಯಾಭ್ಯಾಸವು ಯಾವುದೇ ವಿಷಯ ಕುರಿತದ್ದಾಗಿರಲಿ, ಎರಡು ಮುಖ್ಯ ಯೋಗಗಳನ್ನು ಲಕ್ಷಿಸಬೇಕು. ಅವು ಯಾವುವೆಂದರೆ:

## ಸರಸ್ವತಿ ಯೋಗ :

(1) ಬುಧವಾರ, ಹಸ್ತ ನಕ್ಷತ್ರ, ಸೂರ್ಯನೊಡಗೂಡಿರುವಂಥ ಮಿಥುನ ಅಥವಾ ಕನ್ಯಾ ಲಗ್ನ, ಚಂದ್ರ ಬುಧರು ಬುಧನ ಅಂಶವಲ್ಲಿರಬೇಕು.

(2) ಬುಧವಾರ ಸೂರ್ಯೋದಯ ಕಾಲ; ಬುಧನು ಪರಮೋಚ್ಚನಾಗಿರಬೇಕು.

(3) ಬುಧವಾರ ಲಗ್ನದಲ್ಲಿ ಬುಧನು ಹಸ್ತ ಮೂರನೇ ಪಾದದಲ್ಲಿರಬೇಕು.

(4) ಗುರು ಲಗ್ನದಲ್ಲಿ ಪರಮೋಚ್ಚನಾಗಿರಬೇಕು. ಶನಿವಾರ ಭಾನುವಾರಗಳಲ್ಲದೆ ಬೇರೆ ಯಾವುದಾದರೂ ವಾರವಾಗಿರಬೇಕು.

## ವಿದ್ಯಾ ಯೋಗ :

(1) ಶುಕ್ರವಾರ; ಮೀನ ಲಗ್ನ; ಅದೇ ರಾಶಿಯ 27ನೆಯ ಡಿಗ್ರಿಯಲ್ಲಿ ಶುಕ್ರ ಇರಬೇಕು.

(2) ಪರಮೋಚ್ಚ ಗುರು, ಕಟಕ ಲಗ್ನ, ಗುರುವಾರ.

(3) ಯಾವುದಾದರೂ ಶುಭವಾರ ನಕ್ಷತ್ರ ಇರುವಾಗ ಸೂರ್ಯನು ಸ್ವಂತ ಹೋರದಲ್ಲಿರಬೇಕು.

ವಿದ್ಯಾಭ್ಯಾಸವು ತೃಪ್ತಿಕರವಾಗಿ ಸಾಗಬೇಕಾದರೆ ಮುಂದೆ ಕೊಟ್ಟಿರುವ ಅಂಶಗಳಿಗೆ ತಕ್ಕಷ್ಟು ಗಮನ ಕೊಡಬೇಕು.

ಪೂರ್ವಾಹ್ನ ಮತ್ತು ನಡು ಮಧ್ಯಾಹ್ನ ಉತ್ತಮ. ಅಶುಭ ಗ್ರಹಗಳು ಮೂರನೇ, ಆರನೇ, ಹನ್ನೊಂದನೇ ಮನೆಗಳಲ್ಲಿರಬೇಕು. ಎಂಟನೆಯ ಮನೆಯು ಶುದ್ಧವಾಗಿರಬೇಕು. ಶುಭಾಶುಭ ಗ್ರಹ ಯಾವುದೂ ಅಲ್ಲಿರಬಾರದು. ವಿದ್ಯಾರಂಭಕ್ಕೆ ಬುಧವಾರ ಪ್ರಾತಃಕಾಲವು, ಮುಹೂರ್ತ ಕುಂಡಲಿಯಲ್ಲಿ ಇತರೆ ಅಪೇಕ್ಷೆಗಳು ಶುಭಕರವಾಗಿಯೂ ಬಲಯುತವಾಗಿಯೂ ಇರುವಾಗ ಸರ್ವೋತ್ಕೃಷ್ಟ.

ವೇದಶಾಸ್ತ್ರಗಳ ಅಧ್ಯಯನ : ಪುಷ್ಯಮಿ, ಧನಿಷ್ಠ, ಶ್ರವಣ, ಪುಶಸ್ತ. ಗುರು ಸಾಧ್ಯವಾದ ಮಟ್ಟಿಗೂ ಬಲಿಷ್ಠನಾಗಿರಬೇಕು.

*ಜ್ಯೋತಿಷ ಮತ್ತು ಖಗೋಳ ವಿಜ್ಞಾನಿಗಳ ಕಲಿಕೆ :* ಅಶ್ವಿನಿ, ಪುನರ್ವಸು, ಪುಷ್ಯಮಿ, ಹಸ್ತ, ಸ್ವಾತಿ, ಮೂಲ, ರೇವತಿ ಒಳ್ಳೆಯವು.

*ವ್ಯಾಕರಣತರ್ಕ ವೇದಾಂತಗಳ ಕಲಿಕೆ :* ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯ, ಹಸ್ತ, ಧನಿಷ್ಠ, ರೇವತಿ ನಕ್ಷತ್ರಗಳು ವ್ಯಾಕರಣ ಕಲಿಯಲು ಅನುಕೂಲ. ಇತರೆ ಶಾಸ್ತ್ರಗಳ ಅಧ್ಯಯನಕ್ಕೆ ಶ್ರವಣ, ಶತಭಿಷ, ಹಸ್ತ, ಉತ್ತರ, ಮೂಲ, ರೇವತಿ ಒಳ್ಳೆಯವು. ಎಂದಿನಂತೆ ಬುದ್ಧಿಕಾರಕ ಬುಧ ಬಲಯುತವಾಗಿರಬೇಕು.

*ವೈದ್ಯದ ಕಲಿಕೆ :* ಧನಿಷ್ಠ, ವೈದ್ಯ ಕಲಿಯಲು ಮಾತ್ರವಲ್ಲದೆ ಶಸ್ತ್ರಾಸ್ತ್ರಗಳ ಕಲಿಕೆ ಪ್ರಾರಂಭಿಸಲೂ ಉತ್ಕೃಷ್ಟವಾದ ನಕ್ಷತ್ರ. ಶನಿಯಿಂದ ಕುಜನಿಗೆ ಬಾಧೆಯುಂಟಾಗದೆ ಇರಬೇಕು. ಲಗ್ನವೋ, ನವಾಂಶವೋ, ಕುಜನದಾಗಿರಬೇಕು ಇಲ್ಲವೆ ರವಿಯದಾಗಿರಬೇಕು.

*ಸಂಗೀತ ನೃತ್ಯಗಳ ಕಲಿಕೆ :* ಇವೆರಡು ವೃತ್ತಿಗಳೂ ನೀತಿಯುತವಾದ ವಿದ್ಯೆಗಳಲ್ಲವೆನಿಸಿರುವ ಕಾರಣ, ಶುಕ್ರನು ಸಾಧ್ಯವಾದಮಟ್ಟಿಗೂ ರಾಹು ಬಾಧಿತನೋ ಶನಿ ಪೀಡಿತನೋ ಆಗದೆ ಪ್ರಬಲನಾಗಿರಲಿ. ಹಸ್ತ, ಪುಷ್ಯಮಿ, ಧನಿಷ್ಠ, ಅನೂರಾಧಾ, ಜ್ಯೇಷ್ಠ, ರೇವತಿ, ಶತಭಿಷ, ಉತ್ತರಾಷಾಢ, ಉತ್ತರಾಭಾದ್ರ ಉತ್ಕೃಷ್ಟ. ಗುರು ಶುಕ್ರರ ನಡುವೆ ವಿಹಿತವಾಗಿರಲಿ, ಲಗ್ನಾಧಿಪತಿ ಐದರಲ್ಲೋ ಒಂಭತ್ತರಲ್ಲೋ ಇರಲಿ. ಅವೆರಡು ಮನೆಗಳೂ ಅಬಾಧಿತವಾಗಿ ಶುದ್ಧವಾಗಿರಲಿ. ಬುಧ, ಶುಕ್ರ ಸಮಾಗಮವು ಲಗ್ನದಲ್ಲಿದ್ದರೆ ಅದು ಅತ್ಯಂತ ಶುಭಕರ.

*ಯಾವುದೇ ವಿಜ್ಞಾನದ ಕಲಿಕೆ :* ಯಾವುದೇ ವಿಜ್ಞಾನದ ಕಲಿಕೆಯನ್ನು ಮೇಲೆ ಸೂಚಿಸಿರುವಂಥ ವಿಶೇಷ ಯೋಗಗಳ ಪೈಕಿ ಸರಸ್ವತಿ ಯೋಗದಲ್ಲಾದರೂ ಸರಿ, ವಿದ್ಯಾಯೋಗದಲ್ಲಾದರೂ ಸರಿ ಪ್ರಾರಂಭಿಸಬೇಕು.

*ವಾಣಿಜ್ಯ ಕಲಿಕೆ :* ಆಯಾ ವೃತ್ತಿಗೆ ಕಾರಕನಾದ ಗ್ರಹವು ಲಗ್ನಕ್ಕೆ ಅನುಕೂಲನಾಗಿರಬೇಕು. ಮತ್ತು ಅಬಾಧಿತನಾಗಿರಬೇಕು. ವಿವಿಧ ವೃತ್ತಿಗಳ ಕಾರಕ ಗ್ರಹಗಳು ಈ ರೀತಿ ಇರುತ್ತಾರೆ.

*ಸೂರ್ಯ :* ದೊರೆಗಳು, ರಾಜಕೀಯ ಇಲಾಖೆಗಳ ಅಧಿಕಾರಿಗಳು, ಮಂತ್ರಿಗಳು, ದಂಡಾಧಿಕಾರಿಗಳು, ವಕೀಲರು, ಅಧಿಕಾರವರ್ಗದವರು ಸೂರ್ಯನು ಹತ್ತನೆ ಮನೆಗೆ ಅನ್ವಯವಾಗುವಂತೆ ಅನುಕೂಲವಾಗಿದ್ದರೆ ಮೇಲೆ ಸೂಚಿಸಿರುವ ವೃತ್ತಿಗಳನ್ನು ಕೊಡುತ್ತಾನೆ. ಚಂದ್ರ, ದಾದಿಯರು, ಸೂಲಗಿತ್ತಿಯರು, ಆಭರಣಕಾರರು, ಮುತ್ತು ಮತ್ತು ಪ್ರಶಸ್ತವಾದ ಲೋಹಗಳ ವ್ಯಾಪಾರಿಗಳು. ಸರಕಾರಿ ಚಟುವಟಿಕೆಗಳು.

*ಕುಜ* : ಸೈನಿಕರು, ಯೋಧರು, ಬಡಗಿಗಳು, ಯಂತ್ರಕಾರರು, ಮೋಜಣಿಯವರು, ರಾಸಾಯನಿಕರು, ಬ್ಯಾಂಕರುಗಳು, ಸೇನಾನಿಗಳು, ವಿಮಾ ಏಜೆಂಟರು, ಕಟುಕರು.

*ಬುಧ* : ಅಧ್ಯಾಪಕರು, ಉಪಾಧ್ಯಾಯರು, ಗಣಿತ ಶಾಸ್ತ್ರಜ್ಞರು, ಗ್ರಂಥಕರ್ತರು, ಮುದ್ರಣಕಾರರು, ಕಾರ್ಯವರ್ಗಿಗಳು, ಪುಸ್ತಕ ವ್ಯಾಪಾರಿಗಳು, ಲೆಕ್ಕಿಗರು.

*ಗುರು* : ಪುರೋಹಿತ, ಪೂಜಾರಿ, ವಕೀಲ, ಸಭಾಸದ, ನ್ಯಾಯಮೂರ್ತಿ, ಪಂಡಿತ, ಸಾರ್ವಜನಿಕ ವ್ಯಕ್ತಿ.

*ಶುಕ್ರ* : ಕಲಾವಿದರು, ಸಂಗೀತಗಾರರು, ನಟರು,ಸುಗಂಧ ದ್ರವ್ಯ ವ್ಯಾಪಾರಿಗಳು, ಅಭರಣಕಾರರು, ಮದ್ಯದ ವ್ಯಾಪಾರಿಗಳು, ಕುಶಾಗ್ರಮತಿಗಳಾದ ನ್ಯಾಯವಾದಿಗಳು.

*ಶನಿ* : ಜವಾಬ್ದಾರಿ ಮತ್ತು ಸೇವೆಗೆ ಸಂಬಂಧಿಸಿದ ವಿವಿಧ ವ್ಯಕ್ತಿಗಳು, ಗಿರಣಿ ಕಾರ್ಮಿಕರು, ಅಚ್ಚು ಮೊಳೆ ಜೋಡಿಸುವವರು, ಬೀದಿ ವ್ಯಾಪಾರಿಗಳು, ಕಾರ್ಖಾನೆ ಕೆಲಸಗಾರರು, ಜಾಡಮಾಲೆಗಳು ಸಾಧಾರಣವಾಗಿ ಎಲ್ಲ ಬಗೆಯ ಕೈ ದುಡಿಮೆಯವರು.

ಸಂಬಂಧಪಟ್ಟ ಗ್ರಹವು ಹತ್ತನೆ ಮನೆಯಲ್ಲಿ ಶುಭ ವೀಕ್ಷಿತನಾಗಿರಬಹುದು. ಯಾವ ವ್ಯಕ್ತಿ ಕಲಿಯಲೂ ಮಂಗಳವಾರ ಒಳ್ಳೆಯದಲ್ಲ.

*ಹನ್ನೆರಡನೆ ಅಧ್ಯಾಯ*

# ಮನೆ ಕಟ್ಟುವುದು

ಮನೆ ಕಟ್ಟಿಕೊಳ್ಳಬೇಕೆಂದು ಹುಟ್ಟು ಪ್ರೇರಣೆಯು ಸೃಷ್ಟಿಯ ಕಿರೀಟಪ್ರಾಯವಾದ ಮನುಷ್ಯನಲ್ಲಿ ಮಾತ್ರವಲ್ಲ, ಪ್ರಾಣಿವರ್ಗದಲ್ಲೂ ಇದೆ. ಜೇನು ಹುಳುವಿನ ಗೂಡು ಒಪ್ಪ ಓರಣಕ್ಕೂ ಗಣಿತದ ಕೌಶಲಕ್ಕೂ ಮಾದರಿಯಾಗಿರುತ್ತದೆ. ಗೆದ್ದಲು ಹುಳುಗಳು ಕಟ್ಟುವ ಹುತ್ತವು ದಾರ್ಢ್ಯಕ್ಕೆ ಪ್ರತೀಕ. ಈ ಮೂಲಪ್ರಾಯವಾದ ಸಹಜ ಚಾತುರ್ಯಕ್ಕೆ ಮನುಷ್ಯ ಹೊರತೇನೂ ಆಗಿಲ್ಲ. ಆದರೆ ದುರದೃಷ್ಟವಶಾತ್ ಮನುಷ್ಯನು ಜಂಭ, ದುರಹಂಕಾರಗಳಿಂದ ಮನೆ ಕಟ್ಟುವುದಕ್ಕೆ ತಕ್ಕ ನಿವೇಶನ ಹುಡುಕುವಷ್ಟೇ ಮತ್ತು ಕಟ್ಟಡದ ನಕ್ಷೆಯನ್ನು ತಯಾರಿಸುವಷ್ಟೇ ಮುಖ್ಯವಾದ ಜ್ಯೋತಿಷ ಅವಶ್ಯಕತೆಗಳಿಗೆ ಗಮನ ಪರ್ಯಾಲೋಚನೆಗಳನ್ನು ಕೊಡದೆ ಹೋಗಿದ್ದಾನೆ.

ಸಂಸ್ಕೃತದಲ್ಲಿ ಮನೆ ಕಟ್ಟುವುದು ವಾಸ್ತು ಶಾಸ್ತ್ರ ಎನಿಸುತ್ತದೆ. ಈ ಮುಖ್ಯ ವಿಷಯ ಕುರಿತು ಮಹರ್ಷಿಗಳು ಬರೆದಿಟ್ಟಿರುವ ಉಪಯುಕ್ತವಾದ ಸಾಹಿತ್ಯವು ಯಥೇಚ್ಛವಾಗಿದೆ. ಬಹು ಜನರ ಅನುಭವಕ್ಕೆ ಬಂದಿರುವ ವಿಷಯವೊಂದಿದೆ. ಮನೆ ಕಟ್ಟುವುದಕ್ಕೆ ಶ್ರೇಷ್ಠತಮರಾದ ವಾಸ್ತು ಶಿಲ್ಪಿಗಳು ತಮ್ಮ ಬುದ್ಧಿ ಚಾತುರ್ಯವನ್ನೆಲ್ಲ ವಿನಿಯೋಗಿಸಿದ್ದರೂ ಕೂಡ ಮನೆಯಲ್ಲಿ ಯಾವುದೋ ಒಂದು ಬಗೆಯ ಶೋಭೆಯಿಲ್ಲದೆ ಹೋಗಿ ಮನೆ ಕಟ್ಟಿದವನಿಗೆ ನೆಮ್ಮದಿ ಇಲ್ಲವಾಗುತ್ತದೆ. ಭಾರತದಲ್ಲಿ ಹೊರಗಿನ ನೋಟವು ಎಷ್ಟೇ ಆಕರ್ಷಕವಾಗಿದ್ದರೂ ಅದು ಜ್ಯೋತಿಷ ಶಾಸ್ತ್ರಾನುಸಾರವಾಗಿ ಕಟ್ಟಿದ ಮನೆಯು ಸಾಧಾರಣ ವರಮಾನವುಳ್ಳಂಥ ಮನೆ ಕಟ್ಟಿದವನಿಗೆ ಕೊಡುವ ಮನಸ್ಸಮಾಧಾನವನ್ನು ಕೊಡಲಾರದು. ಈ ಭಾವನೆ, ಈ ನಂಬಿಕೆ ಎಷ್ಟು ಪ್ರಬಲವಾಗಿದೆಯೆಂದರೆ, ಅತ್ಯಂತ ಸುಶಿಕ್ಷಿತನೂ ಸುಸಂಸ್ಕೃತನೂ ಎನಿಸಿದರೆ ಕೂಡ ಮನೆಗೆ ಅಡಿಪಾಯ ಹಾಕುವಾಗ ಬಾಗಿಲವಾಡವನ್ನು ನಿಲ್ಲಿಸುವಾಗ ಅಥವಾ ಗೃಹಪ್ರವೇಶ ಮಾಡುವಾಗ ಜ್ಯೋತಿಷ ಶಾಸ್ತ್ರಾನುಸಾರವಲ್ಲದೆ ವರ್ತಿಸುವ ಗೊಡವೆಗೆ ಹೋಗುವುದಿಲ್ಲ.

ಮನೆಯು ನೋಡಲು ಆಕರ್ಷಕವಾಗಿ, ಭವ್ಯವಾಗಿ ಹೊರನೋಟಕ್ಕೆ ಕಾಣಬಹುದು ಮತ್ತು ಒಳಗಡೆ ಎಲ್ಲ ನೈರ್ಮಲ್ಯ ಶಾಸ್ತ್ರದ ಪ್ರಕಾರವಾದ ಉಪಕರಣಗಳೂ ಇರಬಹುದು. ಇಲ್ಲಿ ಮನೆಯ ಹೊರಗಡೆಯ ಬಾಬುಗಳು – ಅದನ್ನು ನಾವು ಆಕೃತಿ ರಚನಾ ಶಾಸ್ತ್ರ ಎಂದು ಕರೆಯೋಣ ಎಲ್ಲ ಅಚ್ಚಳಿಯದೆ ಭದ್ರವಾಗಿರುತ್ತವೆ. ಆದರೆ ಒಳಗಡೆಯ ಅಂದರೆ ಅಂತರಂಗದ, ಮಾನಸಿಕ ಪ್ರಕರಣಗಳ ಮಾತು ಹೇಗೆ? ಪ್ರಕೃತಿಯಲ್ಲಿರುವ ಎಲ್ಲ ವಸ್ತುಗಳೂ ವಿಶ್ವ ಶಕ್ತಿಯನ್ನು ವಿಸರಣಗೊಳಿಸುವ ಸಾಮರ್ಥ್ಯ ಪಡೆದಿರುತ್ತವೆ. ಮನೆಯ ಕಟ್ಟಡಕ್ಕೆ ಸಂಗ್ರಹಿಸಿದ ಸಾಮಾನುಗಳೂ ಮನೆಯ ಕಟ್ಟಡ ಪ್ರಾರಂಭಕಾರ್ಯವೂ ಕೂಡ ಅಂಥ ಅಗೋಚರ ಶಕ್ತಿಗಳನ್ನು ಹೊರಹೊಮ್ಮತ್ತವೆ. ಈ ಎಲ್ಲ ಶಕ್ತಿ ಪರಂಪರೆಯ ಸಂಗಮ ರೂಪದ ಪ್ರತಿಕ್ರಿಯೆಗಳಿಗೆ ಹೋಲಿಕೆಯಾಗುವಂತೆ ಗೊತ್ತು ಮಾಡಿಕೊಂಡ ಮುಹೂರ್ತವು ತನ್ನದೇ ಆದ ವಿಸರಣಗಳನ್ನು ಹೊರಗೆಡುಹುವಂತಾಗಿರಬೇಕು. ನಮ್ಮ ಪ್ರಾಚೀನ ಮಹರ್ಷಿಗಳು ಮನುಷ್ಯನಿಗೂ ವಸ್ತುಗಳಿಗೂ ನಡುವೆ ಇಂಥ ಶಕ್ತಿಗಳ ಅನ್ಯೋನ್ಯ ಪ್ರಕ್ರಿಯೆಯು ನಡೆಯುತ್ತವೆಂದು ಮನಗಂಡಿದ್ದು ಅವರ ಪ್ರಾಮುಖ್ಯವನ್ನು ಗಮನಿಸಿದ್ದರು. ಆದರೆ ಇದರ ಯಥಾರ್ಥತೆಯನ್ನು ಪ್ರದರ್ಶಿಸುವ ಪ್ರಾಪ್ತಿಯು ರಷ್ಯದ ವಿಜ್ಞಾನಿ ಜಾರ್ಜಸ್ ಲಾಖೋನಸ್ಕಿಯವರ ಪಾಲಿಗೆ ಬಂದಿತ್ತು.

ಪ್ರಕೃತಿಯಲ್ಲಿರುವ ಎಲ್ಲ ವಸ್ತುಗಳೂ – ಅವು ಲೋಹ ಸಸ್ಯ ಪ್ರಾಣಿ ಯಾವುದೇ ಆಗಿರಲಿ ಸೌರ ಕಿರಣಗಳ ಪ್ರಭಾವದಿಂದಲೂ ಆ ಕಿರಣಗಳ ವಿವಿಧ ರೂಪಾಂತರಗಳಿಂದಲೂ ಉದ್ಭವವಾಗಿ ವಿನಾಶಗೊಳ್ಳುತ್ತವೆ. ಹಲವಾರು ಭವ್ಯ ಭವನಗಳು ಒಬ್ಬ ವ್ಯಕ್ತಿಯ, ಒಂದು ಸಮುದಾಯದ ಇಲ್ಲವೆ ಒಂದು ರಾಷ್ಟ್ರದ ಉಪಯೋಗಕ್ಕೆಂದು ಉದ್ದಿಷ್ಟವಾಗಿದ್ದರೂ ಸಂಬಂಧಪಟ್ಟವರ ವಿನಾಶಕ್ಕೆ ಕಾರಣವಾಗುತ್ತವೆ. ಈ ಯೋಜನೆ ಪ್ರವರ್ತಕರಿಗೆ ಈ ಕಟ್ಟಡಗಳು ಹಾನಿಯನ್ನುಂಟು ಮಾಡಿದ್ದರೂ, ಇವುಗಳ ನಿರ್ಮಾಣ ಕಾರ್ಯದಲ್ಲಿ ವಾಸ್ತುಶಿಲ್ಪದ ಚಾತುರ್ಯ, ನೈಪುಣ್ಯವನ್ನು ವಿನಿಯೋಗಿಸಿರಲಿಲ್ಲ ಎಂದು ಹೇಳುವುದಕ್ಕೆ ಆಗುವುದಿಲ್ಲ. ಇಂಥ ನಿರ್ಮಾಣ ಕಾರ್ಯಕ್ಕಾಗಿ ಅಗಾಧ ಪ್ರಮಾಣದಲ್ಲಿ ಹಣವನ್ನು ಖರ್ಚು ಮಾಡುತ್ತಾರಾಗಿ, ವಾಸ್ತುಶಿಲ್ಪ ವಿಜ್ಞಾನದಲ್ಲಿ ಉತ್ಕೃಷ್ಟರೆನಿಸಿದ ಪ್ರಾಜ್ಞರಿಂದಲೇ ತಕ್ಕ ಸಲಹೆಗಳನ್ನು ಪಡೆದುಕೊಂಡಿರುತ್ತಾರೆಂದು ಇಟ್ಟುಕೊಳ್ಳಬಹುದು. ಮತ್ತು ಯುಕ್ತವಾದ ನಿರ್ಮಾಣ ವಸ್ತುಗಳ ಸಂಗ್ರಹಣೆಯಲ್ಲಿ ಅತ್ಯಂತ ಜಾಕರೂಕತೆಯನ್ನೇ ವಹಿಸಿರುತ್ತಾರೆಂದೂ ಭಾವಿಸಬಹುದು. ಶ್ರೇಷ್ಠವಾದ ತಜ್ಞತೆಯನ್ನೂ, ವಸ್ತುಗಳನ್ನು

ಬಳಸಿಕೊಂಡಿರುವಾಗ, ಪರಿಣಾಮವೂ ಅತ್ಯಂತ ತೃಪ್ತಿಕರವಾಗಿರುತ್ತದೆಂದು ಅಂದುಕೊಳ್ಳಬಹುದು.

ಆದರೆ ಪರಿಸ್ಥಿತಿಯಾದರೂ ಯಾವುದು? ಕೆಲವು ಕಟ್ಟಡಗಳು ಕಾಲದ ವಿಧ್ವಂಸನಕ್ಕೆ ಒಳಗಾಗದೆ ಉಳಿದಿರುತ್ತವೆ. ಕೆಲವು ಹೊಸದರಲ್ಲಿ ಕುಸಿದುಬೀಳುತ್ತವೆ. ಕೆಲವು ಮಾಲಿಕನಿಗೆ ಭಾಗ್ಯ ತಂದುಕೊಡುತ್ತವೆ. ಕೆಲವು ಕಾಟ ಕೋಟಲೆಗಳನ್ನು ಕಡೆಗೆ ವಿಧ್ವಂಸನವನ್ನೂ ಕೊಡುತ್ತವೆ. ಕೆಲವು ಕಟ್ಟಡಗಳು ಕ್ರೂರ ವಿಜೇತರ ವಿಧ್ವಂಸನದಿಂದ ಪಾರಾಗಿದ್ದರೂ ಅವುಗಳಿಗೆ ಸಮೀಪವಾಗಿಯೇ ಇರುವ, ಅವುಗಳ ಅಂಗಭಾಗವಾಗಿರುವ ಕಟ್ಟಡಗಳು ಅಸಾಧಾರಣವಾದ ಸಂದರ್ಭಗಳಲ್ಲಿ ನಿಪಾತಗೊಳ್ಳುತ್ತವೆ. ಯಾವುದೇ ಕಟ್ಟಡದ ಬಾಳಿನಲ್ಲಿ ಉನ್ನತಿ ಅವನತಿಗಳ ಈ ವ್ಯತ್ಯಾಸಗಳಾಗಲು ಯಾವುದೋ ಕಾರಣವಿರಬೇಕಷ್ಟೆ. ಆ ಕಾರಣಗಳು ಯಾವುವು ಎಂಬುದನ್ನು ನಾವು ಯಾದೃಶ್ಚವಾದ ಕಲ್ಪನೆ ಮತ್ತು ವಿವಾದ ಮುಂತಾದ ತೋರಿಕೆಯ ಮುಖವಾಡಗಳಿಂದ ಮಾರು ಹೋಗದೆ ಆಳವಾಗಿ ಅನ್ವೇಷಿಸಬೇಕು. ಇವುಗಳಿಗೆ ಸಮಾಧಾನಗಳು ಮಹರ್ಷಿಪ್ರೋಕ್ತವಾದ ಜ್ಯೋತಿಷ ಮಹಾ ಶಾಸ್ತ್ರ ಗ್ರಂಥಗಳಲ್ಲಿ ಸಿಗುತ್ತವೆ.

ಕಟ್ಟಡದ ಕೆಲಸವನ್ನು ನಿರ್ಮಾಣ ವಸ್ತುಗಳ ಸತ್ವವು ಯಥೇಚ್ಛವಾಗಿರುವ ವೇಳೆಯಲ್ಲಿ ಪ್ರಾರಂಭಿಸಿದ್ದೆ ಆದರೆ – ಇದನ್ನು ಜ್ಯೋತಿಷದ ಶಾಸ್ತ್ರ ಪ್ರಕಾರ ಗೊತ್ತುಪಡಿಸಿಕೊಳ್ಳಬಹುದು ಅಂದರೆ ಅಂಟಿಕೊಳ್ಳುವುದು, ಬದ್ಧರಾಗುವುದು ಮತ್ತು ರಾಸಾಯನಿಕ ಸಂಯೋಗ ಕ್ರಿಯಾ ಶಕ್ತಿಗಳ ವಿರುದ್ಧವಾಗಿ ಪರಿಣಮಿಸುವ ಶಕ್ತಿಗಳನ್ನು ಭಚಕ್ರದ ಮತ್ತು ನಕ್ಷತ್ರ ಮಂಡಲಗಳ ಪ್ರಭಾವಗಳಿಂದ ನಿಷ್ಫಲಗೊಳಿಸಬಹುದಾದ ಮತ್ತು ಕಾಂತಶಕ್ತಿಯ ಪ್ರವಾಹಗಳು ವಸ್ತುಗಳ ದಾರ್ಢ್ಯಕ್ಕೂ ಅಖಂಡತೆಗೂ ಅನುಗುಣವಾಗಿರುವಾಗ ಪ್ರಾರಂಭಿಸಿದರೆ , ಅಂಥ ಕಟ್ಟಡಗಳು ಏಳಿಗೆಯಾಗುತ್ತವೆ ಎಂದು ಹೇಳುತ್ತಾರೆ.

ಈ ಸ್ವಾರಸ್ಯವಾದ ವಿಷಯವನ್ನು ಕುರಿತ ಜ್ಯೋತಿಷ್ಯದ ಒಂದು ಭಾಗವೇ ಇದೆ. ಅದೇ ವಾಸ್ತು ಶಾಸ್ತ್ರ. ನಿರ್ಮಾಣವಾಗುವ ಕಟ್ಟಡಗಳು ಏಳಿಗೆಗೆ ಬರುವಂತೆ ಮಾಡತಕ್ಕ ವಿಷಯವನ್ನು ಅದು ಕುರಿತದ್ದು. ಕಾಲ ಪುರುಷನ ಮಹಿಮೆಯು ಸುಸ್ಪಷ್ಟವಾಗಿದೆ. ಈ ಮಹಿಮೆಯ ಕಾರಣದಿಂದಾಗಿಯೇ ಕಟ್ಟಡಗಳು ಸುರಕ್ಷಿತವಾಗಿರುತ್ತವೆ ಇಲ್ಲವೆ ಪಾಳು ಬೀಳುತ್ತವೆ. ಜೀರ್ಣವಾಗುತ್ತವೆ, ಅಚ್ಚಳಿಯದೆ ಉಳಿದಿರುತ್ತವೆ. ಅವುಗಳಲ್ಲಿ ಅಧಿಪತಿಗಳು ವಾಸಿಸುತ್ತಾರೆ, ಗೂಬೆಗಳೇ ಮುಂತಾದ

ಅಮಂಗಳಕರ ಪಕ್ಷಿಗಳು ಬಂದು ಸೇರಿಕೊಳ್ಳುತ್ತವೆ. ಮಣ್ಣಿನಿಂದ, ಮರಳಿನಿಂದ ಮುಚ್ಚಿಹೋಗುತ್ತವೆ. ಹಲವಾರು ತಲೆಮಾರುಗಳ ತರುವಾಯ ನಶಿಸಿಹೋದ ನಾಗರಿಕತೆಗೆ ಗತಿಸಿಹೋದ ಸಮಾಜಗಳಿಗೆ ಸಾಕ್ಷ್ಯವೊದಗಿಸುವ ಪುರಾತನ ವಸ್ತುಗಳಾಗುತ್ತವೆ. ಮತ್ತು ಅವುಗಳ ನಿರ್ಮಾಣಕಾರ್ಯವನ್ನು ಕಲ್ಪಿಸಿಕೊಂಡ ಅಲ್ಪಮತಿಗಳಿಗೆ ಸಾಕ್ಷ್ಯವಾಗಿ ಉಳಿಯುತ್ತವೆ.

ಪ್ರಾರಂಭ ಕಾಲದಲ್ಲಿದ್ದ ಗ್ರಹಗಳ ಪರಿಸ್ಥಿತಿ, ನಕ್ಷತ್ರಗಳ ಬಲಾಬಲಗಳು ಚಂಚಲ ಚಂದ್ರನ ವೃದ್ಧಿಕ್ಷಯಗಳು, ನಿರ್ಮಾಣವನ್ನು ನಿಯೋಜಿಸಿದವನ ಉನ್ನತಿ ಅವನತಿ, ಗುದ್ದಲಿಪೂಜೆ ಮಾಡಿದ ಮನೆಯಾತನ ಅದೃಷ್ಟ ಇವೆಲ್ಲ ತಂತಮ್ಮ ಪ್ರಭಾವ ಬೀರುತ್ತವೆ.

ಮನೆ ಕಟ್ಟುವ ಮುಖ್ಯಸ್ಥನ ಮೋಹಕ ಶಕ್ತಿಯು ಕಟ್ಟಡದ ಬಾಳಿಕೆ ಏಳಿಗೆಗಳಿಗೆ ಬಹು ಮಟ್ಟಿಗೆ ಕಾರಣ. ಅವನ ಆತ್ಮಸಂಪದವೂ ಆ ಕಟ್ಟಡದಿಂದ ಪ್ರಯೋಜನ ಪಡೆಯಕೊಳ್ಳುವ ಸಮುದಾಯಕ್ಕೆ ಇದೇ ರೀತಿಯ ಸಂಬಂಧವನ್ನು ಪಡೆದಿರುತ್ತದೆ. ರಾಜನಾಗಲಿ ರಾಜ್ಯಪಾಲನಾಗಲಿ ರಾಜ್ಯಾಧ್ಯಕ್ಷನಾಗಲಿ ಹೊಸ ಸಂಸ್ಥೆಯ ಉದ್ಘಾಟನೆಯನ್ನು ಮಾಡಬೇಕೆಂದೂ, ವಿಗ್ರಹದ ಅನಾವರಣ ಮಾಡಬೇಕೆಂದೋ, ಭವನಗಳ ಅಸ್ತಿಭಾರ ಶಿವಸ್ಥಾಪನೆ ಮಾಡಬೇಕೆಂದೋ ಯಾವುದೋ ಉದ್ಯಮಕ್ಕೆ ಗುದ್ದಲಿ ಪೂಜೆ ಮಾಡಬೇಕೆಂದೋ ಅಪೇಕ್ಷಿಸುವುದು ಕೇವಲ ಕಂದಾಚಾರವೇ ಅಲ್ಲ, ಮೂಢನಂಬಿಕೆಯೇ ಅಲ್ಲ. ಜ್ಯೋತಿಷದ ಮಾತಿರಲಿ ಈ ಎಲ್ಲ ಕೆಲಸಗಳೂ ನಮ್ರರಾದ ಕೂಲಿಗಳು, ನ್ಯಾಯಸಮ್ಮತವಾಗಿ ಮಾಡಬೇಕಾದದ್ದು. ಜ್ಯೋತಿಷವು ನಿರಾಧಾರವಾದಲ್ಲಿ ಅದೃಷ್ಟವೆಂಬುದಕ್ಕೆ ಯಾವ ಪ್ರಭಾವವೂ ಇಲ್ಲವಾದ ಪಕ್ಷದಲ್ಲಿ ಅತ್ಯಂತ ಪ್ರಬುದ್ಧವಾದ ರಾಷ್ಟ್ರಗಳು ಕೂಡ ಅಂಥ ಸಮಾರಂಭಗಳ ಪ್ರಾರಂಭೋತ್ಸವ ನೆರವೇರಿಸಲು ಅತ್ಯಂತ ಅದೃಷ್ಟಶಾಲಿಯಾದ ಮನುಷ್ಯರನ್ನೇಕಾದರೂ ಆಹ್ವಾನಿಸುತ್ತಾರೆ?

ಮೂಲೆ ಕಲ್ಲಿಡುವುದು ಅಥವಾ ಪಾಯವನ್ನು ತೋಡುವುದು ದೊಡ್ಡವನೆನಿಸಿಕೊಂಡ ಯಾವ ಮನುಷ್ಯನೂ ಕ್ರಮಾನುಸಾರ ಮಾಡಬೇಕಾದ ಕೆಲಸವೇನಲ್ಲ. ಅದಕ್ಕೆ ಪ್ರತಿಯಾಗಿ ಸಾಧಾರಣವಾಗಿ ಸ್ಥಳದಲ್ಲಿರುವ ಕಾರ್ಮಿಕ ಮಾಡತಕ್ಕದ್ದು. ಪ್ರಪಂಚದಲ್ಲಿ ಅತ್ಯುನ್ನತ ನಾಗರಿಕತೆ ಪಡೆದ ರಾಷ್ಟ್ರಗಳೆನಿಸಿಕೊಳ್ಳುವುವು. ಅದೃಷ್ಟ ಎಂಬ ಅಸಂಬದ್ಧ ಪ್ರಸಂಗವನ್ನು

ನಂಬದೇ ಹೋಗುವ ಪಕ್ಷಕ್ಕೆ ಜ್ಯೋತಿಷದಲ್ಲಿ ನಂಬಿಕೆ ಪಡೆಯದೆ ಇರುವ ಪಕ್ಷಕ್ಕೆ ಇಂಥ ಮೂರ್ಖ ಸಮಾರಂಭಗಳನ್ನು ಕೈಕೊಂಡು ಹೆಡ್ಡರೆನಿಸಿಕೊಳ್ಳದೆ ಇರಬಹುದಲ್ಲ!

ಜನರು ನಾಟಾ ಅಲ್ಲ – ಹೇಳುವುದೊಂದು ಮಾಡುವುದೊಂದು. ಜ್ಯೋತಿಷ ವಿಜ್ಞಾನದಲ್ಲಿ ಅವರಿಗೆ ನಂಬಿಕೆಯೇ ಇಲ್ಲವಾದರೆ ಅಜ್ಞರಾದ ಕಂದಾಚಾರದ ಜನತೆಯ ಮೇಲೆ ಇಂಥ ಮರುಳಾಟಗಳನ್ನು ಪ್ರಯೋಗಿಸದೆ ಇರಲಿ.

ಮುಹೂರ್ತ ಎಂದರೆ ವಿವಿಧ ಗ್ರಹ ಪ್ರಭಾವಗಳ ಶುಭ ಸಂಗಮ. ಅಂಥ ವೇಳೆಯಲ್ಲಿ ಕಾರ್ಯಾರಂಭ ಮಾಡುವ ಮುನ್ನ ಮಾಡುವ ಪೂಜೆ ಪುನಸ್ಕಾರಗಳು ಕಟ್ಟಲಿರುವ ಕಟ್ಟಡಕ್ಕೆ ಇರಬಹುದಾದ ಅನಿಷ್ಟಗಳ ನಿವಾರಣೋಪಾಯಕ್ಕೆ ಸಂಬಂಧಿಸಿದವು.

ವಾಸ್ತುಶಿಲ್ಪಕ್ಕೆ ಅನ್ವಯವಾಗುವ ಜ್ಯೋತಿಷ ಶಾಸ್ತ್ರಕ್ಕೆ ವಾಸ್ತು ಶಾಸ್ತ್ರವೆನ್ನುತ್ತಾರೆ. ಅವನ್ನು ಆಧುನಿಕ ಶಿಲ್ಪಿಗಳು ಆಳವಾಗಿ ಅಭ್ಯಾಸ ಮಾಡುವುದು ಉಚಿತ.

ಜ್ಯೋತಿಷ ಶಾಸ್ತ್ರದ ಪ್ರಕಾರ ಮನೆಯನ್ನು ಕಟ್ಟುವ ಕೆಲಸಕ್ಕೆ ನಾಲ್ಕು ಹಂತಗಳಿವೆ. (1) ಪಾಯ ಹಾಕುವುದು (2) ಭಾವಿ ತೋಡುವುದು (3) ಬಾಗಿಲವಾಡಗಳನ್ನು ಇಡುವುದು ಮತ್ತು (4) ಗೃಹಪ್ರವೇಶ. ಈ ನಾಲ್ಕರ ಪೈಕಿ ಮೊದಲನೆಯದು ಕಡೆಯದು ತುಂಬ ಮುಖ್ಯ, ಮಹತ್ವಪೂರ್ಣ.

**ಪಾಯ ಹಾಕುವುದು** : ಪ್ರಾಚೀನ ಜ್ಯೋತಿಷಾಚಾರ್ಯ ಪ್ರಕಾರ, ಕಾಲಪುರುಷ ಕಾಲದ ಮೂರ್ತಿ ಸ್ವರೂಪ. ವಸ್ತುಪುರುಷ ಮನೆಯ ಮೂರ್ತಿಸ್ವರೂಪ ವಸ್ತುಪುರುಷ ಮನೆಯ ಮೂರ್ತಿಸ್ವರೂಪ. ವಾಸ್ತುಪುರುಷನು ಎಡಮಗ್ಗುಲಲ್ಲಿ ಮಲಗಿ, ಪೂರ್ವದ ಕಡೆಗೆ ತಲೆಯಿಟ್ಟುಕೊಂಡು ಮಲಗುತ್ತಾನೆನ್ನುತ್ತಾರೆ. ಈ ಮೂರು ತಿಂಗಳಲ್ಲಿ: ಭಾದ್ರಪದ, ಅಶ್ವಯುಜ, ಕಾರ್ತೀಕ (ಆಗಸ್ಟ – ಅಕ್ಟೋಬರ್) ದಕ್ಷಿಣದ ಕಡೆಗೆ ತಲೆಯಿಟ್ಟುಕೊಂಡು ಮಾರ್ಗಶಿರ ಪುಷ್ಯ ಮಾಘ (ನವೆಂಬರ್–ಫೆಬ್ರವರಿ) ಮಾಸಗಳಲ್ಲಿ ಮಲಗುತ್ತಾನಂತೆ. ಪಶ್ಚಿಮಕ್ಕೆ ತಲೆಯಿಟ್ಟುಕೊಂಡು ಫಾಲ್ಗುಣ, ಚೈತ್ರ, ವೈಶಾಖ (ಫೆಬ್ರವರಿ–ಮೇ) ಮಾಸಗಳಲ್ಲಿ ಮಲಗುತ್ತಾನಂತೆ. ಉತ್ತರದ ಕಡೆಗೆ ತಲೆಯಿಟ್ಟುಕೊಂಡು ಜ್ಯೇಷ್ಠ, ಆಷಾಢ, ಶ್ರಾವಣ (ಮೇ–ಆಗಸ್ಟ) ಮಾಸಗಳಲ್ಲಿ ಮಲಗುತ್ತಾನಂತೆ. ವಾಸ್ತು ಪುರುಷನು ಮಲಗಿರುವಾಗ ಅವನ ತಲೆ ಕಾಲು ಕೈ ಬೆನ್ನು ಯಾವ ಭಾಗವನ್ನು ಮುಚ್ಚಿರುತ್ತದೆಯೋ ಆ ಭೂಭಾಗದಲ್ಲಿ ಮನೆಯನ್ನು ಕಟ್ಟಕೂಡದು. ಕಟ್ಟಿದರೆ ಕ್ರಮವಾಗಿ ತಂದೆಗೆ ಹೆಂಡತಿಗೆ ಮಕ್ಕಳಿಗೆ ಹಾನಿ. ಮತ್ತು ಕಳ್ಳರ ಭೀತಿಯನ್ನು ಉಂಟುಮಾಡುತ್ತದೆ. ಕಟ್ಟಡಕ್ಕೆ ಶ್ರೇಷ್ಠವಾದ ಭಾಗವೆಂದರೆ ವಾಸ್ತು ಪುರುಷನ

ಹೊಟ್ಟೆ ಮುಚ್ಚಿರುವ ಭೂಮಿಯ ಭಾಗ. ಆದರಿಂದ ಸಂಪತ್ಸಮೃದ್ಧಿಗಳು ಉಂಟಾಗುತ್ತವೆ. ಮನೆ ಕಟ್ಟುವ ಕೆಲಸವನ್ನು ಜ್ಯೇಷ್ಠ, ಆಷಾಢ, ಭಾದ್ರಪದ, ಅಶ್ವಯುಜ, ಮಾರ್ಗಶಿರ, ಪುಷ್ಯ, ಫಾಲ್ಗುಣ ಮಾಸಗಳಲ್ಲಿ ಪ್ರಾರಂಭಿಸಬಾರದು. ಪ್ರಾರಂಭಿಸಿದರೆ ಕ್ರಮವಾಗಿ ಸಾವು, ವಿನಾಶ, ರೋಗ, ವ್ಯಾಜ್ಯ, ವೈಮನಸ್ಸು, ಆಸ್ತಿ ನಷ್ಟ, ಅಗ್ನಿಭಯ, ದೇಹಕ್ಕೆ ಅಪಾಯ ಸೂಚಿಸುತ್ತವೆ. ಚೈತ್ರ ವೈಶಾಖ ಶ್ರಾವಣ ಕಾರ್ತಿಕ ಮಾಘಮಾಸಗಳು ಉತ್ಕೃಷ್ಟ. ರವಿಯು ಸ್ಥಿರರಾಶಿಯಲ್ಲಿರಬೇಕು. ಕಡೆಯ ಪಕ್ಷ ಚರರಾಶಿಯಲ್ಲಿರಬೇಕು. ರವಿಯು ಉಭಯ ರಾಶಿಯಲ್ಲಿರುವಾಗ ಕಟ್ಟಡದ ಕೆಲಸವನ್ನು ಕೈಗೊಳ್ಳಲೇಬಾರದು. ರೋಹಿಣಿ ಮೃಗಶಿರ ಚಿತ್ತ ಹಸ್ತ ಜ್ಯೇಷ್ಠ ಉತ್ತರ ಉತ್ತರಾಷಾಢ ಶ್ರವಣ ಇವು ಪಾಯ ಹಾಕುವುದಕ್ಕೆ ಶ್ರೇಷ್ಠವಾದ ನಕ್ಷತ್ರಗಳು. ಸ್ವಾತಿ ಪುಷ್ಯ ಅನೂರಾಧ ಅಶ್ವಿನಿ ಶತಭಿಷ ಉತ್ತರಾಭಾದ್ರ ಮತ್ತು ರೇವತಿ ಸಾಧಾರಣ ಅಥವಾ ಮಧ್ಯಸ್ಥ. ಉಳಿದ ಹನ್ನೆರಡು ನಕ್ಷತ್ರಗಳನ್ನು ತಪ್ಪದೆ ಮಾಡತಕ್ಕದ್ದು.

ಎಲ್ಲ ಬೆಸ ಸಂಖ್ಯೆಯ ತಿಥಿಗಳೂ, ನವಮಿಯನ್ನು ವಿನಾಯಿಸಿ, ಒಳ್ಳೆಯವು . ಸಮ ಸಂಖ್ಯೆಯ ತಿಥಿಗಳ ಪೈಕಿ ಬಿದಿಗೆ ಷಷ್ಠಿ ದಶಮಿಗಳು ಶುಭಕರ. ಸೋಮವಾರ ಬುಧವಾರ ಗುರುವಾರ ಮತ್ತು ಶುಕ್ರವಾರ ಉತ್ಕೃಷ್ಟ. ಚಂದ್ರನು ಕ್ಷೀಣಿಸುವಾಗ ಸೋಮವಾರವೂ ತ್ಯಾಜ್ಯ. ಕೆಲವರು ಭಾನುವಾರ ಶನಿವಾರಗಳನ್ನು ಮನ್ನಿಸುತ್ತಾರೆ. ಆದರೆ ನಮ್ಮ ಅಭಿಪ್ರಾಯದಲ್ಲಿ ಶನಿವಾರವನ್ನು ಬಿಡಬೇಕು. ಏಕೆಂದರೆ ಅದು ಪದೇ ಪದೇ ಕಳ್ಳತನವಾಗುವುದನ್ನು ಸೂಚಿಸುತ್ತದೆ. ಭಾನುವಾರವನ್ನು ಕೂಡ ಬಿಡತಕ್ಕುದೆ ಆದರೆ ಬೇರೆ ರೀತಿಯಲ್ಲಿ ಅದು ಶುಭವಾಗಿದ್ದರೆ ಬಾಧಕವಿಲ್ಲ.

ಸ್ಥಿರ ರಾಶಿಗಳು ಉತ್ತಮ. ಚರ ರಾಶಿಗಳನ್ನು ಬಿಡತಕ್ಕದು. ಉಭಯರಾಶಿಗಳಲ್ಲಿ ಪ್ರಬಲರಾದ ಶುಭರಿದ್ದರೆ ಅವೂ ಮಾನ್ಯವೇ. ಚರ ರಾಶಿಗಳಲ್ಲಿ ಸ್ಥಿರ ನವಾಂಶಗಳನ್ನು ತ್ವರಿತ ಪ್ರಸಂಗಗಳಲ್ಲಿ ಗಣನೆ ಮಾಡಬಹುದು. ಅಂದರೆ ಇತರೆ ಎಲ್ಲ ಜ್ಯೋತಿಷಿಕ ಆವಶ್ಯಕತೆಗಳೂ ಪೂರೈಕೆಯಾಗುವಂತಿರಬೇಕು. ಅಡಿಪಾಯ ಹಾಕುವ ಮುಹೂರ್ತದಲ್ಲಿ ಲಗ್ನವು ಮೂರನೆ ಆರನೆ ಹನ್ನೊಂದನೆ ಮನೆಗಳಲ್ಲಿ ಅಶುಭರನ್ನು ಹೊಂದಿದ್ದು ಹತ್ತು ಶುಭಗ್ರಹಗಳನ್ನು ಕೇಂದ್ರದಲ್ಲೋ ಕೋಣದಲ್ಲೋ ಹೊಂದಿದ್ದು ಬಲಯುತವಾಗಿರಬೇಕು. ಎಂಟನೆ ಮನೆಯು ತೆರಪಾಗಿರಬೇಕು. ಯಾವ ಸಂದರ್ಭದಲ್ಲೂ ಅದಕ್ಕೆ ಅಶುಭ ದೃಷ್ಟಿಯಿರಬಾರದು.

ಅಡಿಪಾಯವನ್ನು ಹಾಕುವುದಕ್ಕೆ ಉತ್ಕೃಷ್ಟವೆಂದು ಕೆಲವು ವಿಶೇಷ ಯೋಗಗಳನ್ನು ಪ್ರಾಚೀನ ಶಾಸ್ತ್ರಕಾರರು ಅನುಮೋದನೆ ಮಾಡಿದ್ದಾರೆ. ಅದರಿಂದ ಮನೆಯ

ಮಾಲಿಕನಿಗೂ ಆ ಮನೆಯಲ್ಲಿ ವಾಸ ಮಾಡುವವರಿಗೂ ಸುಖ ಸಂಪದಗಳುಂಟಾಗಿ ಮನೆಯು ದೀರ್ಘಕಾಲ ಬಾಳುವಂತೆ ಆಗಬೇಕೆಂಬುದು ಅವರ ಅಭಿಮತ. ಆ ವಿಶೇಷ ಯೋಗಗಳು ಹೀಗಿವೆ:

ಕಟಕದಲ್ಲಿ ಅಡಿಪಾಯ, ಮಿಥುನ ಅಥವಾ ಕನ್ಯೆಯಲ್ಲಿ ಕಟ್ಟಡ, ವೃಷಭ ಅಥವಾ ತುಲಾದಲ್ಲಿ ಚಾವಣಿ ಹಾಕಬೇಕು. ಮನೆಗೆ ಅಗ್ನಿಭಯವಿರುವುದಿಲ್ಲ. ಗುರುವೋ ಶುಕ್ರನೋ ಲಗ್ನದಲ್ಲಿರುವಾಗ ಮತ್ತು ರವಿಯು ನಡು ಮಧ್ಯಾಹ್ನದಲ್ಲೋ ಪಶ್ಚಿಮ ದಿಗಂತದಲ್ಲೋ ಇರುವಾಗ ಕಟ್ಟಿದ ಮನೆಯು ಕಡೆಯ ಪಕ್ಷ ನೂರು ವರ್ಷ ಕಾಲವಾದರೂ ಬಾಳಿಕೆ ಬರುತ್ತದೆಂದು ನಂಬಿಕೆ.

ಹತ್ತನೆ ಮನೆಯಲ್ಲಿ ಚಂದ್ರ, ನಾಲ್ಕರಲ್ಲಿ ಗುರು ಹನ್ನೊಂದರಲ್ಲಿ ಕುಜ ಮತ್ತು ಶನಿ ಇರುವಾಗ, ಹೊಸ ಮನೆಯಲ್ಲಿ ವಾಸವನ್ನು ಪ್ರಾರಂಭಿಸಿದರೆ ಆ ಕಟ್ಟಡ ಕಡೆಯ ಪಕ್ಷ ಎಂಭತ್ತು ವರ್ಷಗಳ ಕಾಲವಾದರೂ ಹಾಳಾಗದೆ ಉಳಿಯುತ್ತದೆ.

ಲಗ್ನದಲ್ಲಿ ಗುರು, ಏಳರಲ್ಲಿ ಬುಧ, ಮೂರರಲ್ಲಿ ಶನಿ, ರವಿ ಶುಕ್ರರು ಆರರಲ್ಲಿ ಇದ್ದರೆ ಮನೆಯು ಶತಮಾನ ಕಾಲ ನಿಲ್ಲುತ್ತದೆ.

ಬುಧನು ಲಗ್ನದಲ್ಲಿರುವಾಗ ಗುರುವು ಏಳರಲ್ಲೂ ಚಂದ್ರ ಹತ್ತರಲ್ಲೂ ಇದ್ದರೆ, ಅಂಥದೇ ಸ್ಥಿರತೆಯು ಸಂಚಿತವಾಗುತ್ತದೆ.

ಪೂಜೆಯ ತರುವಾಯ ನಿವೇಶನದ ಈಶಾನ್ಯ ಮೂಲೆಯಲ್ಲಿ ಶಿಲಾನ್ಯಾಸ ಮಾಡತಕ್ಕದೆಂದು ವರಾಹ ಮಿಹಿರಾಚಾರ್ಯರು ಹೇಳುತ್ತಾರೆ.

*ಬಾಗಿಲವಾಡವನ್ನು ಇಡುವುದು:* ಬಾಗಿಲವಾಡಗಳನ್ನು ಸ್ಥಾಪಿಸುವುದಕ್ಕೆ ಹಿಂದುಗಳು ವಿಶೇಷ ಪ್ರಾಮುಖ್ಯ ಕೊಡುತ್ತಾರೆ. ಇವತ್ತೂ ಕೂಡ ಸುಶಿಕ್ಷಿತ ನೆನೆಸಿಕೊಂಡವರು ಬಹಿರಂಗವಾಗಿ ಜ್ಯೋತಿಷವನ್ನು ಹಳಿದರೂ ಕೂಡ ಗುಟ್ಟನಲ್ಲಿ ಬಂದು ಜ್ಯೋತಿಷಿಯ ಸಲಹೆ ಪಡೆದುಕೊಂಡು ಶುಭ ವೇಳೆಯಲ್ಲಿ ಬಾಗಿಲವಾಡಗಳನ್ನು ಸ್ಥಾಪಿಸುತ್ತಾನೆ. ಬಹುಶಃ ಈ ಬಾಗಿಲವಾಡಗಳು ಸುಮುಹೂರ್ತದಲ್ಲಿ ಸ್ಥಾಪಿಸಲ್ಪಟ್ಟರೆ ವಾತವರಣದಿಂದ ಉತ್ಕೃಷ್ಟವಾದ ವಿದ್ಯುತ್ ಮತ್ತು ಕಾಂತ ಶಕ್ತಿಗಳನ್ನು ಆಕರ್ಷಿಸಿಕೊಳ್ಳುವ ವಿಶೇಷಣವನ್ನು ಪಡೆದುಕೊಂಡಿರುತ್ತವೆಂದು ಕಾಣುತ್ತದೆ. ಅಂಥ ಸುಮುಹೂರ್ತದಲ್ಲಿ ಗ್ರಹಗಳು ಶುಭ ಪ್ರಭಾವಗಳನ್ನು ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಸಾಂದ್ರೀಕರಿಸಿ ಕೊಡಬಲ್ಲವಾಗಿರುತ್ತವೆ. ಮುಹೂರ್ತವು ಸ್ಥಿರ ರಾಶಿಯಾದಾಗ ಮಾತ್ರ ಬಾಗಿಲವಾಡಗಳನ್ನು ಇಡಬೇಕು. ರೋಹಿಣಿ, ಮೃಗಶಿರ, ಉತ್ತರ, ಚಿತ್ತ ಅನೂರಾಧ, ಉತ್ತರಾಷಾಢ, ಉತ್ತರಾಭಾದ್ರ, ರೇವತಿ ನಕ್ಷತ್ರಗಳನ್ನು ಆಯ್ಕೆ ಮಾಡಿಕೊಳ್ಳಬಹುದು. ತಿಥಿ ವಾರ ನಕ್ಷತ್ರ ಲಗ್ನಗಳನ್ನು ತುಂಬ ಜಾಗರೂಕತೆಯಿಂದ

ಆಯ್ದುಕೊಳ್ಳಬೇಕು. ಏಕೆಂದರೆ ಬಾಗಿಲವಾಡವಿಡುವ ಗಳಿಗೆಯು ಮಾಲಿಕನ ಭಾಗ್ಯದ ಮೇಲೆ ಮಹತ್ವದ ಪರಿಣಾಮವನ್ನು ಬೀರುತ್ತದೆ. ಬಾಗಿಲು ಮುಂತಾದವುಗಳನ್ನು ಬುಧವಾರ ಅಥವಾ ಶುಕ್ರವಾರ ಒಳ್ಳೆಯ ತಿಥಿಯಿರುವ ದಿವಸ ಸ್ಥಿರ ರಾಶಿಯೂ ಅಶ್ವಿನಿ, ಪುಷ್ಯಮಿ, ಹಸ್ತ, ರೋಹಿಣಿ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ ಈ ನಕ್ಷತ್ರಗಳ ಪೈಕಿ ಯಾವುದಾದರೂ ಇರುವಾಗ ಅಳವಡಿಸಬಹುದು.

ವಾಸಗೃಹದ ಬಾಳಿಕೆ ಅಂದರೆ ಅದು ಸಂಪದ್ಯುಕ್ತವಾಗಿ ಉಳಿದಿರುವ ಅವಧಿಯನ್ನು ಅಡಿಪಾಯ ಹಾಕಿದ ಗಳಿಗೆಯ ಮೇಲೆ ನಿರ್ಧಾರವಾಗುತ್ತದೆ. ಕೆಳಗೆ ಕೊಟ್ಟಿರುವ ಶುಭಗಳಿಗೆಗಳಲ್ಲಿ ಹಾಕಿದ ಅಡಿಪಾಯವು ಮುಂದೆ ಕಟ್ಟು ಮನೆಯ ಸೌಭಾಗ್ಯವನ್ನೂ ಅದು ಬಾಳುವ ಕಾಲವನ್ನು ನಿಶ್ಚಯಿಸಿ ಕೊಡುತ್ತದೆ.

(1) ಲಗ್ನದಿಂದ ಚಂದ್ರ ಹತ್ತರಲ್ಲಿರಬೇಕು; ಗುರು ನಾಲ್ಕರಲ್ಲೂ, ಕುಜ, ಶನಿಗಳು ಹನ್ನೊಂದರಲ್ಲೂ ಇರಬೇಕು. (2) ಲಗ್ನದಲ್ಲಿ ಗುರು, ಎಳರಲ್ಲಿ ಬುಧ, ಮೂರರಲ್ಲಿ ಶನಿ, ಆರರಲ್ಲಿ ರವಿ, ನಾಲ್ಕರಲ್ಲಿ ಶುಕ್ರ. (3) ಲಗ್ನದಲ್ಲಿ ಶುಕ್ರ, ಹತ್ತರಲ್ಲಿ ಬುಧ, ಕೇಂದ್ರದಲ್ಲಿ ಗುರು ಹನ್ನೊಂದರಲ್ಲಿ ರವಿ. (4) ಚಂದ್ರ ಲಗ್ನದಲ್ಲಿ, ಗುರು ಎಳರಲ್ಲಿ, ಬುಧ ಹತ್ತರಲ್ಲಿ. (5) ಶುಕ್ರ ಹತ್ತರಲ್ಲಿ, ಗುರು ಎಳರಲ್ಲಿ, ಬುಧ ಲಗ್ನದಲ್ಲಿ – ಆ ಲಗ್ನ ಸ್ಥಿರರಾಶಿಯಾಗಿರಬೇಕು. (6) ಗುರು ಲಗ್ನ (ಸ್ಥಿರರಾಶಿ)ದಲ್ಲಿ ಬುಧ ಎಳರಲ್ಲಿ ಚಂದ್ರ ಹತ್ತರಲ್ಲಿರಬೇಕು.

ಅಸ್ತಿಭಾರವನ್ನು ಹಾಕುವಾಗ ಮೇಲೆ ಸೂಚಿಸಿರುವ ಯಾವ ಗ್ರಹಯೋಗವಿದ್ದರೂ ಆ ಕಟ್ಟಡಕ್ಕೆ ದೀರ್ಘಕಾಲ ಸೌಭಾಗ್ಯವನ್ನುಂಟುಮಾಡುತ್ತದೆ.

ಗುರುವು ರೋಹಿಣಿ, ಮೃಗಶಿರ, ಆಶ್ಲೇಷ, ಉತ್ತರ, ಪೂರ್ವಾಷಾಢ, ಉತ್ತರಾಷಾಢ, ಶ್ರವಣ, ಉತ್ತರಾಭಾದ್ರ ಈ ಯಾವ ನಕ್ಷತ್ರದ ಜೊತೆಯನ್ನು ಗುರುವಾರದ ದಿವಸ ಕೂಡಿದರೆ ಅದೊಂದು ಶುಭದಾಯಕವಾದ ರಾಜಯೋಗ. ಕಟ್ಟಡ ನಿರ್ಮಾಣಾರಂಭಕ್ಕೆ ಅದು ಪ್ರಶಸ್ತ. ಬಾವಿ ತೋಡುವುದು: ನಿರ್ಮಲವೂ, ಆರೋಗ್ಯಕರವೂ ಆದ ಕುಡಿಯುವ ನೀರನ್ನು ನಿರಂತರವಾಗಿ ಪಡೆಯಬೇಕೆಂಬುದು ಬಾವಿ ತೋಡಿಸುವ ಉದ್ದೇಶ. ವರಾಹಮಿಹಿರಾಚಾರ್ಯರು ಅಂತರ್ಜಲವಿರುವುದನ್ನು ಊಹಿಸಿ ನುಡಿಯುವುದಕ್ಕೆ ಹಲಕೆಲವು ಸಸ್ಯಗಳ ಗುರುತನ್ನು ಕುರಿತು ಸಮಗ್ರವಾಗಿ ಚರ್ಚಿಸಿದ್ದಾರೆ. ಮೋಡದಿಂದ ಬೀಳುವ ಮಳೆ ನೀರು ನೆಲದೊಳಕ್ಕೆ ಇಳಿಯುತ್ತದೆ. ಮತ್ತು ಭೂಗರ್ಭ ರಚನೆಯು ವಿಶೇಷ ಪರಿಸ್ಥಿತಿಗಳ ನೇರಕ್ಕೆ ಬೇರೆ ಬೇರೆ ಸ್ರೋತಗಳಾಗಿ ಹರಿಯುತ್ತದೆ. ಈ ಜಲಸ್ರೋತಗಳನ್ನೇ ಒಳಹರಿವುಗಳು ಎನ್ನುವುದು. ಭೂಮಿಯ ಮೇಲೆ ಬೆಳೆಯುವ ಸಸ್ಯದ ಜಾತಿಗಳು ಅವಕ್ಕೂ ಕೆಳಗೆ ಹರಿಯುವ

ನೀರಿಗೂ ಇರುವ ದೂರವನ್ನು ಸೂಚಿಸುತ್ತದೆ. ಉದಾಹರಣೆಗೆ, ವರಾಹಮಿಹಿರರು ಹೇಳುವಂತೆ, ಬೆಂಗಾಡದಲ್ಲಿ ಬೆತ್ತದ ಗಿಡ ಬೆಳೆದಿರುವುದನ್ನು ಕಂಡಾಗ ಅಲ್ಲಿಂದ ಮೂರು ಮೊಳಗಳಷ್ಟು ಅಂತರದಲ್ಲಿ ಭೂಮಿಯನ್ನು ಅರ್ಧ ಆಳುದ್ದ ಅಂದರೆ ಸುಮಾರು ಮೂರೂವರೆ ಅಡಿಯಷ್ಟು ಆಳವಾಗಿ ಅಗೆದರೆ, ನೀರು ಸಿಗುತ್ತದೆ. ಈ ಸೂಚನೆಯನ್ನು ಮೂಢನಂಬಿಕೆಯೆಂದು ತಿರಸ್ಕರಿಸದೆ ನಮ್ಮ ಜಲವೀಕ್ಷಕರು ಸುಲಭವಾಗಿ ಪರೀಕ್ಷಿಸಬಹುದು. ಭೂಗುಣಕ್ಕೆ ಕಾರಣವಾದ ಹಲವಾರು ಪರಿಸ್ಥಿತಿಗಳು ಗ್ರಹಗಳ ವಿಸರಣ ಪ್ರಭಾವಕ್ಕೆ ಒಳಗಾಗಿರುತ್ತವೆ. ಆದಕಾರಣ ಅನುಕೂಲಕರವಾದ ಗ್ರಹ ಪರಿಸ್ಥಿತಿಗಳಲ್ಲಿ ನೆಲವನ್ನು ಅಗೆದರೆ ಹೆಚ್ಚು ವೆಚ್ಚ ಮಾಡಬೇಕಾದ ಅಗತ್ಯವಿಲ್ಲದ ಸಮೃದ್ಧ ಜಲವನ್ನು ನಿರೀಕ್ಷಿಸಬಹುದು.

ರೇವತಿ, ಹಸ್ತ, ಉತ್ತರಾಭಾದ್ರ, ಅನೂರಾಧ, ಮಖ, ಶ್ರವಣ, ರೋಹಿಣಿ, ಪುಷ್ಯಮಿ ಭಾವಿ ತೋಡಲು ಶುಭ ನಕ್ಷತ್ರಗಳು. ಮೀನ, ಕಟಕ ಅಥವಾ ಮಕರ ಲಗ್ನವಾಗಿರಬೇಕು. ಕುಂಭ, ವೃಷಭಗಳು ನೀರನ್ನು ಯಥೇಚ್ಛವಾಗಿ ಕೊಡುವುದಿಲ್ಲ. ಶುಕ್ರ ಚಂದ್ರರು ಕೇಂದ್ರಗಳಲ್ಲಿರಬೇಕು. ಸೂರ್ಯನಿರುವ ರಾಶಿಯಲ್ಲಿ ತೋಡುವ ಕೆಲಸ ಪ್ರಾರಂಭಿಸಿದರೆ, ಗಟ್ಟಿ ಕಲ್ಲು ಸಿಕ್ಕಿ ತಡೆಯುಂಟಾಗುತ್ತದೆ. ಪರಿಪೂರ್ಣವಾದ ಜಲರಾಶಿಯಾದ ಕೇಂದ್ರದಲ್ಲಿ ಚಂದ್ರ ಅಥವಾ ಶುಕ್ರ ಇದ್ದರೆ ಕುಡಿಯುವ ನೀರು ಸಮೃದ್ಧವಾಗಿ ಸಿಕ್ಕುವುದು ಸೂಚಕವಾಗುತ್ತದೆ. ಶುಕ್ರ ಚಂದ್ರರು ಜಲ ತತ್ವರ ಗ್ರಹಗಳು. ಕಟಕ ಮಕರ ಮೀನ ರಾಶಿಗಳು ಪರಿಪೂರ್ಣ ಜಲರಾಶಿಗಳು.

*ಹೊಸಮನೆಗೆ ಪ್ರವೇಶಿಸುವುದು:* ಕಟ್ಟಿದ ಮನೆಯು ತನ್ನ ಮನೆಯವರಿಗೆ ಸುಖತರುವಂತಾಗಲಿ ಎಂಬುದೇ ಉದ್ದೇಶವಾಗಿದ್ದರೆ, ಆ ಮನೆಗೆ ಪ್ರವೇಶ ಮಾಡುವುದಕ್ಕೆ ಜ್ಯೋತಿಷ ಶಾಸ್ತ್ರದ ಪ್ರಕಾರ ಶುಭಮುಹೂರ್ತವನ್ನು ಗೊತ್ತುಪಡಿಸಿಕೊಳ್ಳಬೇಕು. ಗೃಹಪ್ರವೇಶ ಆದ ತರುಣದಲ್ಲೇ ನಡೆಯಬಾರದ್ದೇನಾದರೂ ಸಂಭವಿಸಿದರೆ, ಮನೆಯವರು ಯಜಮಾನನನ್ನು ದೂದಲಿಸುವರಲ್ಲದೆ, ಆತನಿಗೂ ಮನೆ ತನ್ನದು ಎಂಬ ಅಭಿಮಾನ ಮಾಯವಾಗುತ್ತದೆ ಮತ್ತು ಬದುಕೇ ವ್ಯರ್ಥವಾಗಿ ಕಾಣಬರುತ್ತದೆ. ಆದರೂ ಅವನು ತನ್ನ ದೂರದೃಷ್ಟಿಯಿಲ್ಲದ ನಡವಳಿಕೆಯನ್ನು ಒಪ್ಪಿಕೊಳ್ಳುವುದಿಲ್ಲ.

ಹೊಸ ಮನೆಯನ್ನು ಪ್ರವೇಶಿಸುವುದು ಅತ್ಯಂತ ಮಹತ್ವದ ಪ್ರಕರಣ. ಏಕೆಂದರೆ, ಸಂಸಾರದವರು ಗೃಹಪ್ರವೇಶ ಮುಹೂರ್ತದಲ್ಲಿ ಉಂಟಾಗುವ ಸ್ಥಳೀಯವಾದ

ಕಾಂತ ಮತ್ತು ವಿದ್ಯುತ್ ಪ್ರವಾಹಗಳು ಸಂಸಾರದವರ ಮೇಲೆ ತಮ್ಮ ಒಳ್ಳೆಯ ಅಥವಾ ಕೆಟ್ಟ ಪ್ರಭಾವಗಳನ್ನು ಬೀರದೆ ಇರುವುದಿಲ್ಲ. ಇಲ್ಲಿ ಯಾವ ಕುರುಡು ನಂಬಿಕೆಯೂ ಇಲ್ಲ, ಯಾವ ಪುರಾಣ ಕತೆಯೂ ಇಲ್ಲ. ಮನುಷ್ಯನ ಎಲ್ಲ ಕೆಲಸಗಳೂ ವಿದ್ಯುತ್ ಪ್ರವಾಹಗಳನ್ನು ಉಂಟುಮಾಡುತ್ತವೆ.

"ವಾಸ್ತು ಎಂದರೆ ಮನೆಯ ಕಟ್ಟಡದ ವಿನ್ಯಾಸ, ಆಕಾರ ಮತ್ತು ಕಟ್ಟಡದಲ್ಲಿ ಬಳಸಿದ ವಸ್ತುಗಳಿಂದಲೂ ಅಳವಡಿಸಿರುವ ವ್ಯವಸ್ಥೆಗಳಿಂದಲೂ ಉದ್ಭವವಾಗುವ ಶಕ್ತಿಗಳು, ಚೈತನ್ಯಗಳು ಎಂದರ್ಥ. ವಿವಿಧ ವಸ್ತುಗಳ ಸಮುಚ್ಚಯದಿಂದಾಗಿ ಪರಿಣಮಿಸಿದ ರಾಸಾಯನಿಕದ ಸೂಕ್ಷ್ಮ ಪ್ರತಿಫಲಗಳು ಬರಿಕಣ್ಣಿಗೆ ಕಾಣದಿದ್ದರೂ ಇದ್ದೇ ಇರುವುದಲ್ಲದೆ ಗೃಹವಾಸಿಗಳ ಮೇಲೆ ಅವುಗಳಿಗಿರಬಹುದಾದ ಯಾವುದೇ ಕೆಟ್ಟ ಪ್ರವೃತ್ತಿಗೆ ಅಪಾಯ ರೋಗ ಸಾವುಗಳನ್ನುಂಟುಮಾಡುವ ಪ್ರವೃತ್ತಿಗೆ ತಕ್ಕ ನಿಷ್ಕ್ರಿಯೋಪಾಯವನ್ನು ಕೈಕೊಳ್ಳುವುದು ಉಪಯುಕ್ತ ವಿವೇಕ. ಆದಕಾರಣ ಜ್ಯೋತಿಷ ಶಾಸ್ತ್ರವು ಕೆಲವು ವಿಧಿಗಳನ್ನು ಹಾಕಿಕೊಟ್ಟಿದೆ. ಅವುಗಳಿಗೆ ತಕ್ಕ ವಿವರಣೆಗಳು ಮಂತ್ರ ಶಾಸ್ತ್ರದಲ್ಲಿ ದೊರಕುತ್ತವೆ. ದುಷ್ಟ ಶಕ್ತಿಗಳನ್ನು ನಿವಾರಿಸಿಕೊಳ್ಳುವುದು ಹೇಗೆ ಎಂದು ಸಮಗ್ರ ವಿಧಾನವು ಅಲ್ಲಿ ವಿಶದೀಕೃತವಾಗಿದೆ.

ಸೂರ್ಯನು ಉತ್ತರಾಯಣದಲ್ಲಿದ್ದಾಗ ಮತ್ತು ಗುರು ಶುಕ್ರರು ಪ್ರಬಲರಾಗಿರುವಾಗ, ಯಥಾವಿಧಿಯಾಗಿ ಪೂಜೆ ಭೂತ ಬಲಪಡಿಸಿದ ಮೇಲೆ ಹೊಸಮನೆಯನ್ನು ಪ್ರವೇಶಿಸಬೇಕು.

* ಭೂತಗಳೆಂದರೆ ಪಂಚಭೂತಗಳಾದ ಪೃಥ್ವಿ ಜಲ ತೇಜಸ್ ವಾಯು ಆಕಾಶ ಮತ್ತು ಅವುಗಳ ಸಂಯೋಗದಿಂದ ಉಂಟಾಗುವ ಮಿಶ್ರಣಗಳು. ಯಾವುದೇ ಒಂದು ನಿವೇಶನದಲ್ಲಿ ಅಥವಾ ಭೂಭಾಗದಲ್ಲಿ ವಿಶೇಷ ವರ್ಗಕ್ಕೆ ಸೇರಿದ ವಸ್ತುಗಳೂ ಪ್ರಾಣಿಗಳೂ–ಮನುಷ್ಯರೂ ದನಗಳೂ ಸೇರಿದಂತೆ ಇಲ್ಲವಾಗಿದ್ದರೆ, ಭೂತಚೇಷ್ಟೆಯು ಅಗೋಚರವಾದ ರೀತಿಯಲ್ಲಿ ನಡೆಯುತ್ತಿತ್ತೆನ್ನಬಹುದು.

ಆದರೆ ಹೊಸ ರೀತಿ ರೂಪಗಳ ಶಕ್ತಿಗಳು, ಚೈತನ್ಯಗಳು ಪ್ರವೇಶ ಮಾಡುವುದರಿಂದ ತಮ್ಮದೇ ಪ್ರಭಾವವನ್ನು ಅಲ್ಲಿ ಬೀರುತ್ತವೆ. ಮೊದಲ ವರ್ಗದ ಪಂಚಮಹಾಭೂತಗಳು ಎರಡನೆ ವರ್ಗಕ್ಕೆ ಸೇರಿದ ಕ್ಷೇಮಕರವೂ ಸಂಪತ್ಕರವೂ ಆದ ಪ್ರಭಾವಗಳಿಗೆ ವ್ಯತಿರಿಕ್ತವಾಗಿರುವುದು ಕಂಡುಬಂದಾಗ ಬುದ್ಧಿವಂತರಾದ ಮನುಷ್ಯರಿಗೆ ಆ ಸ್ಥಳದಲ್ಲಿ

---

* ಪ್ರೊ. ಬಿ. ಸೂರ್ಯನಾರಾಯಣರಾಯರ ಕೃತಿ ದಿ ಆಸ್ಟ್ರಾಲಜಿಕಲ್ ಮಿರರ್

ಮುಂಚೆ ನೆಲೆಸಿದ್ದ ಭೌತಿಕವಾದ ಮತ್ತು ಭೌತಿಕವಲ್ಲದ ಶಕ್ತಿಗಳ ಅಸಂತುಷ್ಟಿಗೆ ಎರಡನೆ ವರ್ಗದವರ ಪ್ರಭಾವಗಳು ಪಾತ್ರವಾಗದಂತೆ ಎಚ್ಚರಿಕೆ ತಾಳಬೇಕಾದುದು ಕರ್ತವ್ಯವಾಗುತ್ತದೆ. ಈ ರೀತಿ ಯಾವ ಉದ್ದೇಶ ಸಾಧನೆಗಾಗಿ ಅಷ್ಟೊಂದು ಹಣ ಕಾಲ ಚಿಂತನೆಗಳನ್ನು ವಿನಿಯೋಗಿಸಲಾಗಿತ್ತೋ ಅದು ಪರಾಭವವಾಗದಂತೆ ನೋಡಿಕೊಳ್ಳಬಹುದು. ಆದಕಾರಣ ಭೂತಬಲಿ ಎಂದರೆ ಹೊಸ ಮನೆಯಲ್ಲಿ ನೆಲೆಸಿದ್ದಿರಬಹುದಾದ ಭೂತಗಳ ತೃಪ್ತ್ಯರ್ಥವಾಗಿ ಗೃಹಪ್ರವೇಶ ಮಾಡುವುದಕ್ಕೆ ಮುಂಚೆ ಸಲ್ಲಿಸಬೇಕಾದ ಬಲಿ ವಿಶೇಷಗಳು ಎಂದರ್ಥ. ಇದಾದ ತರುವಾಯ ಹೊಸಮನೆಯಲ್ಲಿ ಎಲ್ಲರೂ ಕ್ಷೇಮವಾಗಿರುವಂತಾಗುತ್ತದೆ.

ವೈಶಾಖ ಜ್ಯೇಷ್ಠ ಫಾಲ್ಗುಣ ಮಾಸಗಳು ಉತ್ತಮ. ಕಾರ್ತಿಕ ಮಾರ್ಗಶಿರಗಳು ಸಾಮಾನ್ಯ ಅಥವಾ ಮಧ್ಯಮ. ಅತ್ಯಂತ ಪ್ರಶಸ್ತವಾದ ದಿವಸಗಳೆಂದರೆ ಕೃಷ್ಣಪಕ್ಷದ ಪಾಡ್ಯ, ಮತ್ತು ಶುಕ್ಲಪಕ್ಷದ ಬಿದಿಗೆ ತದಿಗೆ ಪಂಚಮಿ ಸಪ್ತಮಿ ದಶಮಿ ತ್ರಯೋದಶಿ.

ರೋಹಿಣಿ, ಮೃಗಶಿರ, ಉತ್ತರಾಷಾಢ, ಚಿತ್ತ ಉತ್ತರಾಭಾದ್ರ ಉತ್ಕೃಷ್ಟ ನಕ್ಷತ್ರಗಳು. ಅನೂರಾಧ, ರೇವತಿ, ಬಾಧಕವಿಲ್ಲ. ಉಳಿದ ನಕ್ಷತ್ರಗಳನ್ನು ತ್ಯಜಿಸಬೇಕು.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ, ಶುಭದಿವಸಗಳು. ಕೆಲವು ಮುಹೂರ್ತಕಾರರು ಶನಿವಾರವನ್ನು ಪುರಸ್ಕರಿಸುತ್ತಾರೆ. ಆದರೆ ಕಳ್ಳರಕಾಟ ತಪ್ಪುವುದಿಲ್ಲ.

ಲಗ್ನವು ಸ್ಥಿರ ರಾಶಿಯಾಗಿರಬೇಕು. ಉಭಯ ಸ್ವಭಾವ ರಾಶಿಗಳು ಸಾಧಾರಣ, ಚರರಾಶಿಗಳನ್ನು ಸಾಮಾನ್ಯವಾಗಿ ಬಿಡಲಾಗುತ್ತದೆ. ಆದರೆ ನವಾಂಶಲಗ್ನವು ಸ್ಥಿರವಾದಲ್ಲಿ, ಚರರಾಶಿಯಾದರೂ ಪರವಾ ಇಲ್ಲ. ಲಗ್ನದಿಂದ ಎಂಟನೆ ಮನೆಯಲ್ಲಿ ಯಾವ ಗ್ರಹವೂ ಇರಕೂಡದು.

ಅಶುಭ ಗ್ರಹಗಳು ಉಪಚಯ ಮನೆಗಳಲ್ಲಿ ಇರಬೇಕು. ಶುಭರು ಕೇಂದ್ರಗಳನ್ನು ಬಲಗೊಳಿಸಬೇಕು. ಚಂದ್ರನು ಬಲಯುತನಾಗಿರಬೇಕು. ಲಗ್ನವು ಗುರುವಿನದೋ, ಶುಕ್ರನದೋ ಆದ ರಾಶಿಯಾದರೆ ಒಳ್ಳೆಯದು. ಇಂಥ ಗ್ರಹಯೋಗದಲ್ಲಿ ಗೃಹಪ್ರವೇಶವು ಆದರೆ ಸಂಬಂಧಪಟ್ಟವರಿಗೆ ದೀರ್ಘಾಯು ಸುಖಸಂಪದಗಳು ಲಭ್ಯವಾಗುತ್ತವೆ. ಗೃಹಪ್ರವೇಶವನ್ನು ಜನ್ಮರಾಶಿಯಲ್ಲೋ ಜನ್ಮ ನಕ್ಷತ್ರ ಅಥವಾ ಜನ್ಮ ಲಗ್ನದಲ್ಲೋ ನಡೆದರೆ ಅತ್ಯಂತ ಶುಭಕರವಾದ ಫಲ ಕೊಡುತ್ತದೆ.

ಗೃಹಪ್ರವೇಶವನ್ನು ಪತ್ನಿಯು ತುಂಬುಗರ್ಭಿಣಿ (ಆರು ತಿಂಗಳ ತರುವಾಯ) ಆಗಿದ್ದಾಗ ನಡೆಸಬಾರದು.

ಸ್ಥಿರಾಸ್ತಿ ನೆಲಕೊಳ್ಳುವುದು: ನೆಲ ಕೊಳ್ಳುವುದಕ್ಕೆ ಉತ್ತಮ ನಕ್ಷತ್ರಗಳು ಅಶ್ವಿನಿ, ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯಮಿ, ಉತ್ತರ, ಹಸ್ತ, ಸ್ವಾತಿ,

ಅನೂರಾಧ, ಉತ್ತರಾಷಾಢ, ಶ್ರವಣ, ಧನಿಷ್ಠ, ಶತಭಿಷ, ಉತ್ತರಾಭಾದ್ರ. ರಿಕ್ತ * ತಿಥಿಗಳನ್ನು ಸರ್ವಥಾ ತ್ಯಜಿಸಬೇಕು. ಸೋಮವಾರ, ಬುಧವಾರ, ಗುರುವಾರ, ಶನಿವಾರ ಒಳ್ಳೆಯವು.

ಈ ವ್ಯವಹಾರ ನಡೆಯುವ ವೇಳೆಯಲ್ಲಿ ವಾರದ ಅಧಿಪತಿಯು ಲಗ್ನದಲ್ಲಿರುವುದು ಉತ್ತಮ ಪಕ್ಷ. ಕೆಲವು ಪ್ರಾಚೀನ ಜ್ಯೋತಿಷ ಗ್ರಂಥಗಳು ಮಂಗಳವಾರವಾದರೂ ಉಪಯುಕ್ತವೆನ್ನುತ್ತವೆ. ಆದರೆ ನಮ್ಮ ನಮ್ರ ಭಾವನೆಯಲ್ಲಿ ಮಂಗಳವಾರವು ತ್ಯಾಜ್ಯ.

ಅಂತಿಮವಾದ ಸಂಧಾನ ನಡೆಯುವಾಗ, ಸ್ಥಿರ ರಾಶಿ ಉದಯವಾಗುವುದಾದರೆ ಉಪಯುಕ್ತ. ಗುರುವು ಕೇಂದ್ರದಲ್ಲೋ ಕೋಣದಲ್ಲೋ ಇರಬೇಕು. ಕುಜ ಹನ್ನೊಂದರಲ್ಲಿರಬೇಕು. ಲಗ್ನದಲ್ಲಿರಕೂಡದು. ಲಗ್ನಾಧಿಪತಿಯೂ ಸಪ್ತಮಾಧಿಪತಿಯೂ ಸಾಮರಸ್ಯ ಹೊಂದಿದವರಾಗಿರಬೇಕು. ಹನ್ನೊಂದನೆ ಅಧಿಪತಿಯು ಹನ್ನೆರಡರಲ್ಲಿರಬೇಕು.

ಕೊಂಡ ನೆಲವನ್ನು ವಶಕ್ಕೆ ತೆಗೆದುಕೊಳ್ಳುವಾಗ ಲಗ್ನ ಮತ್ತು ನವಾಂಶಗಳಲ್ಲಿ ಸೂರ್ಯ ಮತ್ತು ಕೇತು ಇರಲಿ. ಇವೆರಡು ಗ್ರಹಗಳೂ ಲಗ್ನದಲ್ಲೋ ನವಾಂಶದಲ್ಲೋ ಒಟ್ಟಿಗಿದ್ದರೆ ನೆಲವು ಕೊಂಡವನ ಸ್ವಾಧಿನಾನುಭವದಲ್ಲಿ ನಿರಂತರವಾಗಿರುತ್ತದೆ.

**ಮನೆಗಳನ್ನು ಕೊಳ್ಳುವುದು:** ಯಥಾಪ್ರಕಾರವಾಗಿ ನಂದ ** ತಿಥಿಗಳು ಅನುಕೂಲಕರ. ಹೊಸ ಮತ್ತು ಹಳೆ ಮನೆಗಳನ್ನು ಗುರುವಾರ ಶುಕ್ರವಾರಗಳಲ್ಲಿ ಕೊಳ್ಳಬಹುದು. ಶುಭ ನಕ್ಷತ್ರಗಳು ಯಾವುವೆಂದರೆ ಮೃಗಶಿರ, ಆಶ್ಲೇಷ, ಮಖ, ಪುಬ್ಬ, ವಿಶಾಖ, ಮೂಲ, ಪುನರ್ವಸು, ರೇವತಿ, ವೃಷಭ, ಮಿಥುನ, ಸಿಂಹ, ತುಲ, ವೃಶ್ಚಿಕಗಳು ಉತ್ಕೃಷ್ಟ ರಾಶಿಗಳು. ಏಳನೆ ಮನೆಯಲ್ಲಿ ಅಶುಭರನ್ನು ನಿವಾರಿಸಿಕೊಳ್ಳಬೇಕು. ಅವಿದ್ದರೆ ತೊಂದರೆ ಆತಂಕ. ಕುಜನು ಲಗ್ನದಲ್ಲಿರಬಾರದು.

**ಮನೆಯ ಕಾಮಗಾರಿ:** ಮನೆಯ ಕಾಮಗಾರಿ ಕೆಲಸವನ್ನು ಮಂಗಳವಾರ ಪ್ರಾರಂಭಿಸಬೇಡಿ. ಈ ಕಾರ್ಯಕ್ಕೆ ವೃಷಭ ಅಥವಾ ತುಲ ಲಗ್ನವಿರುವಾಗ ಶುಕ್ರವಾರ, ಕಟಕ ಲಗ್ನವಿರುವಾಗ ಸೋಮವಾರ ತುಂಬ ಅನುಕೂಲ. ಲಗ್ನದಲ್ಲಿ ಶುಭನಿರಬೇಕು. ಚಂದ್ರನು ಜಲತತ್ತ್ವ ರಾಶಿಯಲ್ಲಿರಬೇಕು. ಸೋಮವಾರ ಬುಧವಾರ ಗುರುವಾರ ಉತ್ತಮವಾದ ವಾರ ದಿವಸಗಳು.

---

* ಪರಿಶಿಷ್ಟವನ್ನು ನೋಡಿ

** ವಿವರಗಳಿಗೆ ಪರಿಶಿಷ್ಟವನ್ನು ನೋಡಿ

ಗೋಡೆಗಳಿಗೆ ಸೋಮವಾರ ಬುಧವಾರ ಗುರುವಾರ ಶುಕ್ರವಾರ ಸುಣ್ಣ ಬಣ್ಣ ಹಚ್ಚಬಹುದು. ಯಥಾ ಪ್ರಕಾರ ಅಶುಭವಾದ ತಿಥಿಗಳನ್ನು ಅಗ್ನಿತತ್ವದ ನಕ್ಷತ್ರಗಳನ್ನೂ ನಿವಾರಿಸಿಕೊಳ್ಳಬೇಕು.

ಯಾವ ಕಾಮಗಾರಿ ಕೆಲಸವನ್ನೂ ಕೃತ್ತಿಕ, ಮಖ, ಪುಷ್ಯಮಿ, ಪುಬ್ಬ, ಹಸ್ತ ಮೂಲ ರೇವತಿ ನಕ್ಷತ್ರಗಳಲ್ಲಿ ಕುಜನಿರುವಾಗ ಕೈಕೊಳ್ಳಬಾರದು.

ಮನೆಯನ್ನು ಪ್ರವೇಶಿಸಲಾಗಲಿ ಅಥವಾ ಕೊಳ್ಳಲಾಗಲಿ ಮತ್ತು ಆಸ್ತಿ ಮಾರಟ ಮಾಡುವುದಕ್ಕಾಗಲಿ ಗುರುವಾರ ಗುರುವು ಕೆಳಗೆ ಕೊಟ್ಟಿರುವ ನಕ್ಷತ್ರಗಳಲ್ಲಿರುವ ವೇಳೆ ಅತ್ಯಂತ ಆದರ್ಶಪ್ರಾಯವಾದುದು.

ರೋಹಿಣಿ, ಮೃಗಶಿರ, ಆಶ್ಲೇಷ, ಉತ್ತರ, ಪೂರ್ವಾಷಾಢ, ಉತ್ತರಾಷಾಢ ಶ್ರವಣ ಉತ್ತರಾಭಾದ್ರ.

*ಕಟ್ಟಡಗಳನ್ನು ಕೆಡಹುವುದು:* ಮನೆಯನ್ನು ಕೆಡಹಬೇಕೆನ್ನುವಾಗ, ಚರ ಲಗ್ನದಲ್ಲಿ ಅಗ್ನಿತತ್ವದ ನಕ್ಷತ್ರವಿರುವ ದಿನವನ್ನು ಚುನಾಯಿಸಿ, ಆಗ ಚಂದ್ರ ಕ್ಷೀಣನಾಗುತ್ತಿರಬೇಕು. ಕುಜನು ಉಪಚಯ ಸ್ಥಾನದಲ್ಲಿ ಇರಬೇಕು. ಗುರುವಾರ ಮತ್ತು ಅಷ್ಟಮಿ, ನವಮಿ ಮತ್ತು ಮೂವತ್ತನೆ ತಿಥಿ ಬೇಡ.

*ಬೇರೆ ಮನೆಗೆ ಹೋಗುವುದು:* ಎಂದಿನಂತೆ ತಾರಾಬಲ ಚಂದ್ರ ಬಲಗಳಿರುವಾಗ ಈ ಕೆಲಸ ಮಾಡಬೇಕು. ಜನ್ಮ ನಕ್ಷತ್ರ ಪ್ರಶಸ್ತ. ಸೋಮವಾರ ಬುಧವಾರ ಗುರುವಾರ ಶುಕ್ರವಾರ ಉತ್ತಮ. ಶನಿವಾರ ಭಾನುವಾರ ಮಂಗಳವಾರಗಳನ್ನು ನಿವಾರಿಸಿಕೊಳ್ಳಬೇಕು. ದಾನ ರಿಕ್ತ ತಿಥಿಗಳು ಬೆಸ ತಿಥಿಗಳೂ ಕೂಡದು. ವಾಸಕ್ಕಲ್ಲದೆ ಬೇರೆ ಉದ್ದೇಶಕ್ಕಾಗಿ ಮನೆಯನ್ನು ತೆಗೆದುಕೊಂಡಿದ್ದರೆ ಆ ಉದ್ದೇಶ ಸೂಚಕವಾದ ಭಾರವನ್ನು ಅಂದರೆ ಮನೆಯನ್ನು ಪುಷ್ಟಿಗೊಳಿಸಿ ಮನೆಯನ್ನು ಬಂಡವಾಳ ಹೂಡಿಕೆಗಾಗಿ ತೆಗೆದುಕೊಂಡಿದ್ದರೆ, ಹನ್ನೊಂದನೆ ಮನೆಯು ಬಲಯುತವಾಗಿರು ವಂತೆ ನೋಡಿಕೊಳ್ಳಿ. ಯಾವ ಉದ್ದೇಶಕ್ಕಾದರೂ ಸರಿ, ಶುಭವಾದ ವಾರ ತಿಥಿ ನಕ್ಷತ್ರಗಳಿರುವುದು ಅಗತ್ಯ. ಹಾಗಿದ್ದರೆ ಉದ್ದೇಶಿಸಿದ ಕಾರ್ಯ ಸಾಧನೆಯಾಗುತ್ತದೆ.

# ವ್ಯವಸಾಯ ಮತ್ತು ಸಾಗುವಳಿ

ಸಸ್ಯವರ್ಗದ ಮೇಲೆ ಗ್ರಹಗಳು ಪ್ರಭಾವ ಬೀರುತ್ತವೆಂಬುದು ಅಂಗೀಕೃತವಾದ ಸಂಗತಿ. ಪ್ರಾಚೀನರ ಬರೆಹಗಳಲ್ಲಿ ಇದು ಪದೇ ಪದೇ ಪ್ರಸ್ತಾಪಿಸಲ್ಪಟ್ಟಿದೆ. ಅವಲೋಕನದಿಂದಲೂ ಅಂತರ್ಬೋಧೆಯಿಂದಲೂ ಗಳಿಸಿದ ಜ್ಞಾನವು ನಮಗೆ ಅಮೂಲ್ಯವಾದ ಬೆಲೆಯುಳ್ಳದ್ದು. ನಮಗೆ ತಿಳಿದುಬರುವಂತೆ ಭೂಮಿಯ ಮೇಲೆ ಪ್ರತ್ಯಕ್ಷವಾಗುವ ಎಲ್ಲ ಶಕ್ತಿರೂಪಗಳೂ ವಿಶ್ವಕಿರಣಗಳಿಂದ ಮೂಡಿಬರುತ್ತವೆಂದು ಪ್ರಾಚೀನರು ಮನಗಂಡಿದ್ದರೆಂದು ಕಾಣುತ್ತದೆ. ವಾಸ್ತವವಾಗಿ ಜಾರ್ಜೆಸ್ ಲಾ ಬೇಲಸ್ಕಿ ಪ್ರಕಾರ, ವಸ್ತುವಿನ ಕೇಂದ್ರೀಕರಣವೂ ಜೀವದ ಪ್ರಾದುರ್ಭಾವವೂ ಈ ಕಿರಣಗಳ ವ್ಯಕ್ತಸ್ವರೂಪವೇ ಆದಕಾರಣ ವಿವಿಧ ಗ್ರಹಗಳಿಂದ ವಿವಿಧ ನಕ್ಷತ್ರಗಳಿಂದ ವಿಕಿರಣಗೊಳ್ಳುವ ವಿದ್ಯುತ್ -ಕಾಂತ ಶಕ್ತಿಗಳು ಸಸ್ಯಜೀವನದ ಉಗಮ ವೃದ್ಧಿಗಳ ಮೇಲೆ ಪ್ರಭಾವ ಬೀರತಕ್ಕವಾಗಿವೆ. ಸಾಲ್ಗೆಮನ್ ಎಂಬ ಪ್ರಾಚೀನ ಇಸ್ರೇಲಿನ ವಿವೇಕ್ಷ ರಾಜ ಬರೆಯುತ್ತಾನೆ: "ಬಿತ್ತಲು ಒಂದು ಕಾಲವಿದೆ, ಬೆಳೆಸಿದ್ದನ್ನು ಕೀಳಲು ಒಂದು ಕಾಲವಿದೆ: ಕೊಲ್ಲುವುದಕ್ಕೆ ಒಂದು ಕಾಲವುಂಟು. ಹಾಗೇ ವಾಸಿ ಮಾಡಲೂ ಒಂದು ಕಾಲವುಂಟು". ಇದು ಯುಕ್ತವಾದ ಜ್ಯೋತಿಷಿಕ ಹಿತೋಪದೇಶವೇ ಆಗಿದೆ.

ಲೋಹಗಳು ಸಸ್ಯಗಳು ಪ್ರಾಣಿಗಳು ಪ್ರಪಂಚದ ವ್ಯಕ್ತ ಸ್ವರೂಪ. ಎಂಥ ಕಟ್ಟಾ ವಿಜ್ಞಾನಿಯಾದರೂ ಇದನ್ನು ಒಪ್ಪಿಕೊಳ್ಳುತ್ತಾನೆ. ಈ ಮೂರು ವರ್ಗಗಳವೂ ಪರಸ್ಪರ ಅವಲಂಬನ ಹೊಂದಿರುವುದು ಕೂಡ ಸುವಿದಿತವೇ ಆಗಿದ್ದು ಆ ಬಗ್ಗೆ ವಿವರಣೆ ಅನಾವಶ್ಯಕವಾಗಿದೆ. ಈ ಮೂರು ಮಹಾನ್ ವರ್ಗಗಳ ಅಧಿಪತ್ಯದ ಒಂದೆ ಸೌರಗಳಿಂದ ಹೊರಬಂದ ನಿರ್ಮಾಣ ಶಕ್ತಿಗಳಿವೆ. ಈ ನಿರ್ಮಾಣ ಶಕ್ತಿಗಳಾದ ಬಿಸಿಲು ಶಾಖ ಶಬ್ದ ಕಾಂತಶಕ್ತಿ ವಿದ್ಯುಚ್ಛಕ್ತಿ ಮತ್ತಿತರ ಅಗೋಚರ ಶಕ್ತಿಗಳ ವಶಕ್ಕೊಳಪಟ್ಟಂತೆ ಈ ಅಗೋಚರ ಶಕ್ತಿಗಳನ್ನು ಆಧುನಿಕ ವಿಜ್ಞಾನಿಗಳು

ಇನ್ನೂ ಕಂಡುಹಿಡಿದಿಲ್ಲವಾದರೂ ಅವು ನಮ್ಮ ಪ್ರಾಚೀನ ಮಹರ್ಷಿಗಳಿಗೆ ಗೊತ್ತಿದ್ದವು ಲೋಹಗಳು ಉತ್ಪತ್ತಿ ಆಗುತ್ತವೆ. ಬೆಳೆದ ಮಣ್ಣು ಪಾಲಾಗುತ್ತವೆ. ಈ ಲೋಹಗಳು ತಮ್ಮ ಈ ಎಲ್ಲ ಅವಸ್ಥಾಂತರಗಳಲ್ಲೂ ಸಸ್ಯಗಳ ರಚನೆ, ಬೆಳವಣಿಗೆ, ಬಡಾವಣೆ ಮತ್ತು ವಿನಾಶಗಳನ್ನು ಆಗುಮಾಡುತ್ತವೆ. ವಿಶ್ವದಾದ್ಯಂತ ಜೀವವು ಒಂದಲ್ಲೊಂದು ರೂಪದಲ್ಲಿ ಇದ್ದೇ ಇರುತ್ತದೆ. ಎಲ್ಲ ವಿಶ್ವ ವ್ಯಾಪಾರಗಳಲ್ಲೂ ಜೀವವಿರುತ್ತದೆ. ಮನುಷ್ಯನಲ್ಲಿರುವ ಜೀವ ಲಕ್ಷಣಕ್ಕೂ ಅಗಣಿತವಾದ ಪ್ರಾಣಿ ವರ್ಗಗಳಲ್ಲಿರುವ ಜೀವ ಲಕ್ಷಣಕ್ಕೂ ವ್ಯತ್ಯಾಸವಿರಬಹುದು ಮತ್ತು ಸಸ್ಯವರ್ಗಗಳಲ್ಲಿರುವ ಜೀವ ಲಕ್ಷಣಗಳಿಗೂ ಇವಕ್ಕೂ ವ್ಯತ್ಯಾಸವಿರಬಹುದು. ಸಸ್ಯಗಳು ಲೋಹಗಳಿಂದ ಉತ್ಪನ್ನವಾಗುತ್ತವೆ. ಎಲ್ಲ ಸಸ್ಯಗಳೂ ತಮ್ಮ ಜೀವ ಲಕ್ಷಣಗಳನ್ನು ಪ್ರದರ್ಶಿಸುತ್ತವೆ. ಮತ್ತು ಎಲ್ಲ ಸಸ್ಯ ವಿಜ್ಞಾನಿಗಳಿಗೂ ತಿಳಿದೇ ಇರುವಂತೆ ಸಸ್ಯಗಳ ಬದುಕಿನಲ್ಲೂ ಪ್ರಾಣಿಗಳ ಬದುಕಿನಲ್ಲೂ ಒಂದೇ ರೀತಿಯ ಭ್ರೂಣಾವೇ ಮುಂತಾದವುಗಳಿಗೆ ಸಂಬಂಧಪಟ್ಟ ದೈಹಿಕ ಕ್ರಿಯೆಗಳು ಕಂಡುಬರುತ್ತವೆ. ಈ ಸಾಮ್ಯವನ್ನು ಮತ್ತು ಪ್ರಕೃತಿ ನಿಯಮವನ್ನು ಮುಂದುವರಿಸಿಕೊಂಡು ನೋಡಿದರೆ, ನಿರ್ಜೀವವಾದ ಲೋಹಗಳಿಂದ ಸಜೀವವಾದ ಸಸ್ಯಗಳು ಹುಟ್ಟಲಾರವು. ವಿಕಾಸವಾದವು ಅನುಭವ ವೇದ್ಯವಾದ ಒಂದು ತತ್ವ, ಒಂದು ಪ್ರತಿಪಾದನೆ ಆಗಿರುವ ಪಕ್ಷದಲ್ಲಿ ಲೋಹಗಳಲ್ಲಿರುವ ಜೀವವು ಒಂದು ಘಟ್ಟದ ಬೆಳವಣಿಗೆ ಬಂದು ನಿಂತ ಬಗೆಯವೆನ್ನಬಹುದು. ತನ್ನದೇ ಆದ ಆವರಣದಲ್ಲಿ ಆದು ಸೌರ ನಿರ್ಮಾಣ ಶಕ್ತಿಗಳಾದ ಬೆಳಕು ಬಿಸಿ ಶಬ್ದ ಮುಂತಾದವುಗಳ ಕೈಗೆ ಸಿಕ್ಕಿ ಬೆಳವಣಿಗೆ ಪಡೆಯುತ್ತ ವಿವಿಧರೀತಿಯ ಸಸ್ಯಗಳ ಉಚ್ಚ ವರ್ಗಕ್ಕೆ ಸೇರಲನುಕೂಲವಾದಂಥ ರೂಪಾಂತರದ ಘಟ್ಟವನ್ನು ಸೇರುತ್ತದೆ. ಆಯುರ್ವೇದ ಗ್ರಂಥಗಳಲ್ಲಿ, ಎಲ್ಲ ಲೋಹಗಳಿಗೂ ಜೀವವಿದೆಯೆಂದು ಹೇಳಿದೆ. ಅವುಗಳನ್ನು ಭಸ್ಮಗಳಾಗಿ ಪರಿವರ್ತಿಸಲು ಶಾಂತಿಗಳೇ ಮುಂತಾದ ಪರಿಹಾರೋಪಾಯಗಳನ್ನು ವಿಧಿಸಿದೆ. ಈ ರೀತಿ ಆಯುರ್ವೇದ ವೈದ್ಯನು ಲೋಹಗಳನ್ನು ಸುಡುವುದರ ಮೂಲಕ ಅವುಗಳ ಕೊಲೆ ಮಾಡಿದಂತಾಗುವುದೆಂದೂ ಆ ಪಾಪ ಪರಿಹಾರಕ್ಕಾಗಿ ಮಹಾ ಶಾಂತಿಗಳನ್ನು ಮಾಡಿಕೊಳ್ಳಬೇಕೆಂದು ವಿಧಿಸಲಾಗಿದೆ. ಹೀಗೆ ಲೋಹಗಳಿಂದ ಸಸ್ಯಗಳು ಉತ್ಪತ್ತಿಯಾಗುತ್ತವೆಂಬುದು ಸ್ಪಷ್ಟವಾಗುತ್ತದೆ. ಮತ್ತು ಲೋಹ ಸಸ್ಯಗಳೆರಡನ್ನೂ ಸೌರ ಶಕ್ತಿಗಳು ತಮ್ಮ ವಿಶೇಷ ರೂಪದಲ್ಲಿ ಉತ್ಪತ್ತಿ ಮಾಡಲು ಕಾರಣವಾಗುತ್ತವೆ. ಸೂರ್ಯನ ಬೆಳಕನ್ನು ವರ್ಣಪಟಲದ ವಿಶ್ಲೇಷಣದಿಂದ ಪರಿಶೀಲಿಸಿದರೆ ಪಟಲದ ಎರಡು ಕಡೆಗಳಲ್ಲೂ ರಕ್ತವರ್ಣಾತೀತವೂ ನೀಲ ಲೋಹಿತ ವರ್ಣಾತೀತವೂ ಆದ ರಶ್ಮಿಗಳಿರುತ್ತವೆ. ಈ ಪಟಲದ ಸಮೀಪಕ್ಕೆ

ಸಾಕಿದ ಏಕಾಣು ಜೀವಿಗಳ ರಾಶಿಯನ್ನು ತಂದೊಡ್ಡಿದರೆ ಆ ಜೀವಾಣುಗಳೆಲ್ಲ ಕೆಲವು ಬಣ್ಣದ ಕಡೆ ಶೇಖರಗೊಳ್ಳುತ್ತವೆ. ಇದರಿಂದ ಕೆಂಪು ರಶ್ಮಿಗಳಿಗೂ ಏಕಜೀವಾಣುಗಳಿಗೂ ನಿಕಟ ಸಂಬಂಧವಿದೆ ಎಂಬುದು ವ್ಯಕ್ತಪಡುತ್ತದೆ. ಇದೇ ರೀತಿಯಲ್ಲಿ ಸಸ್ಯದ ಪ್ರತಿ ಜಾತಿಗೂ ತನ್ನದೇ ಆದ ವರ್ಣಾಕರ್ಷಣೆಯಿರುತ್ತದೆ.

ಗ್ರಹಗಳಿಗೂ ಸಸ್ಯಗಳಿಗೂ ನೇರವಾದ ಗೋಚರ ಸಾಧ್ಯವಾದ ಸಂಬಂಧವಿದೆ. ನಕ್ಷತ್ರ ಮಂಡಲಗಳು ವಿದ್ಯುತ್ – ಕಾಂತ ಶಕ್ತಿಗಳ ಖಂಡಿಕಟ್ಟುಗಳು. ಅವುಗಳು ಫಸಲಿನ ಮೇಲೆ ಪ್ರಭಾವ ಬೀರುತ್ತವೆಂಬುದು ವೇದ್ಯವಾದ ಸಂಗತಿ. ವಿವಿಧ ರೀತಿಯ ಫಸಲುಗಳನ್ನು ವಿವಿಧ ನಕ್ಷತ್ರಗಳಲ್ಲಿ ಉತ್ತಿ ಕುಯ್ಲು ಮಾಡಬೇಕು.

ಕಾಟೋ (ಕ್ರಿ.ಪೂ.234-149) ಎಂಬ ರೋಮನ್ ರಾಜ ತಂತ್ರಜ್ಞ "ಚಂದ್ರನು ಸೂರ್ಯನ ಸಂಗಡ ಇದ್ದಾಗ, ಚೌಬೀನೆಯನ್ನು ಕಡಿದುರುಳಿಸುವುದು ಅತ್ಯಂತ ಪ್ರಯೋಜನಕರ" ಎಂದೂ "ಅಂಜೂರ, ಸೇಬು, ಆಲಿವ್ ಮತ್ತು ತೋಪು ಮರಗಳೂ, ದ್ರಾಕ್ಷಿ ಬಳ್ಳಿಗಳೂ ಚಂದ್ರನಿಲ್ಲದ ಕತ್ತಲೆಯ ದಿವಸ ಅಪರಾಹ್ನದಲ್ಲಿ ದಕ್ಷಿಣದಿಂದ ಗಾಳಿ ಬೀಸದೆ ಇರುವಾಗ ನೆಟ್ಟರೆ ಪ್ರಯೋಜನಕರ" ಎಂದೂ ಪೂರ್ಣ ಭರವಸೆ ಕೊಡುತ್ತಾನೆ.

ಪ್ಲೂಟಾರ್ಕ (46-120 ಕ್ರಿ.ಶ) ಎಂಬ ಗ್ರೀಕ್ ಚರಿತ್ರೆಕಾರ ಪ್ರಾಚೀನ ಗ್ರೀಕ್ ಕವಿ ಹೆಸಿಯಾಡ್ ಕುರಿತ ವ್ಯಾಖ್ಯಾನದಲ್ಲಿ, ಚಂದ್ರ ಕ್ಷೀಣನಾಗಿರುವಾಗ ಈರುಳ್ಳಿ ಗಿಡಗಳು ಹಸಿರಾಗಿ ಬೇರು ಬಿಡುತ್ತವೆಂದೂ ವೃದ್ಧಿ ಚಂದ್ರನಿರುವಾಗ ಒಣಗಿ ಹೋಗುತ್ತವೆಂದು ಖಚಿತವಾಗಿ ಹೇಳುತ್ತಾನೆ.

ಪ್ರಖ್ಯಾತ ಫ್ರೆಂಚ್ ಖಗೋಳ ವಿಜ್ಞಾನಿ ಕಾಮಿಲ್ ಫ್ಲಮೇರಿಯನ್ (1842-1925) ಹೀಗೆ ಸ್ಥಾಪಿಸುತ್ತಾನೆ: "ಸವುತೇಕಾಯಿ ಹುಣ್ಣಿಮೆಯಂದು ಚೆನ್ನಾಗಿ ಬೆಳೆಯುತ್ತದೆ. ಹಾಗೇ ಮೂಲಂಗಿ, ಬರ್ನಿಫ್, ಲೀಕ್, ಬಲಿ, ಕೇಸರಿ ಮುಂತಾದವು ಕೂಡ". ಶುಕ್ಲಪಕ್ಷದಲ್ಲಿ ಕಿತ್ತ ಮೂಲಿಕೆಗಳು ಹೆಚ್ಚು ಪರಿಣಾಮಕಾರಿಗಳಾಗಿರುತ್ತವೆ. ಕ್ರಿ.ಪೂ. 1ನೇ ಶತಮಾನದ ಮಹಾನ್ ಜ್ಯೋತಿಷಿ ಮತ್ತು ಖಗೋಳ ವಿಜ್ಞಾನಿ ವರಾಹಮಿಹಿರ ಸಸ್ಯ ಜ್ಯೋತಿಷದಲ್ಲಿ ಅಮೋಘವಾದ ಅಧ್ಯಯನ ನಡೆಸಿದ್ದಾರೆ. ಅವರು ಹೇಳಿರುವ ಪ್ರಕಾರ ಗಮನಾರ್ಹ.

ಬಿತ್ತನೆ, ನಾಟಿ, ಕಸಿ, ಮುಂತಾದವುಗಳಿಗೆ ವಿವಿಧ ಮುಹೂರ್ತಗಳನ್ನು ಕುರಿತು ಪ್ರಸ್ತಾಪಿಸುವುದಕ್ಕೆ ಮುಂಚೆ, ಕೆಲವು ಗ್ರಹ ಯೋಗಗಳ ಪ್ರಕಾರ ಹೀಗೆ ವಿವಿಧವಾದ ಪಯಿರುಗಳು ಮುಂಬರುವ ಋತುಗಳಲ್ಲಿ ಕಾಲದಲ್ಲಿ ಬೆಳೆಯುತ್ತವೆ ಎಂಬುದನ್ನು ಸಾಮಾನ್ಯ ರೀತಿಯಲ್ಲಿ ಪ್ರಸ್ತಾಪಿಸೋಣ.

ಸೂರ್ಯನು ವೃಶ್ಚಿಕವನ್ನು ಪ್ರವೇಶಿಸುವ ಸಂಕ್ರಮಣ ಕಾಲದಲ್ಲಿ ರಾಶಿಯಲ್ಲಿ ಅಥವಾ ಅದರಿಂದ ನಾಲ್ಕನೆ, ಏಳನೆ ಅಥವಾ ಹತ್ತನೆ ಮನೆಯಲ್ಲಿ ಶುಭ ಗ್ರಹಗಳಿದ್ದರೆ, ಬೇಸಿಗೆಯ ಅರ್ಥಾತ್ ಗ್ರೀಷ್ಮ ಋತುವಿನ ಫಸಲು ಚೆನ್ನಾಗಿ ಆಗುತ್ತದೆ. ಇದೇ ಪರಿಣಾಮವು ಗುರು ಕುಂಭದಲ್ಲೂ ಚಂದ್ರ ಸಿಂಹದಲ್ಲೂ ಇದ್ದರೆ ಉಂಟಾಗುತ್ತದೆ. ಶುಕ್ರ ಅಥವಾ ಬುಧ ಧನುಸ್ಸಿನಲ್ಲೋ ತುಲಾದಲ್ಲೋ ಇದ್ದಾಗ ವೃಶ್ಚಿಕ ಸಂಕ್ರಮಣವಾದರೆ ಬೇಸಿಗೆಯ ಫಸಲು ಚೆನ್ನಾಗಿರುತ್ತದೆ. ಎರಡು ಪಕ್ಕಗಳಲ್ಲೂ ಅಶುಭರಿದ್ದರೆ, ಫಸಲಿಗೆ ನಷ್ಟವುಂಟಾಗುತ್ತದೆ. ಸೂರ್ಯನು ವೃಶ್ಚಿಕ ಸಂಕ್ರಮಣ ಮಾಡುವಾಗ ಏಳನೆ ಮನೆಯಲ್ಲಿ ಅಶುಭ ಗ್ರಹವಿದ್ದರೆ ಫಸಲಿಗೆ ಹುಳ ಬೀಳುತ್ತದೆ. ಏಳನೆ ಮನೆಯನ್ನು ಶುಭರು ವೀಕ್ಷಿಸಿದರೆ, ಫಸಲು ಪೂರ್ತಿ ನಾಶವಾಗುತ್ತದೆ.

ಸೂರ್ಯನು ವೃಷಭ ಸಂಕ್ರಮಣ ಮಾಡುವಾಗ ಇರುವ ಇತರೆ ಗ್ರಹ ಪರಿಸ್ಥಿತಿಗಳು ಒಳ್ಳೆಯವಾಗಿದ್ದರೆ ಚಳಿಗಾಲದ ಫಸಲು ಚೆನ್ನಾಗಿರುತ್ತದೆ. ಕೆಟ್ಟ ಗ್ರಹಸ್ಥಿತಿಗಳಿದ್ದರೆ, ಫಸಲೂ ಕೆಟ್ಟದಾಗಿರುತ್ತದೆ.

*ಬೇಸಾಯಕ್ಕಾಗಿ ಜಮೀನು ಕೊಳ್ಳುವುದು:* ಸೋಮವಾರ, ಬುಧವಾರ, ಶನಿವಾರ ಒಳ್ಳೆಯದು. ಶುಕ್ಲಪಕ್ಷವಾಗಿರಬೇಕು. ಕುಜನು ನಾಲ್ಕನೆ ಮನೆಯಲ್ಲಿರಬೇಕು. ಯಥಾಪ್ರಕಾರ ರಿಕ್ತ ತಿಥಿಗಳು ಕೂಡದು. ಉತ್ಕೃಷ್ಟ ನಕ್ಷತ್ರಗಳು ಇವು: ಅಶ್ವಿನಿ, ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯಮಿ, ಉತ್ತರ, ಶ್ರವಣ, ಶತಭಿಷ ಉತ್ತರಾಭಾದ್ರ. ವಿಷ್ಟಿಕರಣವನ್ನು ಬಿಡಬೇಕು. ಅನಿವಾರ್ಯ ಕಾರಣಗಳಿಗಾಗಿ ಗೊತ್ತುಮಾಡಿಕೊಂಡಿರುವ ಶುಭ ಮುಹೂರ್ತದಲ್ಲಿ ಸ್ಥಳದಲ್ಲಿದ್ದು ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಲು ಆಗದೆ ಹೋದರೆ ಆ ಜಮೀನಿನಿಂದ ಒಂದು ಹಿಡಿ ಮಣ್ಣನ್ನು ತೆಗೆದುಕೊಂಡು ಹೋಗಿ – ಆಗ ಕಟಕ ಲಗ್ನವಿರಬೇಕು ಮತ್ತು ಭರಣಿ, ವಿಶಾಖ ಅಥವಾ ಆರ್ದ್ರ ನಕ್ಷತ್ರವಿರಬೇಕು.

*ಜಮೀನನ್ನು ಉಳುವುದು:* ಶುಭ ಗ್ರಹಗಳ ಅಧಿಪತ್ಯಕ್ಕೆ ಸೇರಿದ ದಿವಸಗಳಲ್ಲಿ ಮಾತ್ರ ಉಳುಮೆ ಮಾಡಬೇಕು. ಸಾಧಾರಣವಾಗಿ ಸಿಂಹವಾಗಲಿ ಅಥವಾ ಸೂರ್ಯನಿರುವ ರಾಶಿಯಾಗಲಿ ಅಥವಾ ಸೂರ್ಯನ ನಕ್ಷತ್ರವಾಗಲಿ ಪ್ರಬುರವಾಗಿದ್ದರೆ ಅಂದರೆ ಚಾಲ್ತಿಯಲ್ಲಿದ್ದರೆ ಒಳ್ಳೆಯದು. ಪ್ರಶಸ್ತವಾದ ನಕ್ಷತ್ರಗಳು ರೋಹಿಣಿ, ಪುನರ್ವಸು, ಪುಷ್ಯ, ಉತ್ತರ, ಹಸ್ತ, ಅನೂರಾಧ, ಮೂಲ, ಉತ್ತರಾಷಾಢ, ಉತ್ತರಾಭಾದ್ರ.

ಚೌತಿ, ಷಷ್ಠಿ, ಅಷ್ಟಮಿ, ನವಮಿ, ದಶಮಿ, ಅಮಾವಾಸ್ಯೆ ಉಳಿದ ದಿವಸಗಳೆಲ್ಲ ಒಳ್ಳೆಯವು. ಉಳಲು ಪ್ರಾರಂಭಿಸುವಾಗ ವೃಷಭ, ಮಿಥುನ, ಕಟಕ, ಮಕರ ಅಥವಾ ಮೀನ ಲಗ್ನವಿರಲಿ ವೃಶ್ಚಿಕ ಕುಂಭ ಬೇಡ. ಮೇಷ ಲಗ್ನವಾದರೆ ವನಕ್ಕೆ ಹಾನಿ. ವೃಶ್ಚಿಕವಾದರೆ ಪಯರು ಬೆಂಕಿಯಿಂದ ನಾಶವಾಗುತ್ತದೆ. ಕುಂಭವಾದರೆ ಕಳ್ಳರ ಕಾಟವಿರುತ್ತದೆ. ಲಗ್ನದಲ್ಲಿ ಅಶುಭ ಗ್ರಹಗಳಿಲ್ಲದಿರಲಿ. ಶುಕ್ಲಪಕ್ಷವಾದರೆ ಒಳ್ಳೆಯದು.

ಮೊದಲ ದಿವಸ ಪೂರ್ವದ ಕಡೆಗೆ ಅಥವಾ ಉತ್ತರದ ಕಡೆಗೆ ಉಳಲು ಪ್ರಾರಂಭಿಸಬೇಕು.

***ಬಿತ್ತನೆ ಮತ್ತು ನಾಟಿ:*** ಹಸ್ತ, ಚಿತ್ರ, ಸ್ವಾತಿ, ಮಖ, ಪುಷ್ಯಮಿ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ರೋಹಿಣಿ, ರೇವತಿ, ಅಶ್ವಿನಿ, ಮೂಲ ಅಥವಾ ಅನೂರಾಧ ಈ ಯಾವುದೇ ನಕ್ಷತ್ರವಿರುವ ಶುಭ ತಿಥಿಯ ದಿವಸ ಯಾವ ಬಿತ್ತನೆ ಬೇಕಾದರೂ ಮಾಡಬಹುದು. ವಾರದ ಅಧಿಪತಿಯ ರಾಶಿಯನ್ನು ಲಗ್ನವಾಗಿ ಆರಿಸಿಕೊಳ್ಳಿ. ಚಂದ್ರ ಧನುಸ್ಸಿನಲ್ಲಿರುವಾಗ ಬೀಟ್ ಮತ್ತು ಕ್ಯಾರೆಟ್ ಬಿತ್ತಬಹುದು. ಜಲತತ್ವದ ರಾಶಿಯು ಉದಯಿಸುವಾಗ ಆಲೂಗಡ್ಡೆ ಮುಂತಾದ ಕಂದಮೂಲಗಳನ್ನು ನೆಡಬಹುದು. ಧನುಸ್ ಮೀನ ರಾಶಿಗಳು ಉದಯಿಸುವ ಕಾಲದಲ್ಲಿ ಗುರುವಾರದ ದಿವಸ ಫಲ ವೃಕ್ಷಗಳನ್ನು ನೆಡಬಹುದು. ವೃಷಭ ತುಲಾಗಳಲ್ಲಿ ಹೂ ಗಿಡಗಳನ್ನೂ ಕಡ್ಡಿಗಳನ್ನೂ ನೆಡಬಹುದು. ರಾಗಿ ಎಳ್ಳು ಮುಂತಾದ ಕರಿಯ ಧಾನ್ಯಗಳನ್ನು ಮಕರ ಕುಂಭಗಳಲ್ಲಿ ಬಿತ್ತುವುದು ಪ್ರಯೋಜನಕರ.

ಯಾವಾಗಲೂ ಸಂಬಂಧಪಟ್ಟ ವಾರದ ಅಧಿಪತಿಗೆ ಸೇರಿದ ರಾಶಿಯನ್ನು ಲಗ್ನವನ್ನಾಗಿ ಚುನಾಯಿಸಿಕೊಳ್ಳಿ. ಶುಕ್ಲಪಕ್ಷದ ಚಂದ್ರನು ಕಟಕದಲ್ಲಿರುವಾಗ ಟೊಮಾಟೊ ಬಿತ್ತಬೇಕು. ಮಕರ ಲಗ್ನ ಶುಭದಾಯಕವಲ್ಲ. ಉತ್ತಮ ಫಲ ಸಿಗಬೇಕಾದರೆ ಚಂದ್ರವೃದ್ಧಿಯಲ್ಲಿರಬೇಕು ಮತ್ತು ಕಟಕ, ವೃಶ್ಚಿಕ ಅಥವಾ ಮೀನ ಲಗ್ನವಿರಬೇಕು. ಸಾಧಾರಣವಾಗಿ ಕಟಕ ಲಗ್ನದಲ್ಲಿ ಬಿತ್ತಿದ ಬೀಜಗಳು ಹುಲುಸಾಗಿ ಬೆಳೆದು ಹೇರಳ ಫಲ ಕೊಡುತ್ತವೆ. ತುಲಾ ಲಗ್ನದಲ್ಲಾದರೆ ಇಳುವರಿ ಕಡಿಮೆಯಾದರೂ ಫಲ ಪುಷ್ಪಗಳು ದೊಡ್ಡದಾಗಿರುತ್ತವೆ. *ಮೇಷ:* ಬೆಳ್ಳುಳ್ಳಿ ಬಿತ್ತಿ ಜಯ ಪಡೆಯಬಹುದು. *ವೃಷಭ:* ಮೀಟ್, ದ್ವಿಪ ದ್ರಾಕ್ಷಿ, ಆಲೂಗಡ್ಡೆ, ಮೂಲಂಗಿ, ಈರುಳ್ಳಿ, ಬರ್ನಿಫ್. *ಮಿಥುನ:* ಇದು ಬಂಜೆ ರಾಶಿ. ಯಾವ ಬಿತ್ತನೆಗೂ ಉಪಯುಕ್ತವಲ್ಲ. *ಕಟಕ:* ಹೆಂಗಳ ಹುರುಳಿ, ಕೋಸು, ಮುಸುಕಿನ ಜೋಳ, ಸವುತೆ, ಲೆಟ್ಯೂಸ್, ಕಲ್ಲಂಗಡಿ, ಕುಂಬಳ, ಟೊಮೊಟೊ, ಹೂಕೋಸು, ಕರಬೂಜ, ಆಹಾರ ಧಾನ್ಯಗಳು. *ಸಿಂಹ:*

ಯಾವ ಬಿತ್ತನೆಗೂ ಪ್ರಯೋಜನವಿಲ್ಲ. ಆಲುಗಡ್ಡೆ ಮುಂತಾದ ಗೆಡ್ಡೆ ಗೆಣಸುಗಳಿಗೆ ಕೆಟ್ಟದ್ದು. *ಕನ್ಯ:* ಹೂ ಗಿಡಗಳು. *ತುಲಾ:* ಗೋಧಿ, ಚಿಕ್ಕ ಗೋಧಿ, ಜವೆ, ಭತ್ತ ಮತ್ತಿತರ ಗದ್ದೆ ಬೆಳೆಸುಗಳು. *ವೃಶ್ಚಿಕ:* ಬೆಳ್ಳುಳ್ಳಿ, ಈರುಳ್ಳಿ, *ಧನುಸ್:* ಮೆಣಸು ಮುಂತಾದ ವಸಂತದ ಬೆಳೆಗಳು ಮತ್ತು ಬೆಳ್ಳುಳ್ಳಿ. *ಮಕರ:* ಆಲೂಗಡ್ಡೆ ಮೂಲಂಗಿ, ಬರ್ನಿಫ್. *ಕುಂಭ:* ಕಪ್ಪು ಧಾನ್ಯಗಳು. ಕಾಳುಗಳು: *ಮೀನ:* ಸವುತೆ, ಕುಂಬಳ, ಕಲ್ಲಂಗಡಿ, ಕ್ಯಾರೆಟ್.

ನವಮಿ ವಿನಾ ಉಳಿದ ಬೆಸ ತಿಥಿಗಳು ಒಳ್ಳೆಯವು. ಬಿದಿಗೆ ಚೌತಿ ವಿನಾ ಉಳಿದೆಲ್ಲ ಸಮ ತಿಥಿಗಳನ್ನು ನಿವಾರಿಸಿಕೊಳ್ಳತಕ್ಕದ್ದು.

ಹೂ ಗಿಡಗಳ ಬೀಜಗಳನ್ನು ಮತ್ತು ಹಣ್ಣು ಬಿಡುವ ಬಳ್ಳಿಗಳ ಬೀಜಗಳನ್ನು ಮೃಗಶಿರ ಪುನರ್ವಸು ಹಸ್ತ ಚಿತ್ತ ಸ್ವಾತಿ ಅನೂರಾಧ ರೇವತಿ ನಕ್ಷತ್ರಗಳಲ್ಲಿ ಬಿತ್ತಬೇಕು. ಅಶ್ವಿನಿ ಅಡಿಕೆಗೆ ಅನುಕೂಲ. ಭರಣಿ ಸೋನಾಲಂ ಇಂಡಿಕರಿಗೆ ಒಳ್ಳೆಯದು. ರೋಹಿಣಿ ಮರಗಳಿಗೆ ಉತ್ತಮ. ಕಬ್ಬು ಪುನರ್ವಸು ನಕ್ಷತ್ರದಲ್ಲಿ ಚೆನ್ನಾಗಿ ಬೆಳೆಯುತ್ತದೆ. ಎಲ್ಲ ಕಾಳುಗಳೂ ಪುಷ್ಯ ನಕ್ಷತ್ರದಲ್ಲಿ ಹುಲುಸಾಗಿ ಬೆಳೆಯುತ್ತದೆ. ಸ್ವಾತಿ, ಶ್ರವಣ, ಭತ್ತದ ಬೆಳೆಗೆ ಶ್ರೇಷ್ಠ ಅನೂರಾಧ ಎಳ್ಳಿಗೂ, ಮೂಲ ಬಳ್ಳಿಗಳು ಬೇರುಗಳಿಗೂ, ಶತಭಿಷ ಕರಿ ಧಾನ್ಯಗಳ ಬೆಳೆಗೂ ಅನುಕೂಲ.

ಕುಂಭದಲ್ಲಿ ತೆಂಗಿನ ಸಸಿಯನ್ನು ನೆಡಬಹುದು. ಹಳೆಯ ಮುಹೂರ್ತ ಗ್ರಂಥವೊಂದರಿಂದ ಆಯ್ದ ಕೆಲವು ಭಾಗಗಳನ್ನು ಮುಂದೆ ಕೊಡುತ್ತೇವೆ.

ಭತ್ತವನ್ನು ಭಾನುವಾರ ಸೂರ್ಯ ಲಗ್ನದಲ್ಲಿರುವಾಗ ಬಿತ್ತಬೇಕು. ನೀರಿನಲ್ಲಿ ಬೆಳೆಯುವ ಹೂ ಗಿಡಗಳ ಬೀಜಗಳನ್ನು ಗುರುವಾರ ಗುರುವು ಲಗ್ನದಲ್ಲಿದ್ದಾಗ ಬಿತ್ತಬೇಕು. ಇತರೆ ಹೂಗಿಡಗಳ ಬೀಜಗಳನ್ನು ಮಂಗಳವಾರ ಕುಜ ಲಗ್ನದಲ್ಲಿರುವಾಗ ಬಿತ್ತಬೇಕು. ಬುಧನು ಲಗ್ನದಲ್ಲಿರುವಾಗ ತಾಳೆ ಜಾತಿಯ ಪಾಲ್ಮೆರ ಸಸಿಗಳನ್ನು ಬಿತ್ತಬೇಕು. ಗುರುವಾರ ಗುರುವು ಲಗ್ನದಲ್ಲಿರುವಾಗ/ದೀರ್ಘಕಾಲ ಫಲ ಬಿಡುವ ಗಿಡಗಳ ಸಸಿಗಳನ್ನು ನೆಡಬೇಕು. ಶುಕ್ರನು ಲಗ್ನದಲ್ಲಿರುವಾಗ ಶುಕ್ರವಾರದ ದಿವಸ ಹೂಗಿಡಗಳ ಸಸಿಗಳನ್ನು ನೆಡಬಹುದು. ಶನಿವಾರದ ದಿವಸ ಶನಿಯು ಲಗ್ನದಲ್ಲಿರುವಾಗ ನಡು ಹಗಲಿನಲ್ಲಿ ಕರಿಯ ಧಾನ್ಯಗಳ ಬೀಜಗಳನ್ನು ಬಿತ್ತಬೇಕು. ಎಲ್ಲ ಆರಂಭ ಕಾರ್ಯಗಳನ್ನು ಮಾಡಲೂ ಎಂಟನೆ ಮನೆಯಲ್ಲಿ ಯಾವ ಗ್ರಹವೂ ಇಲ್ಲದಂತೆ ನೋಡಿಕೊಳ್ಳತಕ್ಕದ್ದು.

***ಸಸಿ ಮತ್ತು ಮರ ಗಿಡಗಳನ್ನು ಸಮರುವುದು:*** ಶನಿಯು ಆರನೆ ಅಥವಾ ಹನ್ನೊಂದನೆ ಮನೆಯಲ್ಲಿರುವುದು ಉತ್ತಮ. ಕೇಂದ್ರದಲ್ಲಿ ಒಬ್ಬ ಶುಭವಿರುವಂತೆಯೂ

ಎಂಟನೆ ಮನೆ ಬರಿದಾಗಿರುವಂತೆಯೂ ನೋಡಿಕೊಂಡು ಲಗ್ನವನ್ನು ದೃಢಪಡಿಸಿ. ಮಂಗಳವಾರ, ರಿಕ್ತ ತಿಥಿಗಳು ಬೇಡ. ಎಲ್ಲ ಆರಂಭ ಕಾರ್ಯಗಳಲ್ಲೂ ಚಂದ್ರನ ಸ್ಥಾನ ಮುಖ್ಯ. ಚಂದ್ರ ಬಲಯುತನಾಗಿ, ರಾಹು, ಕೇತು, ಶನಿಗಳ ಪೀಡೆಗೆ ಒಳಗಾಗಿರದಂತೆ ನೋಡಿಕೊಳ್ಳಿ. ಚಂದ್ರ ಶುಭನಾಗಿರಬೇಕು.

***ಮರಗಳನ್ನು ಕಡಹುವುದು:*** ಮರವು ಗಟ್ಟಿಮುಟ್ಟಾಗಿಯೂ ಸಾರವತ್ತಾಗಿಯೂ ಬಾಳಿಕೆ ಬರುವಂತೆಯೂ ಇರಬೇಕಾದರೆ ಚಂದ್ರನು ಬಹುಳ ಮಾಸದ ಕಡೆಯ ವಾರದಲ್ಲಿರುವಾಗ ಮರ ಗಿಡಗಳನ್ನು ಕಡಹಬೇಕು. ಲಗ್ನವು ಶುಷ್ಕ ರಾಶಿಯಾಗಿರಬೇಕು, ಶುಷ್ಕ ಗ್ರಹದ ದೃಷ್ಟಿಗೊಳಗಾಗಿರುವುದು ಒಳ್ಳೆಯದು.

***ಫಸಲು ಕುಯ್ಯುವುದು:*** ಭರಣಿ, ರೋಹಿಣಿ, ಮೃಗಶಿರ, ಆರ್ದ್ರ, ಪುಷ್ಯಮಿ, ಮಖ, ಉತ್ತರ, ಹಸ್ತ, ವಿಶಾಖ, ಅನೂರಾಧ, ಉತ್ತರಾಷಾಢ, ಶ್ರವಣ ಈ ನಕ್ಷತ್ರಗಳು ಫಸಲನ್ನು ಕುಯ್ಯುವುದಕ್ಕೆ ಪ್ರಾರಂಭಿಸಲು ಅನುಕೂಲಕರ. ಚೌತಿ, ಅಷ್ಟಮಿ, ನವಮಿ, ಏಕಾದಶಿ, ದ್ವಾದಶಿ, ಚತುರ್ದಶಿ, ಅಮಾವಾಸ್ಯ ಬೇಡ. ವೃಷಭ, ಮಿಥುನ, ಕನ್ಯ, ತುಲ, ಧನುಸ್ ಅಥವಾ ಮೀನ ಲಗ್ನವಾಗಿರಬೇಕು.

***ಸುಗ್ಗಿ ಕೊಯ್ಲು:*** ಕೊಯ್ಲನ್ನು ಭರಣಿ ನಕ್ಷತ್ರವಿರುವಾಗ ಮೀನ ಲಗ್ನದಲ್ಲಿ, ಶ್ರವಣ ನಕ್ಷತ್ರವಿರುವಾಗ ವೃಶ್ಚಿಕ ಲಗ್ನದಲ್ಲಿ, ವಿಶಾಖ ನಕ್ಷತ್ರವಿರುವಾಗ ಕಟಕ ಲಗ್ನದಲ್ಲಿ ಪ್ರಾರಂಭಿಸಬೇಕು. ಮೇಲೆ ಕೊಟ್ಟಿರುವುವು ವಿಶೇಷ ಯೋಗಗಳು ಸಂಪತ್ಕರ.

***ಧಾನ್ಯವನ್ನು ಶೇಖರಿಸಿಡುವುದು:*** ಕೊಯ್ಲಾದ ಮೇಲೆ, ಧಾನ್ಯವನ್ನು ಸಂಗ್ರಹಿಸಿಡಬೇಕಷ್ಟೆ. ಈ ಕಾರ್ಯವನ್ನು ಭರಣಿ, ರೋಹಿಣಿ, ಮೃಗಶಿರ, ಪುಬ್ಬ, ಆರ್ದ್ರ, ಪುನರ್ವಸು, ಪುಷ್ಯಮಿ, ಉತ್ತರ, ಹಸ್ತ, ಸ್ವಾತಿ, ಅನೂರಾಧ, ಮೂಲ, ಶ್ರವಣ, ರೇವತಿ ನಕ್ಷತ್ರಗಳಿರುವ ದಿವಸಗಳಲ್ಲಿ ಕೈಕೊಳ್ಳುವುದು ಪ್ರಯೋಜನಕರ.

ಶನಿ ನಾಲ್ಕರಲ್ಲಿರಲಿ. ಚೌತಿ, ಷಷ್ಠಿ, ಅಷ್ಟಮಿ, ನವಮಿ, ದ್ವಾದಶಿ, ಚತುರ್ದಶಿ, ಅಮಾವಾಸ್ಯೆ ಬಿಟ್ಟು ಉಳಿದ ತಿಥಿಗಳೆಲ್ಲವೂ ಶುಭಪ್ರದ. ಸೋಮವಾರ, ಗುರುವಾರ, ಶುಕ್ರವಾರ, ಶನಿವಾರ ಒಳ್ಳೆಯವು. ಚಂದ್ರ, ಗುರು, ಶುಕ್ರ, ಶನಿಗಳ ಅಂಶಗಳೂ ಪ್ರಶಸ್ತವಾಗಿರಬೇಕು. ಮಂಗಳವಾರ, ಶನಿವಾರ ಬೇಡ. ಚರ ರಾಶಿಗಳನ್ನು ತ್ಯಜಿಸಬೇಕು. ಅವು ಧಾನ್ಯಕ್ಕೆ ಹುಳು ಬಿದ್ದು ಹಾಳಾಗುವಂತೆ, ಬೂಷ್ಟು ಹಿಡಿದು ಹೋಗುವಂತೆ ಮಾಡುತ್ತವೆ.

ವೃಷಭ ಲಗ್ನದಲ್ಲಿ ಮಾಘಮಾಸದಲ್ಲಿ ಮಖ ನಕ್ಷತ್ರ, ಫಾಲ್ಗುಣ ಮಾಸದಲ್ಲಿ ಉತ್ತರ ನಕ್ಷತ್ರ ಇದ್ದರೆ, ಅದು ಧಾನ್ಯ ಪರ್ವತ ಯೋಗ ಎನಿಸುತ್ತದೆ. ಈ

ಯೋಗದಲ್ಲಿ ಶೇಖರಿಸಿಟ್ಟ ಧಾನ್ಯ ಸಂಬಂಧಪಟ್ಟವರಿಗೆ ಸುಖ ಸಮೃದ್ಧಿಗಳನ್ನು ಕೊಡುತ್ತವೆ.

***ದನಗಳನ್ನು ಕೊಳ್ಳುವುದು ಮಾರುವುದು:*** ದನಕರುಗಳನ್ನು ಕೊಳ್ಳುವುದಕ್ಕೆ ಮತ್ತು ಮಾರುವುದಕ್ಕೆ ಅಶ್ವಿನಿ, ಪುನರ್ವಸು, ಪುಷ್ಯಮಿ, ಹಸ್ತ, ಸ್ವಾತಿ, ವಿಶಾಖ, ಜ್ಯೇಷ್ಠ, ರೇವತಿ, ನಕ್ಷತ್ರಗಳಿರಬೇಕು. ವೃಷಭ ಲಗ್ನವಿದ್ದರೆ ಉತ್ತಮ. ಎಂಟನೆ ಮನೆಯಲ್ಲಿ ಕುಜನಿಲ್ಲದೆ ಇರಲಿ.

***ಕುದುರೆಗಳನ್ನು ಕೊಳ್ಳುವುದು ಮಾರುವುದು:*** ಚಂದ್ರನೂ ಲಗ್ನಾಧಿಪತಿಯೂ ಮಿತ್ರರಾಗಿರಲಿ. ಅವರಿಬ್ಬರಿಗೂ ದ್ವಿರ್ದ್ವಾದಶ (2/12) ಸಂಬಂಧವಿಲ್ಲದಿರಲಿ. ಧನುರ್ಲಗ್ನವಿರುವಾಗ ವಹಿವಾಟು ನಡೆಸುವುದು ಉತ್ತಮ ಪಕ್ಷ. ಜೂಜು ಕುದುರೆಯನ್ನು ಕೊಳ್ಳಬೇಕಾದರೆ ಲಗ್ನವು ವಾಯುತತ್ತ್ವ ರಾಶಿಯಾಗಿರಲಿ.

*ಕುರಿ ಕೊಳ್ಳುವುದು:* ಲಗ್ನ ಮೇಷವಾಗಿರಲಿ. ಎಂಟನೆ ಮನೆಯಲ್ಲಿ ಶನಿಯಿಲ್ಲದೆ ಇರಲಿ. ವಹಿವಾಟು ಕಾಲದಲ್ಲಿ ಮೇಷವೋ, ಮಕರವೋ ಲಗ್ನವಾಗಿರಲಿ.

ನಾಯಿ, ಬೇಟೆ ನಾಯಿಗಳನ್ನು ಕೊಳ್ಳುವಾಗ ಲಗ್ನ ಮತ್ತು ಆರನ ಮನೆ ಬಲಯುತವಾಗಿರಲಿ. ಲಗ್ನವು ವಾಯು ತತ್ತ್ವದ್ದಾಗಿರುವಾಗ ಪಕ್ಷಿಗಳನ್ನು ಕೊಳ್ಳಬೇಕು. ಯಾವ ಪ್ರಾಣಿಯನ್ನೂ ಕೃತ್ತಿಕ, ಆರ್ದ್ರ, ಮಖ, ಆಶ್ಲೇಷ, ಸ್ವಾತಿ, ಅನೂರಾಧ ನಕ್ಷತ್ರಗಳಿರುವ ದಿವಸಗಳಂದು ಮಾರಬಾರದು.

ಬುದ್ಧಿವಂತಿಕೆಯಿಂದ ಬಿತ್ತುವ, ನೆಡುವ, ಕೊಯ್ಲು ಮಾಡುವ, ಪ್ರಾಣಿಗಳ ಸಾಕಣೆ ಮುಂತಾದವುಗಳಲ್ಲಿ, ಜ್ಞಾನಾನುಭವ ಇವು ತೃಪ್ತಿಕರವಾದ ಫಲ ಕೊಡುತ್ತವೆ. ಮಾಡಿದ ಪ್ರಯತ್ನವು ವಿಫಲವಾದರೆ ಆಗ ಜ್ಯೋತಿಷ ಶಾಸ್ತ್ರಿಯ ಸೂಚನೆಗಳನ್ನು ಅಸಡ್ಡೆ ಮಾಡಿದುದೇ ಒಂದು ನೆಪವಾಯಿತೇನೋ ಎಂಬುವಂತಾಗಬಾರದು.

# ಪ್ರಯಾಣ

ಮನುಷ್ಯ ಸ್ವಭಾವವು ಪರಮಶ್ರೇಷ್ಠವಾದ ವಿಭೂತಿಯಿಂದ ಹಿಡಿದು ಮಹತ್ತರವಾದ ಅಜ್ಞಾನದವರೆಗೆ ವ್ಯತ್ಯಾಸಗೊಂಡಿರುತ್ತದೆ. ನಾವು ಕಂಡರೂ ಕಾಣದಿದ್ದರೂ ಪ್ರಕೃತಿ ವ್ಯಾಪಾರ ನಡೆಯುತ್ತಿರುತ್ತದೆ. ಡಾ.ಜಾನ್ಸನ್ ಹೇಳಿದನೆಂದು ಪ್ರತೀತಿಇರುವಂತೆ ವಿಸ್ತಾರವಾಗಿ ದೃಷ್ಟಿಯನ್ನು ಹರಡಿಸಿ, ಚೀಣದಿಂದ ಪೆರುವರೆಗೆ ಅವಲೋಕನ ಮಾಡೋಣ. ಸಮೀಕ್ಷಣ, ಚಿಂತನ, ವಿಚಾರಶೀಲರಾದ ಮತಿಗಳು ತಮ್ಮ ದಿನವಹೀ ವ್ಯವಹಾರಗಳಲ್ಲಿ ವಿವಿಧವಾದ ಪ್ರಕರಣಗಳನ್ನು ಗಮನಿಸುತ್ತಾರೆ. ಅವುಗಳಲ್ಲಿ ಜರಗುವ ವಿಜಯಪರಾಭವಗಳಿಗೆ ಯಾವ ಸಂಬಂಧವೂ ಕೂಡ ತೋರಿಕೆಗೆ ಕಂಡುಬರುವುದಿಲ್ಲ. ಆದರೆ ಜೋಪಾನವಾಗಿ ವಿಶ್ಲೇಷಿಸಿದರೆ, ಭೂಮಿಯ ಮೇಲೆ ನಡೆಯುವ ವಿದ್ಯಮಾನಗಳಿಗೂ ಹಲ ಕೆಲವು ಅಗೋಚರವಾದ ಕ್ರಿಯಾಶಕ್ತಿಗಳಿಗೂ ಯಾವುದೋ ಅನುಬಂಧವಿರುವುದು ವೇದ್ಯವಾಗುತ್ತದೆ. ಆದರೆ ಅವುಗಳಿಗಿರುವ ನೈಜವಾದ ಕಾರಣಗಳು ಪ್ರಾಜ್ಞರಿಗೆ ಮಾತ್ರ ಅರಿವಾಗುತ್ತವೆ. ಉದಾಹರಣೆಗೆ ಒಬ್ಬಾತ ಕೆಟ್ಟ ಮುಹೂರ್ತದಲ್ಲಿ ಕಾರ್ಯನಿಮಿತ್ತ ಹೊರಡುತ್ತಾನೆನ್ನಿ. ಅವನು ಹತಾಶನಾದರೆ ಅದಕ್ಕೆ ಗ್ರಹಗಳು ಕಾರಣವಾಗುವುದಿಲ್ಲ. ಗ್ರಹಗಳು ನಡೆಯುವ ಘಟನೆಗಳಿಗೆ ಸೂಚಿಗಳು ಮಾತ್ರ. ಆ ಮನುಷ್ಯ ಹೊರಟ ವೇಳೆಯಲ್ಲಿ ಅಪಜಯವನ್ನುಂಟುಮಾಡಬಲ್ಲಂಥ ಪ್ರಭಾವಗಳು ಚಾಲ್ತಿಯಲ್ಲಿದ್ದವು ಎಂದು ಮಾತ್ರ ತೋರ್ಪಡಿಸುತ್ತವೆ. ಕಾಲದ ಪ್ರಭಾವವು ಯಾವಾಗಲೂ ಒಂದೇ ತರದ್ದಾಗಿರುವುದಿಲ್ಲ ಎಂದು ಹೆಚ್ಚು ವಿಶದೀಕರಿಸಬೇಕಾಗಿಲ್ಲ.

ಸೂರ್ಯನ ಚಲನದಿಂದಾಗಿ ವಿವಿಧ ವೇಳೆಗಳಲ್ಲಿ ಬೆಳಕು ಶಾಖಗಳಲ್ಲಿ ವ್ಯತ್ಯಾಸವಾಗುತ್ತದೆ ಎಂಬುದು ಎಲ್ಲ ತಿಳಿವಳಿಕಸ್ಥರ ಅನುಭವಕ್ಕೂ ಬಂದಿರುವ ವಿಷಯವೇ ಆಗಿದೆ. ಇದು ಬಾಹ್ಯ ಇಂದ್ರಿಯಗಳಿಗೆ ಗೋಚರವಾದದ್ದು, ಪ್ರದರ್ಶನ ಸಾಧ್ಯವಾದುದು. ಕೆಲವು ಅಗೋಚರವಾದ ಪ್ರಭಾವಗಳೂ ಕ್ರಿಯಶಕ್ತಿ

ಗಳೂ ಉಚ್ಚತರವಾದ ಅಂತಸ್ತಿನಲ್ಲಿರುವ ಬುದ್ಧಿ ವಿಶೇಷಕ್ಕೆ ಮಾತ್ರ ಗ್ರಾಹ್ಯವಾಗಿ ರುತ್ತವೆ. ಈ ಪ್ರಭಾವಗಳನ್ನು ಪ್ರಾಚೀನ ಮಹರ್ಷಿಗಳು ಗುರುತಿಸಲು ಸಮರ್ಥ ರಾಗಿದ್ದರು. ವರ್ಷದ ಯಾವ ತಿಂಗಳು ದಿವಸ ಕಾಲಗಳಲ್ಲಿ ಕೈಗೊಂಡ ಪ್ರಯಾಣವು ಯಾವ ತರಹ ಪ್ರತಿಫಲ ಕೊಡುತ್ತದೆ ಎಂದು ಅವರಿಗೆ ಗೊತ್ತಿತ್ತು.

ಆಧುನಿಕ ಕಾಲದಲ್ಲಿ ಪ್ರಯಾಣ ಸೌಕರ್ಯಗಳೇನೋ ಪರಿಷ್ಕಾರಗೊಂಡಿವೆ. ಮನುಷ್ಯ ಕಲ್ಪನೆಗೆ ನಿಲುಕುವಷ್ಟು ಮಟ್ಟನ ಸೌಕರ್ಯಗಳನ್ನೂ ಪ್ರಯಾಣಿಕರಿಗೆ ಒದಗಿಸಲಾಗಿದೆ. ಆದರೆ ಜ್ಯೋತಿಷದ ವಿಧಿನಿಯಮಗಳನ್ನು ಕಡೆಗೊಂಡಿರುವ ಕಾರಣ ಭಯಂಕರವಾದ ಅಪಘಾತಗಳೂ ಪ್ರಾಣನಷ್ಟವೂ ಉಂಟಾಗುತ್ತಿದೆ. ಮನುಷ್ಯ ಸತತವಾಗಿ ಗ್ರಹಗಳಿಂದಲೂ ನಕ್ಷತ್ರಾಂತರ ಅಂತರಿಕ್ಷ ಕ್ಷೇತ್ರಗಳಿಂದಲೂ ಹೊರ ಡುವ ವಿವಿಧ ಪ್ರಕಾರವಾದ ಶಕ್ತಿಗಳ ಅಘಾತಕ್ಕೆ ಗುರಿಯಾಗಿದ್ದಾನೆ. ಯಾವುದೇ ಗಳಿಗೆಯಲ್ಲಿ ಚಾಲ್ತಿಯಲ್ಲಿರುವ ಶಕ್ತಿಯ ಸ್ವರೂಪವು ಆ ವೇಳೆಯಲ್ಲಿರುವ ಗ್ರಹ ಗಳ ಸ್ಥಿತಿಗತಿಗಳನ್ನು ಅವಲಂಬಿಸುತ್ತದೆ. ಅದುದರಿಂದ ಒಳ್ಳೆ ಗಳಿಗೆಯಲ್ಲಿ ಪ್ರಯಾ ಣವನ್ನು ಕೈಕೊಂಡರೆ ಆ ವ್ಯಕ್ತಿ ತನ್ನ ಉದ್ದಿಷ್ಟ ಕಾರ್ಯವನ್ನು ನೆರವೇರಿಸಿಕೊಂಡು ಕ್ಷೇಮವಾಗಿ ಮನೆ ತಲುಪುತ್ತೇನೆ ಎಂದು ಧಾರಾಳವಾಗಿ ಹೇಳಬಹುದು. ಗ್ರಹ ಗಳ ಸ್ಫುರಣಗಳು ಪರಸ್ಪರವಾಗಿ ಸಮರಸವಾಗಿರದ ವೇಳೆಯಲ್ಲಿ ಪ್ರಯಾಣವನ್ನು ಕೈಕೊಂಡ ಕಾರಣ ಪ್ರಾಣಹಾನಿ ಧನಹಾನಿ ದುಃಖ ದೌರ್ಭಲ್ಯಗಳು ಉಂಟಾಗಿ ರುವ ನಿದರ್ಶನಗಳನ್ನು ಎಷ್ಟು ಬೇಕಾದರೂ ಕೊಡಬಹುದು.

ಒಬ್ಬ ವ್ಯಕ್ತಿ ತುರ್ತು ಕಾರ್ಯದ ಮೇಲೆ ವಿದೇಶಕ್ಕೆ ಪ್ರಯಾಣ ಮಾಡಬೇಕಾ ಗಿದೆ. ಇಲ್ಲಿ ಅವನು ಅಪೇಕ್ಷಿಸಬೇಕಾದುದು ಹಣದ ಲಾಭ, ಒಳ್ಳೆ ಆರೋಗ್ಯ ಮತ್ತು ಕ್ಷೇಮವಾದ ಪ್ರಯಾಣ. ವಾದಕ್ಕೋಸ್ಕರ ಪ್ರಯಾಣ ಹೊರಡುವ ವೇಳೆ ಯಲ್ಲಿ ಅವನು ಆರೋಗ್ಯವಂತನಾಗಿರುತ್ತಾನೆ. ಕೈತುಂಬ ಹಣವಿರುತ್ತದೆ. ಪ್ರಯಾ ಣದ ವ್ಯವಸ್ಥಾಪಕರು ಅವನಿಗೆ ಸಕಲ ಸೌಕರ್ಯಗಳನ್ನು ಒದಗಿಸಿರುತ್ತಾರೆ ಅನ್ನೋಣ. ಎಲ್ಲವೂ ಇಷ್ಟು ಸಮರ್ಪಕವಾಗಿರುವಾಗ ಪ್ರಯಾಣಕ್ಕೆ ಶುಭ ಮುಹೂರ್ತ ಕೇಳಬೇಕಾದರೂ ಏಕೆ ಎಂದು ಅತ ಕುಹಕ ಮಾಡಬಹುದು.

ಆ ಬಡಪಾಯಿ ತಿಳಿದುಕೊಳ್ಳಬೇಕಾದ ಒಂದಂಶವಿದೆ. ಪ್ರಪಂಚದ ಭೌತಿಕ ಮಾನಸಿಕ ವ್ಯಾಪಾರಗಳೆಲ್ಲವೂ ಪರಸ್ಪರ ಹೊಸೆದುಕೊಂಡಿರುತ್ತವೆ. ವಿಭಿನ್ನವಾದ ಎರಡು ಸಂಗತಿಗಳಿಗೆ ಯಾವ ಸಂಬಂಧವೂ ಕಂಡುಬರದೆ ಇದ್ದರೂ ವ್ಯಾವಹಾ ರಿಕವಾಗಿ ಇದ್ದೇ ಇರುತ್ತದೆ. ಅದೃಷ್ಟದ ಸೆಳೆತವನ್ನು ಕಡೆಗಾಣುವ ಮನುಷ್ಯ ತಾನು ಸರ್ವತಾ ಮೈಮರೆತಿರುವಾಗ ಒದಗಬಹುದಾದ ಅಪಾರವಾದ ಹಾನಿಗೆ

ಯಾವುದು ಕಾರಣೀಭೂತವೋ ಅದನ್ನೇ ಉಪೇಕ್ಷಿಸಿದಂತೆ ಆಗುತ್ತದೆ. ಪ್ರಕೃತಿ ನಿಯಮಗಳಲ್ಲಿ ಕೆಲವು ಗೋಚರ, ಹಲವು ಅಗೋಚರ. ಈ ನಿಯಮಗಳು ಯಾವುವೂ ಭೌತಿಕ ಕ್ಷೇತ್ರವಲ್ಲಾಗುತ್ತಿರುವ ಯಾವುದೇ ಇತ್ತೀಚಿನ ಆವಿಷ್ಕಾರವೊಂದರಿಂದಲೇ ನಿಯಂತ್ರಿತವಾಗುವುದಿಲ್ಲ. ದಿವಂಗತ ಶ್ರೀ ಎಂ. ಸ್ಟೆಡ್ ಅವರು 3000 ಜನರೊಡನೆ ಪರಮೋತ್ತಮವಾದ ವೈಜ್ಞಾನಿಕ ವಿಧಿಗಳನುಸಾರ ರಚಿತವಾಗಿದ್ದ ಹಡಗಿನಲ್ಲಿ ಪ್ರಯಾಣ ಮಾಡಿದರು. ಆದರೆ ಈ ಟೈಟಾನಿಕವನ್ನು ನೀರ್ಗಲ್ಲ ಗುಡ್ಡವೊಂದು ಬಂದು ಅಡರಿ ಧ್ವಂಸ ಮಾಡಿತು. ಹಡಗಿನಲ್ಲಿದ್ದವರೆಲ್ಲ ಒಂದೆರಡು ಗಂಟೆಗಳೊಳಗಾಗಿ ಮಡಿದರು. ಲಾರ್ಡ ಕಿಚನರ್ ಮತ್ತು 600 ಮಂದಿ ಅಧಿಕಾರಿಗಳು ಮಜಬೂತಾದ ಸಂಗ್ರಾಮ ನೌಕೆಯೊಂದರಲ್ಲಿ ಹೊರಟರು. ಆದರೆ ಒಂದು ವಿಷ ಗಳಿಗೆಯಲ್ಲಿ ಅವರೆಲ್ಲರೂ ಐದೇ ನಿಮಿಷಗಳಷ್ಟು ಕಾಲದಲ್ಲಿ ಮುಳುಗಿ ಸತ್ತರು. ದಿನವಹೀ ನಾವು ಪತ್ರಿಕೆಗಳಲ್ಲಿ ವಿಮಾನ, ರೈಲ್ವೆ, ವಾಹನ ಅಪಘಾತಗಳನ್ನು ಓದುತ್ತಿರುತ್ತೇವೆ. ಸಹಸ್ರಾರು ಗಂಡಸರು ಹೆಂಗಸರು ಮಕ್ಕಳು ಸಾಯುತ್ತಾರೆ. ಕಾಲಮಾನದ ಮುಹೂರ್ತವೆಂಬ ಅಂಶಕ್ಕೆ ಗಮನ ಕೊಟ್ಟರೆ ಹಲವು ಅಪಘಾತಗಳನ್ನು ತಪ್ಪಿಸಬಹುದು. ಅತ್ಯಂತ ಪ್ರಬುದ್ಧರೆನಿಸಿದ ರಾಷ್ಟ್ರಗಳೂ ಪ್ರಬುದ್ಧರಾದ ವ್ಯಕ್ತಿಗಳೂ ಕೇವಲ ಡಂಭ ಪೂರ್ವಾಗ್ರಹಗಳ ಕಾರಣದಿಂದಲೂ ಹಿಂದಿನ ಕಾಲದ ಮಹಾಮೇಧಾವಿಗಳೂ ಬಿಟ್ಟು ಹೋಗಿರುವ ಜ್ಞಾನಭಂಡಾರವನ್ನು ಕಡೆಗಂಡಿರುವ ಕಾರಣದಿಂದಲೂ ಮಹತ್ತಮವಾದ ವಿಪತ್ತುಗಳನ್ನು ಅನುಭವಿಸಿದ್ದಾರೆ.

ಪ್ರಾಚೀನರು ವಿವಿಧೋದ್ದೇಶಗಳಿಗಾಗಿ ಕೈಕೊಳ್ಳುವ ಪ್ರಯಾಣಗಳನ್ನು ಕುರಿತು ಜಾಗರೂಕತೆಯಿಂದ ಪರಿಶೀಲನೆ ಮಾಡಿದ್ದಾರೆಂದು ಕಾಣಿಸುತ್ತದೆ. ಈ ವಿಷಯವಾಗಿ ವಿಸ್ತಾರವಾದ ಸಾಹಿತ್ಯವಿದೆ. ಯಥಾಪ್ರಕಾರ, ಈ ವಿಷಯ ಕುರಿತ ವಿವಿಧ ಗ್ರಂಥಗಳಲ್ಲಿ ಕೆಲವು ಭಿನ್ನಾಭಿಪ್ರಾಯಗಳೂ ಇವೆ. ಈ ಸಂದರ್ಭದಲ್ಲಿ ಯಾವುವು ಆಳವಲ್ಲದ ಹೊರ ತೋರಿಕೆಯ ವಿಷಯಗಳೋ ಅವನ್ನು ನಾವಿಲ್ಲಿ ಕೈಬಿಟ್ಟು ಪ್ರಯಾಣಕ್ಕೆ ಅಥವಾ ಯಾತ್ರೆಗೆ ಅನ್ವಯವಾಗಿರುವಂತೆ ಯಾವುವು ಸಾರಭೂತವೋ ಆ ಜ್ಯೋತಿಷಿಕ ತತ್ವಗಳ ವಿಶದೀಕರಣಕ್ಕೆ ಮಾತ್ರ ಪ್ರಯತ್ನ ಪಟ್ಟಿದ್ದೇನೆ.

**ಪ್ರಯಾಣಗಳು :**

ಉತ್ಕೃಷ್ಟ ತಿಥಿಗಳು ಬಿದಿಗೆ, ತದಿಗೆ, ಪಂಚಮಿ, ಸಪ್ತಮಿ, ದಶಮಿ, ಏಕಾದಶಿ, ತ್ರಯೋದಶಿ. ಶುಕ್ಲಪಕ್ಷ ಕೃಷ್ಣ ಪಕ್ಷಗಳ ಚತುರ್ದಶಿಯನ್ನು ಸರ್ವಥಾ ಬಿಡತಕ್ಕುದು.

ಮುಂದೆ ಕೊಟ್ಟಿರುವ ನಕ್ಷತ್ರಗಳಲ್ಲಿ ಪ್ರಯಾಣ ಕೈಕೊಂಡರೆ, ಅಂಥ ವ್ಯಕ್ತಿ ತನ್ನ ಕೆಲಸವನ್ನು ಸಮರ್ಪಕವಾಗಿ ಪೂರೈಸಿಕೊಂಡು ಬೇಗ ಹಿಂತಿರುಗುತ್ತಾನೆಂದು ಭಾವಿಸಿದೆ. ಮೃಗಶಿರ, ಅಶ್ವಿನಿ, ಪುಷ್ಯ, ಪುನರ್ವಸು, ಹಸ್ತ, ಅನೂರಾಧ, ಶ್ರವಣ, ಮೂಲ, ಧನಿಷ್ಠ, ರೇವತಿ ಪ್ರಯಾಣವನ್ನು ಪ್ರಾರಂಭಿಸಲು ನಕ್ಷತ್ರದ ಎರಡನೆ ಮೂರನೆ ಅಥವಾ ಕಡೆಯ ಪಾದ ಪ್ರಶಸ್ತ. ಸಾಧ್ಯವಾದಷ್ಟು ಮಟ್ಟಿಗೂ ಮೊದಲ ಪಾದವನ್ನು ನಿವಾರಿಸುವುದು ಉತ್ತಮ ಪಕ್ಷ.

ಕೃತ್ತಿಕ, ಭರಣಿ, ಆಶ್ಲೇಷ, ವಿಶಾಖ, ಪುಬ್ಬ, ಪೂರ್ವಾಭಾದ್ರ, ಆರ್ದ್ರ ನಕ್ಷತ್ರ ದಿವಸಗಳಲ್ಲಿ ಪ್ರಯಾಣ ಬೆಳೆಸಕೂಡದು. ಈ ಪೈಕಿ ಮುಂದೆ ಕೊಟ್ಟಿರುವಂತೆ ಆಯಾ ನಕ್ಷತ್ರಗಳ ಕೆಟ್ಟ ಗಳಿಗೆಗಳನ್ನು ಬಿಟ್ಟರೆ ಉಳಿದ ಭಾಗ ಪ್ರಯಾಣಕ್ಕೆ ತಕ್ಕದೆಂದು ಭಾವಿಸಬಹುದು. ಕೃತ್ತಿಕ 13 ಗಳಿಗೆ; ಭರಣಿ–7; ಮಖ –14;ಪುಬ್ಬ – ಪೂರ್ವಾಷಾಢ, ಪೂರ್ವಾಭಾದ್ರ –16; ಸ್ವಾತಿ, ಆಶ್ಲೇಷ, ವಿಶಾಖ –14; ನಮ್ಮ ಅಭಿಪ್ರಾಯದಲ್ಲಿ ಭರಣಿ ಕೃತ್ತಿಕೆಗಳಲ್ಲಿ ಪ್ರಯಾಣ ಕೈಕೊಳ್ಳದೆ ಇರುವುದೇ ಯುಕ್ತವೆಂದು ಕಂಡುಬಂದಿದೆ. ಉಳಿದವುಗಳಲ್ಲಿ ಪ್ರಯಾಣ ಬೆಳೆಸಬಹುದು.

ಭರಣಿ ಕೃತ್ತಿಕೆಗಳು ಸರ್ವಥಾ ತ್ಯಾಜ್ಯ ಎಂದು ನಾವು ಒತ್ತಿ ಹೇಳಬಯಸು ತ್ತೇವೆ.

ಶನಿವಾರ, ಸೋಮವಾರ, ಪೂರ್ವದಿಕ್ಕಿಗೆ ಪ್ರಯಾಣ ಮಾಡಬೇಡಿ. ಗುರು ವಾರ ದಕ್ಷಿಣ ದಿಕ್ಕಿಗೂ, ಭಾನುವಾರ, ಶುಕ್ರವಾರ ಪಶ್ಚಿಮ ದಿಕ್ಕಿಗೂ, ಬುಧವಾರ ಮಂಗಳವಾರ ಉತ್ತರದ ಕಡೆಗೂ ಪ್ರಯಾಣ ಕೂಡದು. ಈ ಮುಂಚೆ ಹೇಳಿ ರುವ ನಿಷೇಧಗಳಿಗೆ ಕೆಲವು ಕಾಲ ಮಿತಿಗಳಿವೆ. ಗುರುವಾರ 22 ಗಳಿಗೆಗಳ ತರುವಾಯ, ಮಂಗಳವಾರ, ಬುಧವಾರ 12 ಗಳಿಗೆಗಳ ತರುವಾಯ, ಶುಕ್ರ ವಾರ, ಭಾನುವಾರ 15 ಗಳಿಗೆಗಳ ತರುವಾಯ, ಶನಿವಾರ, ಸೋಮವಾರ, 8 ಗಳಿಗೆಗಳ ತರುವಾಯ ಬೇಕಾದರೆ ಪ್ರಯಾಣ ಕೈಕೊಳ್ಳಬಹುದು. ನಮ್ಮ ಅಭಿಪ್ರಾ ಯದಲ್ಲಿ ಮಂಗಳವಾರ ಪ್ರಯಾಣವನ್ನು ಕೈಬಿಡುವುದು ಉತ್ತಮ.

ಮೇಷ, ವೃಷಭ, ಕಟಕ, ಸಿಂಹ, ತುಲ, ಧನುಸ್, ಪ್ರಯಾಣ ಹೊರಡುವು ದಕ್ಕೆ ಅನುಕೂಲವಾದ ರಾಶಿಗಳು.

ಪ್ರಯಾಣ ಕಾಲದಲ್ಲಿ ಜನ್ಮರಾಶಿಯು ಉದಯವಾಗುತ್ತಿದ್ದರೆ, ಅದು ಅತ್ಯಂತ ಉತ್ಕೃಷ್ಟ. ಆದರೆ ಅದು ಜನ್ಮಲಗ್ನದ ರಾಶಿಯಾಗಿರಬಾರದು. ಜನ್ಮಲಗ್ನದಿಂದ ಐದನೆ ಏಳನೆ ಒಂಭತ್ತನೆ ರಾಶಿ ಉದಯವಾಗುವ ಕಾಲದಲ್ಲೂ ಪ್ರಯಾಣ ಕೂಡದು.

ಪ್ರಯಾಣ ಹೊರಡುವ ಕಾಲದಲ್ಲಿ ಗುರುವೋ ಶುಕ್ರನೋ ಲಗ್ನದಲ್ಲಿರುವುದು ಒಳ್ಳೆಯದು. ಇದು ಪ್ರಯಾಣವನ್ನು ಜಯಪ್ರದವನ್ನಾಗಿಸುತ್ತದೆ.

ಪ್ರಾಚೀನ ಜ್ಯೋತಿಷ ಶಾಸ್ತ್ರ ಗ್ರಂಥಗಳಲ್ಲಿ ವಿವಿಧ ನಕ್ಷತ್ರಗಳಿರುವಾಗ ವಿವಿಧ ದಿಕ್ಕುಗಳ ಕಡೆ ಪ್ರಯಾಣ ಮಾಡಕೂಡದೆಂದು ನಿಷೇಧಿಸುವ ಹಲವಾರು ವಿಧಾಯಕಗಳಿವೆ. ತರುವಾಯ ಯೋಗಿನಿ, ಚಂದ್ರಗರ್ಭ, ಯಾತ್ರಾ ಫಣಿಚಕ್ರ ಮುಂತಾದ ವಿಚಾರಗಳೂ ಇವೆ. ಇವೆಲ್ಲ ಅವರಂತರಕ್ಕೆ ಹಾನಿ. ವಾಸ್ತವವಾಗಿ ಎಲ್ಲ ದೃಷ್ಟಿಗಳಿಂದಲೂ ಸಮರ್ಪಕವಾಗಿ ಕಂಡುಬರುವಂಥ ವಿಷಯವನ್ನು ಚುನಾಯಿಸುವುದು ತುಂಬ ಕಷ್ಟ.

ಆದಕಾರಣ, ವಾಚಕರು ಮೇಲೆ ಕೊಟ್ಟಿರುವಷ್ಟು ಪರಿಗಣನೆಗೆ ಮಾತ್ರ ಪರಿಮಿತಿಪಡಿಸಿಕೊಂಡು ಪ್ರಯಾಣದ ದಿವಸವನ್ನು ಆಯ್ಕೆ ಮಾಡುವುದು ಯುಕ್ತ. ಮತ್ತು ತುರ್ತು ಪ್ರಸಂಗಗಳಲ್ಲಿ ಜ್ಯೋತಿಷದ ವಿಧಿ ನಿಷೇದಗಳಿಗೆ ಒಪ್ಪಿತವಾಗುವಂತೆ ನಡೆಯುವುದು ಅಸಾಧ್ಯವೇ ಸರಿ. ಉದಾಹರಣೆಗೆ ನೆಂಟನೋ ಸ್ನೇಹಿತನೋ ಸಕತ್ ಖಾಯಿಲೆ ಮಲಗಿದ್ದಾನೆನ್ನಿ. ಅವನನ್ನು ಹೋಗಿ ಕಾಣಲೇಬೇಕು. ಆಗ ಪ್ರಶಸ್ತವಾದ ದಿವಸ ಕಾಲಗಳನ್ನು ಹುಡುಕುತ್ತ ಕುಳಿತಿರಲು ಆಗುವುದಿಲ್ಲ. ಅಂಥ ಸಂದರ್ಭಗಳಲ್ಲಿ ಹೊರಡಬೇಕಾದ ದಿವಸ ಪ್ರಶಸ್ತವಾದ ಹೋರೆಯಲ್ಲಿ ಹೊರಡುವುದು ಉತ್ತಮ ಪಕ್ಷ. ಯಾತ್ರೆಗಾಗಿಯೋ ವಿಹಾರಕ್ಕಾಗಿಯೋ ವ್ಯಾಪಾರ ವ್ಯವಹಾರಕ್ಕಾಗಿಯೋ ಹೊರಡುವಾಗ ಮುಂಚೆಯೇ ತಕ್ಕ ಏರ್ಪಾಡುಗಳನ್ನು ಮಾಡಿಕೊಳ್ಳಬಹುದಾದ ಕಾರಣ ಎಲ್ಲ ಜ್ಯೋತಿಷ ಅವಶ್ಯಕತೆಗಳಿಗೂ ತಕ್ಕ ದಿವಸವನ್ನು ಗೊತ್ತುಪಡಿಸಿಕೊಳ್ಳಬಹುದು. ಪ್ರಯಾಣವನ್ನು ಗೊತ್ತುಪಡಿಸಿಕೊಳ್ಳುವುದಕ್ಕೆ ಅವಶ್ಯಕವಾದ ಅಂಶಗಳು ಯಾವುವೆಂದರೆ (1) ಒಳ್ಳೆಯ ತಿಥಿ, (2) ಅನುಕೂಲವಾದ ನಕ್ಷತ್ರ (3) ಬಲಯುತವಾದ ಲಗ್ನ (4) ಪಂಚಕ ದೋಷ ನಿವಾರಣೆ. ಇವಿಷ್ಟನ್ನು ಮಾಡಿದರೆ ಎಲ್ಲ ಜ್ಯೋತಿಷ ನಿಯಮಗಳನ್ನು ಪಾಲಿಸಿದಂತೆ ಆಗುತ್ತದೆ.

ಸಾಧಾರಣ ಮನುಷ್ಯನಿಗೆ ಮುಂದೆ ಕೊಟ್ಟಿರುವ ಸಾಮಾನ್ಯವಾದ ಯೋಗಗಳು ಅತ್ಯಂತ ಉಪಯುಕ್ತವಾದವು:

(1) ಪ್ರಯಾಣ ಹೊರಡುವ ವೇಳೆಯಲ್ಲಿ ಚಂದ್ರ ಪ್ರಬಲನಾಗಿ ಲಗ್ನದಲ್ಲಿ ಸುಸ್ಥಿತನಾಗಿರಬೇಕು.

(2) ಮೇಷ ತುಲಾ ಸಂಕ್ರಮಣಗಳನ್ನೂ ಮತ್ತು ಇತರೆ ಮಾಸ ಸಂಕ್ರಮಣ ಕಾಲಗಳನ್ನೂ ತ್ಯಜಿಸಿ.

(3) ಚಂದ್ರ ಮೂರನೆ, ಆರನೆ, ಒಂಭತ್ತನೆ ಅಥವಾ ಹನ್ನೆರಡನೆ ಮನೆಯಲ್ಲೂ ಗುರುವು ಲಗ್ನಕೇಂದ್ರದಲ್ಲೂ ಇರಲಿ.

(4) ಚಂದ್ರನು ಲಗ್ನದಲ್ಲಿ, ಗುರುವೋ ಶುಕ್ರನೋ ಕೇಂದ್ರದಲ್ಲಿರುವುದರಿಂದ, ಬಲಗೊಂಡಿರುವಾಗ ಪ್ರಯಾಣ ಮೊರಡಿ.

(5) ಲಗ್ನದಲ್ಲಿ ಗುರು, ಎಂಟನ್ನು ಬಿಟ್ಟು ಬೇರೆಲ್ಲಾದರೂ ಚಂದ್ರ ಇದ್ದರೆ ಅದು ಸುಯೋಗ.

(6) ಚಂದ್ರ ಏಳರಲ್ಲೂ ಶುಕ್ರ ಬುಧರು ನಾಲ್ಕರಲ್ಲೂ ಇದ್ದಾಗ ಪ್ರಯಾಣ ಸುಗಮವೂ ಶಾಂತವೂ ಆಗಿರುತ್ತದೆ.

(7) ಬುಧ ನಾಲ್ಕರಲ್ಲಿ, ಗುರು ಎರಡರಲ್ಲಿ ಅಥವಾ ಏಳರಲ್ಲಿ ಇದ್ದರೆ ಉಳಿದೆಲ್ಲ ದುಷ್ಟ ಪ್ರಭಾವಗಳಿಗೂ ನಿವಾರಕ.

(8) ಶುಭರು ಕೇಂದ್ರಗಳಲ್ಲೋ ಕೋಣಗಳಲ್ಲೋ ಇದ್ದರೆ ಸಮಸ್ತ ದೋಷಗಳನ್ನೂ ತೊಡೆದು ಹಾಕಲು ಸಮರ್ಥರಾಗಿರುತ್ತಾರೆ.

(9) ಗುರು ಲಗ್ನದಲ್ಲಿ, ಅಶುಭರು ಉಪಚಯಗಳಲ್ಲಿ, ಶುಕ್ರನು ಏಳಲ್ಲದೆ ಬೇರೆ ಯಾವುದೇ ಮನೆಯಲ್ಲಿ ಇರುವುದಾದರೆ ಅದು ಆದರ್ಶಪ್ರಾಯವಾದ ಯೋಗ.

***ಹತ್ತಿರದ ಪ್ರಯಾಣದ :*** ಲಗ್ನ ಮತ್ತು ಚಂದ್ರ ಬಲಯುತವಾಗಿರಲಿ. ಇವೆರಡೂ ಸಾಧ್ಯವಿಲ್ಲದಿರುವಾಗ, ತಾರಾಬಲ ಚಂದ್ರ ಬಲಗಳನ್ನು ಗಮನಿಸಿ, ಅತ್ಯಂತ ಪ್ರಬಲ ಗ್ರಹದ ಹೋರೆಯಲ್ಲಿ ಪ್ರಯಾಣ ಹೊರಡಿ.

***ದೂರ ಪ್ರಯಾಣಗಳು :*** ಈ ಅಧ್ಯಾಯದಲ್ಲಿ ಮುಂಚೆ ಕೊಟ್ಟಿರುವ ಎಲ್ಲ ವಿಧಿ ನಿಷೇಧಗಳನ್ನೂ ಗಮನಿಸತಕ್ಕದು. ಚಂದ್ರ ಶುಕ್ಲಪಕ್ಷದಲ್ಲಿ ಅನುಕೂಲ ಸ್ಥಿತಿಯಲ್ಲಿರಲಿ. ಇದರಿಂದ ತಡವಾಗುವುದು ಅಡಚಣೆಯುಂಟಾಗುವುದು ತಪ್ಪುತ್ತದೆ. ಎಂಟನೆ ಮನೆಗೆ ವಿಶೇಷ ಗಮನ ಕೊಡಿ ಕುಜ ಅಲ್ಲಿಲ್ಲದಂತೆ ನೋಡಿಕೊಳ್ಳಿ. ಯಾತ್ರಾ ಲಗ್ನವು ಜನ್ಮರಾಶಿಗೆ ಅನುಗುಣವಾಗುವಂಥ ದಿವಸ ಕಾಲಗಳನ್ನು ಆರಿಸಿಕೊಳ್ಳಿ. ಏಳನೆ ಮನೆಯಲ್ಲಿ ಅಶುಭರು ಇಲ್ಲದಿರಲಿ ಪ್ರಯಾಣವು ಕಾಲಿನಲ್ಲೋ ಕೈಲಿನಲ್ಲೋ ಅದರೆ ಲಗ್ನವು ನಿರ್ಭಾಧಿತವಾಗಿರಲಿ ಮತ್ತು ಅಷ್ಟಮಾಧಿಪತಿ ಕುಜ ರಾಹುಗಳ ಬಾಧೆಗೆ ಒಳಗಾಗದಿರಲಿ. ಲಗ್ನಕ್ಕೆ ಕುಜ ಬಾಧೆಯಿದ್ದರೆ, ಅಪಘಾತಗಳ ಬೀತಿಯುಂಟು; ರಾಹು ಬಾಧೆಯಿದ್ದರೆ, ಆಶಾಭಂಗ ರೋಗಗಳು ಉಂಟಾದಾವು.

***ತೀರ್ಥಯಾತ್ರೆ:*** ಈ ಅಧ್ಯಾಯದಲ್ಲಿ ಮುಂಚೆ ಕೊಟ್ಟಿರುವ ನಿಯಮಗಳನ್ನು ಅವಲಂಬಿಸಿ. ಗುರು ಲಗ್ನದಲ್ಲೋ ಒಂಭತ್ತರಲ್ಲೋ ಇರಲಿ. ಗುರು ಅಸ್ತವಾಗಿರುವ ತಿಂಗಳನ್ನು ಬಿಡಿ.

***ವಾಯು ಯಾನ:*** ತಾರಾಬಲವನ್ನು ಗಮನಿಸಿ. ಲಗ್ನವು ವಾಯು ತತ್ವರಾಶಿಯಾಗಿರಲಿ. ಲಗ್ನದಲ್ಲಿ ಏಳನೆ ಎಂಟನೆ ಮನೆಗಳಲ್ಲೂ ಕುಜನಿರುವುದು ಬೇಡ. ಚಂದ್ರ ವೃದ್ಧಿಯಲ್ಲಿರಲಿ ಚಂದ್ರನು ರಾಹುವಿನಿಂದ ಸಾಧ್ಯವಾದಷ್ಟು ದೂರದಲ್ಲಿರಲಿ. ಗುರುವು ಅನುಕೂಲವಾದ ಸ್ಥಾನದಲ್ಲಿದ್ದು ಲಗ್ನವು ಪುಷ್ಟಿಯಾಗಿರಲಿ..

***ಸಮುದ್ರಯಾನ:*** ಜಲ ತತ್ವ ರಾಶಿಗೆ ವಿಶೇಷ ಗಮನ ಕೊಡಿ. ಕಟಕವು ಲಗ್ನವಾಗಿರುವುದು ಉತ್ತಮ. ಅಲ್ಲಿ ಜಲತತ್ವದ ಗ್ರಹವಿರಲಿ. ಎಂದಿನಂತೆ ಕುಜ ಲಗ್ನದಲ್ಲಿ, ಏಳರಲ್ಲಿ ಅಥವಾ ಎಂಟರಲ್ಲಿ ಇರಕೂಡದು. ಶುಕ್ರನು ಅನುಕೂಲವಾದ ಸ್ಥಾನದಲ್ಲಿರತಕ್ಕುದು.

***ಉದ್ಯಮಕ್ಕಾಗಿ ಪ್ರಯಾಣ:*** ನೀವು ಪ್ರಭಾವಶಾಲಿಯಾದ ವ್ಯಕ್ತಿಯನ್ನು ಕಾಣಬೇಕಾಗಿದ್ದರೆ, ಆ ವೇಳೆಯ ಲಗ್ನವು ನಿಮ್ಮ ಜನ್ಮ ಕುಂಡಲಿಯ ಹತ್ತನೆ ಮನೆಯ ರಾಶಿಯಾಗಿರಲಿ. ಲಗ್ನದಲ್ಲೂ ಒಂಭತ್ತರಲ್ಲೂ ಅಶುಭ ಗ್ರಹಗಳಿರುವುದು ಬೇಡ: ಬುಧನು ವ್ಯಾಪಾರ ವಾಣಿಜ್ಯಗಳ ಗ್ರಹ. ಆದ ಕಾರಣ ಅವನು ಲಗ್ನದಲ್ಲೋ ಹತ್ತರಲ್ಲೋ ಹನ್ನೊಂದರಲ್ಲೋ ಇರಬೇಕು. ಆದರೆ ಅವನ ಮೇಲೆ ಯಾವ ಅಶುಭ ದೃಷ್ಟಿಯೂ, ವಿಶೇಷತಃ ಶನಿಯ ದೃಷ್ಟಿ, ಇರಬಾರದು. ಬುಧ ವಕ್ರನಾಗಿದ್ದರೆ ಅನುಕೂಲಕರ, ಏಕೆಂದರೆ ನಿಮಗೆ ತೃಪ್ತಿಕರವಾಗಿ ವ್ಯವಹಾರವನ್ನು ಶೀಘ್ರ ಗಳಿಸುತ್ತಾನೆ. ಚಂದ್ರನು ಬುಧನನ್ನು ಶುಭ ದೃಷ್ಟಿಯಿಂದ ಕಂಡರೆ ವಿಜಯ ಸೌಭಾಗ್ಯಗಳು ಬರುತ್ತವೆ. ಚಂದ್ರನು ಎಂಟರಲ್ಲೋ ಹನ್ನೆರಡರಲ್ಲೋ ಇದ್ದರೆ, ವ್ಯಕ್ತಿಯು ದಾರಿಯಲ್ಲಿ ಕಾಯಿಲೆ ಬೀಳುತ್ತಾನೆ. ಆದ ಕಾರಣ ಚಂದ್ರನು ಅನುಕೂಲವಾದ ಸ್ಥಾನದಲ್ಲಿರುವಂತೆ ನೋಡಿಕೊಳ್ಳಿ. ಹಾಗೆ ದ್ವಿತೀಯಾಧಿಪತಿಯೂ ಯಾವ ಬಾಧೆಗೂ ಒಳಗಾಗದೆ ಅನುಕೂಲಸ್ಥನಾಗಿರುವಂತೆ ನೋಡಿಕೊಳ್ಳಿ. ಈ ಎಲ್ಲ ಪ್ರಕರಣಗಳಲ್ಲೂ ಕುಜ ಶನಿ ರಾಹುಗಳು ಪರಸ್ಪರ ವೀಕ್ಷಿಸದೆ ಇರುವಂತೆ ಎಚ್ಚರ ತಾಳಬೇಕು. ಅವರ ಪರಸ್ಪರ ದೃಷ್ಟಿ ತೊಡಕು ತೊಂದರೆಗಳನ್ನು ಸೂಚಿಸುತ್ತವೆ.

ಹದಿನೈದನೆ ಅಧ್ಯಾಯ

# ಚಿಕಿತ್ಸಾ ಮುಹೂರ್ತಗಳು

ಮನುಷ್ಯನ ರೋಗಗಳ ಮೇಲೆ ಗ್ರಹಗಳ ಪ್ರಭಾವಗಳಿರುತ್ತವೆಂಬುದನ್ನು ಕುರಿತು ಪ್ರಾಚೀನರ ಬರಹಗಳಲ್ಲಿ ಅವ್ಯಾಹತವಾಗಿ ಪ್ರಸ್ತಾಪವಿರುವುದನ್ನು ಕಂಡರೆ ಅವರು ಹೇಳುವ ಮಾತನ್ನು ಈ ವಿಷಯ ಕುರಿತ ಯಾವುದೇ ಸಮಗ್ರವಾದ ಸಮೀಕ್ಷೆಯಲ್ಲೂ ಕಡೆಗಾಣಲು ಸಾಧ್ಯವಾಗುವುದಿಲ್ಲ. ಈ ಪ್ರಸ್ತಾಪಗಳ ಪೈಕಿ ಕೆಲವಂತೂ ಸಾಮಾನ್ಯವಾದ ಮೂಢ ನಂಬಿಕೆಗಳನ್ನು ಆಧರಿಸಿದವಾದರೂ ಕೂಡ, ಉಳಿದವು ಎಚ್ಚರಿಕೆಯಿಂದ ನಡೆಸಿದ ಪರ್ಯವಲೋಕನವನ್ನೂ ದಾಖಲೆ ಮಾಡಿಟ್ಟಿರುವ ಅನುಭವ ರಾಶಿಯನ್ನೂ ಅವಲಂಬಿಸಿದೆ.

ಮುಹೂರ್ತಕ್ಕೆ ಮುಖ್ಯವಾದ ತಿಥಿ ನಕ್ಷತ್ರಗಳು ಚಾಂದ್ರ ಸೌರ ಚಲನೆಯನ್ನು ಆಧರಿಸಿದವು. ಜ್ಯೋತಿಷದಲ್ಲಿ ಚಂದ್ರನು ಸಂವೇದನೆಗಳ ವಾಹಕ, ಇತರ ಗ್ರಹಗಳ ಪ್ರಭಾವಗಳನ್ನು ಸಂಗ್ರಹಿಸಿ ರವಾನಿಸುವ ಸಾಧನ. ವಾಸ್ತವವಾಗಿ ಋತು ವ್ಯತ್ಯಾಸಗಳು, ಹವಾಮಾನ, ವಿದ್ಯುತ್ ಕೋಲಾಹಲಗಳು ಮತ್ತು ನಮ್ಮ ರಾಗ ಭಾವಗಳಿಂದ ಕೂಡಿದ ನಡವಳಿಕೆ ಇವೆಲ್ಲವೂ ಸೂರ್ಯ ಚಂದ್ರರ ಅವಸ್ಥಾಂತರಗಳೊಡನೆ ಪರಸ್ಪರ ಸಂಬಂಧ ಪಡೆದಿವೆ. ಕಾಯಿಲೆಗಳು ಉಲ್ಬಣಗೊಳ್ಳುವುದು ಚಂದ್ರನ ಸಂಚಾರದಿಂದ ಸೂಚಿತವಾಗುತ್ತದೆ. ಚಂದ್ರನು ಅದೃಷ್ಟವೆಂಬ ಗಡಿಯಾರದಲ್ಲಿ ನಿಮಿಷ ಸೂಚಿಸುವ ಮುಳ್ಳು. ಕಾಯಿಲೆಗಳು ಅತ್ಯುಲ್ಬಣಾವಸ್ಥೆಯನ್ನು ತಾಳುವುದು, ಕಾಯಿಲೆ ಪ್ರಾರಂಭವಾದಾಗ ಚಂದ್ರ ಯಾವ ಸ್ಥಾನದಲ್ಲಿದ್ದಾನೋ ಅದಕ್ಕೆ ಪ್ರತಿಯೋಗಿ ಸ್ಥಾನವನ್ನು ಸೇರುವ ಹದಿನಾಲ್ಕನೆ ದಿವಸ ಚಂದ್ರನು ಕೆಲವು ಸ್ಥಾನಗಳನ್ನು ಕ್ರಮಿಸುವಾಗ ರೋಗಿಯ ಸತ್ವವನ್ನು ಎಷ್ಟರಮಟ್ಟಿಗೆ ಕಲಕುತ್ತಾನೆಂದರೆ ಅಂಥ ದಿವಸಗಳಲ್ಲಿ ಕೊಟ್ಟ ಔಷಧಿಯು ಪ್ರಯೋಜನಕ್ಕೆ ಬರುವುದಿಲ್ಲ. ಆದುದರಿಂದ ಔಷಧಿಗಳನ್ನು ಕೊಡಲು ಶಸ್ತ್ರ ಚಿಕಿತ್ಸೆ ನಡೆಸಲೂ ಸಮರ್ಪಕವಾದ ಮುಹೂರ್ತವನ್ನು ಚುನಾಯಿಸುವುದು ಅಗತ್ಯವಾಗುತ್ತದೆ.

ವೈದ್ಯಕೀಯ ಅಥವಾ ಭೈಷಜ ಜ್ಯೋತಿಷವು ವಿಸ್ತಾರವಾದ ವಿಜ್ಞಾನ. ಈ ಪುಸ್ತಕದಲ್ಲಿ ತತ್ಸಂಬಂಧವಾದ ವಿಷಯವನ್ನೂ ಸಂಗ್ರಹಿಸಿಕೊಡಲು ಸಾಧ್ಯವಿಲ್ಲ. ಆದುದರಿಂದ ನಾನು ದಿನನಿತ್ಯದ ಜೀವನದಲ್ಲಿ ಸಾಧಾರಣ ವ್ಯಕ್ತಿಗೆ ಸರ್ವಥಾ ಅಗತ್ಯವಾಗುವಂಥ ಹಲಕೆಲವು ಸೂಚನೆಗಳನ್ನು ಕೊಡುತ್ತೇನೆ.

***ಚಿಕಿತ್ಸಾರಂಭ*** : ದೀರ್ಘ ವ್ಯಾಧಿಯಿಂದ ನರಳುತ್ತಿರುವವರು ಚಿಕಿತ್ಸೆಯನ್ನು ಅಶ್ವಿನಿ, ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯಮಿ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ಹಸ್ತ, ಚಿತ್ತ, ಸ್ವಾತಿ, ಅನೂರಾಧ, ಶ್ರವಣ, ಧನಿಷ್ಠ, ಶತಭಿಷ, ರೇವತಿ ನಕ್ಷತ್ರಗಳಿರುವಾಗ ಪ್ರಾರಂಭಿಸಬೇಕು. ಸಾಧಾರಣ ಅಸ್ವಸ್ಥತೆಗಳಾದ ಜ್ವರ ಪಿತ್ತ ಮುಂತಾದವುಗಳಿಗೆ ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ, ಆಶ್ಲೇಷ, ಜ್ಯೇಷ್ಠ, ಆರ್ದ್ರ, ಸ್ವಾತಿ ನಕ್ಷತ್ರಗಳಿರುವಾಗ ಮಲಗಿದ್ದರೆ ವಿನಾ ಚಿಕಿತ್ಸೆ ಬೇಕಾಗಿಲ್ಲ. ಮುಂದೆ ಕೊಟ್ಟಿರುವ ನಕ್ಷತ್ರಗಳಲ್ಲಿ ಕಾಯಿಲೆಯಿದ್ದವರಿಗೆ ಚಿಕಿತ್ಸೆ ಸರ್ವಥಾ ಅಗತ್ಯವಾಗುತ್ತದೆ.

(1) ಆರ್ದ್ರ, ಆಶ್ಲೇಷ ಅಥವಾ ಮಖ ನಕ್ಷತ್ರವಿರುವ ಚೌತಿ ಭಾನುವಾರ.

(2) ಜ್ಯೇಷ್ಠ, ಸ್ವಾತಿ ಅಥವಾ ಭರಣಿ ನಕ್ಷತ್ರವಿರುವ ನವಮಿ ಮಂಗಳವಾರ.

(3) ಪುಬ್ಬ, ಪೂರ್ವಾಷಾಢ ಅಥವಾ ಪೂರ್ವಾಭಾದ್ರಪದ ನಕ್ಷತ್ರವಿರುವ ಚತುರ್ಥಿ ಶನಿವಾರ.

ಇದೇ ರೀತಿಯಲ್ಲಿ ಜನ್ಮ ನಕ್ಷತ್ರ ಅಥವಾ ಜನ್ಮ ನಕ್ಷತ್ರದಿಂದ ಮೂರನೇ, ಐದನೆ ಅಥವಾ ಏಳನೆ ನಕ್ಷತ್ರವಿರುವ ದಿವಸ ಕಾಯಿಲೆ ಪ್ರಾರಂಭವಾಗಿದ್ದರೆ ತುಂಬ ನರಳಾಟವುಂಟುಮಾಡುತ್ತದೆ.

ದೀರ್ಘ ಕಾಲದ ರೋಗಗಳು ಅಥವಾ ವಾಯಿದೆ ಕಾಯಿಲೆಗಳು ಇರುವವರು ಚಿಕಿತ್ಸೆ ಪ್ರಾರಂಭಿಸಲು ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಕ್ರಮವಾಗಿ ಹಸ್ತ, ಅಶ್ವಿನಿ, ಚಿತ್ತ, ಪುನರ್ವಸು ನಕ್ಷತ್ರಗಳಿರುವಾಗ ವಿಶೇಷತಃ ಚಂದ್ರ, ಬುಧ, ಗುರು, ಶುಕ್ರರು ಸ್ವವರ್ಗಗಳಲ್ಲಿದ್ದು ಚರ ರಾಶಿಯೋ ಚರ ಅಂಶವೋ ಉದಯವಾಗುವಾಗ ಪ್ರಶಸ್ತ.

ವಿಷಮಶೀತಜ್ವರದಿಂದ ನರಳುವವರು ಭಾನುವಾರ ಚೌತಿಯೋ ನವಮಿಯೋ ಚತುರ್ದಶಿಯೋ ಆಗಿರುವ ದಿವಸ ಚಿಕಿತ್ಸಾರಂಭ ಮಾಡಬೇಕು. ಆದರೆ ಆ ದಿನ ಆರ್ದ್ರ, ಭರಣಿ, ವಿಶಾಖ ನಕ್ಷತ್ರಗಳು ಇರಬಾರದು.

ಉಗ್ರ ಯೋಗಗಳಲ್ಲಿ ಪ್ರಾರಂಭಿಸಿದ ಚಿಕಿತ್ಸೆ ಪರಿಣಾಮಕಾರಿಯಾಗುತ್ತದೆಂದು ಭಾವನೆ. ಉಗ್ರ ಯೋಗಗಳು ಉದಯಿಸುವುದು ತದಿಗೆ (ಅಥವಾ ನವಮಿ) ಚೌತಿ, ಪಂಚಮಿ, ಷಷ್ಠಿ, ಸಪ್ತಮಿ, ನವಮಿ, ದಶಮಿ, (ಅಥವಾ ತದಿಗೆ) ತ್ರಯೋದಶಿ ತಿಥಿಗಳ ದಿವಸಗಳಲ್ಲಿ ಕ್ರಮವಾಗಿ ರೋಹಿಣಿ, ಉತ್ತರ, ಶ್ರವಣ, ಮೃಗಶಿರ, ರೇವತಿ, ಕೃತ್ತಿಕ, ಪುಷ್ಯ ಅನೂರಾಧ, ಕೃತ್ತಿಕ (ಅಥವಾ ಮಖ) ನಕ್ಷತ್ರಗಳಿರುವಾಗ.

*ಮೇಹರೋಗ ಚಿಕಿತ್ಸೆ* : ಮೇಷ ಅಥವಾ ಕಟಕ ಉದಯಿಸುವ ಅಮಾವಾಸ್ಯೆ ದಿವಸ ಕ್ಷಿಪ್ರ * ಉಗ್ರ ಚರ ನಕ್ಷತ್ರಗಳಿರುವ ದಿವಸವನ್ನು ಚುನಾಯಿಸಿ.

*ವಾತರೋಗ ಚಿಕಿತ್ಸೆ* : ತದಿಗೆ, ಅಷ್ಟಮಿ, ತ್ರಯೋದಶಿ ಒಳ್ಳೆಯ ದಿವಸಗಳು. ಗುರುವಾರ ಆಶ್ಲೇಷ ಅಥವಾ ಅಶ್ವಿನಿ ಇರುವ ದಿನವನ್ನು ಚುನಾಯಿಸಿಕೊಳ್ಳಿ.

*ಶುಕ್ಲರೋಗ ಚಿಕಿತ್ಸೆ* : ಬುಧವಾರ ಉತ್ಕೃಷ್ಟ. ಚೌತಿ, ನವಮಿ ಅಥವಾ ಚತುರ್ದಶಿಯಂದು ಕ್ಷಿಪ್ರ ಉಗ್ರ ಅಥವಾ ಚರ ನಕ್ಷತ್ರವಿರುವುದನ್ನು ಚುನಾಯಿಸಿ.

*ಕುಷ್ಠ ಚಿಕಿತ್ಸೆ* : ಉದಯ ಲಗ್ನವು ಕುಂಭ, ಮಕರ, ಮೇಷ, ಸಿಂಹ ಅಥವಾ ವೃಶ್ಚಿಕ ಆಗಿರಬೇಕು. ಎಂಟನೆಯ ಮನೆಯಲ್ಲಿ ಪ್ರಬಲನಾದ ಅಶುಭ ಇರಲಿ. (1) ಮೃಗಶಿರ, ಚಿತ್ರ, ಧನಿಷ್ಠ ಇರುವ ಗುರುವಾರ (2) ಪುಷ್ಯ ಅನೂರಾಧ, ಉತ್ತರಾಭಾದ್ರ ಇರುವ ಶನಿವಾರ (3) ಕೃತ್ತಿಕ, ಉತ್ತರ, ಉತ್ತರಾಷಾಢ ಇರುವ ಭಾನುವಾರ ಚುನಾಯಿಸಿ. ತಿಥಿ ಚೌತಿ, ಷಷ್ಠಿ, ಅಷ್ಟಮಿ, ನವಮಿ ಅಥವಾ ಚತುರ್ದಶಿ ಆಗಿರಬೇಕು.

*ಅಪಸ್ಮಾರ ಚಿಕಿತ್ಸೆ* : ಲಗ್ನವು ರವಿ ಚಂದ್ರರಿಂದೊಡಗೂಡಿದ ಚರ ರಾಶಿಯೋ ಅಥವಾ ಉಭಯ ರಾಶಿಯೋ ಆಗಿರಲಿ. ಸ್ಥಿರ ರಾಶಿಯು ಬೇಡ.

*ಕ್ಷಯಕ್ಕೆ ಚಿಕಿತ್ಸೆ*: ತಿಥಿಯು ವಿಷ್ಟಿಕರಣದಿಂದ ವಿಮುಕ್ತವಾಗಿರಬೇಕು. ನಕ್ಷತ್ರವು ಸಾಧಾರಣದ ಗುಂಪಿಗೆ ಸೇರಿದ್ದಾಗಿರಬೇಕು. ಚಂದ್ರನನ್ನು ವಕ್ರ ಗ್ರಹವೊಂದು ಕಾಣುತ್ತಿರಬೇಕು.

*ಜಲೋದರ ಚಿಕಿತ್ಸೆ*: ಮಂಗಳವಾರ ಉತ್ಕೃಷ್ಟ. ಭರಣಿ, ಕೃತ್ತಿಕ, ಆರ್ದ್ರ, ಆಶ್ಲೇಷ, ವಿಶಾಖ, ಮಖ, ಜ್ಯೇಷ್ಠ ನಕ್ಷತ್ರ ಇರಬೇಕು.

*ವಿರೇಚಕ ತೆಗೆದುಕೊಳ್ಳುವುದು* : ಬೇದಿಗೆ ಬಿದಿಗೆ, ಷಷ್ಠಿ, ದ್ವಾದಶಿ ದಿವಸ ತೆಗೆದುಕೊಳ್ಳಬೇಕು. ಮಂಗಳವಾರ ವಿನಾ ಬಾಕಿ ಯಾವ ವಾರದ ದಿವಸವಾದರೂ

---

* ಅನುಬಂಧ ನೋಡಿ.

ಸರಿ. ನಕ್ಷತ್ರ ಪುನರ್ವಸು, ರೇವತಿ, ಸ್ವಾತಿ ಅಥವಾ ಆರ್ದ್ರ ಆಗಿರಬೇಕು. ಅಪರಾಹ್ನ ಕೂಡದು.

*ಎನಿಮಾ ಅಥವಾ ವಸ್ತಿ :* ಶನಿವಾರವನ್ನೋ ಮಂಗಳವಾರವನ್ನೋ ಚುನಾಯಿಸಿಕೊಳ್ಳಿ. ಏಳರಲ್ಲೂ ಎಂಟರಲ್ಲೂ ಅಶುಭ ಗ್ರಹಗಳು ಇರಬಾರದು.

*ದಂತ ಚಿಕಿತ್ಸೆ :* ಮೇಲೆ ಹೇಳಿರುವ ಉಗ್ರ ಯೋಗವು ದಂತ ಚಿಕಿತ್ಸೆಗೆ ಯುಕ್ತವಾದುದು. ಚಂದ್ರ ಬಾಧಿತನಾಗಿಲ್ಲದಂತೆ ನೋಡಿಕೊಳ್ಳಿ. ಚಂದ್ರಾಷ್ಟಮವನ್ನು ನಿವಾರಿಸಿಕೊಳ್ಳಿ.

*ಇಂಜಕ್ಷನ್ :* ಇಂಜಕ್ಷನ್ಗಳನ್ನು ಶನಿವಾರ ಅಥವಾ ಸೋಮವಾರ ತೆಗೆದುಕೊಳ್ಳಬೇಕು. ಮೇಷ, ವೃಷಭ, ಕಟಕ, ಕನ್ಯಾ ರಾಶಿಗಳು ಪ್ರಶಸ್ತ. ಎಂಟನೆಯ ಮನೆಯು ಗ್ರಹರಹಿತವಾಗಿರಬೇಕು. ಬುಧನಿಗೆ ಬಾಧೆಯಿಲ್ಲದಂತೆ ನೋಡಿಕೊಳ್ಳಿ. ಇಲ್ಲವಾದರೆ ನೋವು ವಿಪರೀತವಾಗಿ ನರದೌರ್ಬಲ್ಯವುಂಟಾಗುವುದು.

*ಶಸ್ತ್ರ ಚಿಕಿತ್ಸೆ :* ಸಾಧ್ಯವಾದ ಮಟ್ಟಿಗೂ ಶುಕ್ಲಪಕ್ಷದಲ್ಲಿ, ಚಂದ್ರನು ವೃದ್ಧಿಯಲ್ಲಿರುವಾಗ ಶಸ್ತ್ರ ಚಿಕಿತ್ಸೆ ನಡೆಸಬೇಕು. ಪೂರ್ಣಿಮೆಯು ಇರುವ ಕಾಲದಲ್ಲಿ ಶಸ್ತ್ರಚಿಕಿತ್ಸೆ ಕೂಡದು. ಏಕೆಂದರೆ ಆಗ ದೇಹದ ದ್ರವಗಳು ಅತ್ಯಂತ ಹೆಚ್ಚಾಗಿ ಚಲನೆಯಲ್ಲಿರುತ್ತವೆ. ಶಸ್ತ್ರ ಚಿಕಿತ್ಸಾ ಕಾಲದ ಚಂದ್ರನು ಜನ್ಮರಾಶಿಯಲ್ಲಿ ಇರಕೂಡದು. ಯಾವ ದೇಹ ಭಾಗದಲ್ಲಿ ಶಸ್ತ್ರ ಚಿಕಿತ್ಸೆ ಆಗುತ್ತದೆಯೋ ಆ ಭಾಗವನ್ನು ಸೂಚಿಸುವ ರಾಶಿಯಲ್ಲಿ ಚಂದ್ರನಿರಕೂಡದು. ಚಂದ್ರ ಮುಂದಿನ ರಾಶಿಗೆ ಹೋಗುವ ತನಕ ಒಂದೆರಡು ದಿವಸ ಕಾಯಬೇಕು. ಚಿಕಿತ್ಸಾ ಕಾಲದಲ್ಲಿ ಚಂದ್ರನು ಅನ್ಯ ಗ್ರಹ ಸಹಿತ ಇರಕೂಡದು. ಹಾಗೆಯೇ ಅಶುಭ ಗ್ರಹಗಳ ದೃಷ್ಟಿಗೊಳಗಾಗಿರಕೂಡದು.

ಶಸ್ತ್ರಚಿಕಿತ್ಸೆಗೆ ಮಂಗಳವಾರ ಅಥವಾ ಶುವಾರ ಪ್ರಶಸ್ತ. ಕುಜ ಪ್ರಬಲನಾಗಿರಬೇಕು. ಎಂಟನೆ ಮನೆಯಲ್ಲಿ ಯಾರೂ ಇರಕೂಡದು. ಆರ್ದ್ರ, ಜ್ಯೇಷ್ಠ, ಆಶ್ಲೇಷ ಅಥವಾ ಮೂಲ ನಕ್ಷತ್ರದಿಂದ ಕೂಡಿದ ಚೌತಿಯೋ ನವಮಿಯೋ ಚತುರ್ದಶಿಯೋ ಆಗಿರಬೇಕು. ಯಾವ ದೇಹ ಭಾಗದಲ್ಲಿ ಚಿಕಿತ್ಸೆಯಾಗಬೇಕೋ ಆ ಭಾಗವನ್ನು ಸೂಚಿಸುವ ಮನೆಯನ್ನು ಬಲಗೊಳಿಸಬೇಕು. ಅಂದರೆ ಈಗ ಹೊಟ್ಟೆಗೆ ಚಿಕಿತ್ಸೆ ಆಗಬೇಕು ಎನ್ನಿ. ಆಗ ಐದನೆಯ ಮನೆಯನ್ನು ಶುಭನು ಈಕ್ಷಿಸುವ ವೇಳೆಯನ್ನು ಚುನಾಯಿಸಬೇಕು. ಕುಜ ಶನಿಗಳ ನಡುವೆ ಪರಸ್ಪರ ದೃಷ್ಟಿ ಇರಕೂಡದು.

*ಮೂಗು ಚಿಕಿತ್ಸೆ :* ಲಗ್ನವು ಕಟಕ, ಸಿಂಹ ಅಥವಾ ಕನ್ಯೆ ಆಗಿರಬೇಕು. ಚಂದ್ರನಿಗೆ ಯಾವ ಪೀಡೆಯೂ ಇರಬಾರದು. ಎಂಟರಲ್ಲಿ ಕುಜನಾಗಲಿ ಯಾವ

ಪಾಪಗ್ರಹವಾಗಲಿ ಇರಕೂಡದು ಸೂರ್ಯನನ್ನು ಶನಿ ಅಥವಾ ರಾಹು ವೀಕ್ಷಿಸಬಾರದು.

*ಔಷಧಿಗಳ ತಯಾರಿಕೆ :* ಔಷಧಿಗಳನ್ನು ತಯಾರಿಸಲು ಚರ ಅಥವಾ ದ್ವಿಸ್ವಭಾವ ರಾಶಿಯು ಲಗ್ನವಾಗಿರುವಾಗ ಪ್ರಾರಂಭಿಸಬೇಕು. ಸ್ಥಿರ ರಾಶಿಗಳನ್ನು ಯಾವಾಗಲೂ ಬಿಡಬೇಕು. ಆರನೆ ಏಳನೆ ಎಂಟನೆ ಮನೆಗಳು ಬಿಡುವಾಗಿರಬೇಕು. ಭಾನುವಾರ, ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಒಳ್ಳೆಯವು. ಶುಭವಾರ ತಿಥಿಗಳು ಪಾಡ್ಯ, ಚೌತಿ, ಷಷ್ಠಿ, ಅಷ್ಟಮಿ, ನವಮಿ, ಏಕಾದಶಿ, ಚತುರ್ದಶಿ.

ಶನಿ ಕುಜ ಸೂರ್ಯರು ಲಗ್ನದಲ್ಲೋ, ಲಗ್ನ ಕೇಂದ್ರದಲ್ಲೋ ಇರುವಾಗ ತಯಾರಿಸಿದ ದಿವ್ಯೌಷಧವು ಎಲ್ಲ ರೋಗಗಳಿಗೂ ಸಂಜೀವಿನಿಯಾಗುತ್ತದೆಂದು ಹೇಳುತ್ತಾರೆ.

*ರೋಗದಿಂದ ಎದ್ದ ಮೇಲೆ ಮೊದಲ ಸ್ನಾನ:* ದೀರ್ಘ ಕಾಯಿಲೆ ವಾಸಿಯಾಗಿ ಎದ್ದ ಮೇಲೆ ಮೊದಲ ಸಲ ಆರೋಗ್ಯ ಸ್ನಾನವನ್ನು ಅಶ್ವಿನಿ, ಭರಣಿ, ಕೃತ್ತಿಕ, ಮೃಗಶಿರ, ಆರ್ದ್ರ, ಪುಷ್ಯ, ಪುಬ್ಬ, ಹಸ್ತ, ಚಿತ್ತ, ವಿಶಾಖ, ಮೂಲ, ಪೂರ್ವಾಷಾಢ ಪೂರ್ವಾಭಾದ್ರ, ನಕ್ಷತ್ರ ಇರುವ ದಿವಸ ಮಾಡಬೇಕು. ತಾರಾಬಲವೂ ಇರಬೇಕು. ಚಂದ್ರಾಷ್ಟಮ ಕೂಡದು. ಮಂಗಳವಾರ, ಬುಧವಾರ, ಗುರುವಾರ ಒಳ್ಳೆಯವು. ಚೌತಿ, ಅಷ್ಟಮಿ, ನವಮಿ, ಚತುರ್ದಶಿ, ಅಮಾವಾಸ್ಯೆ ತ್ಯಾಜ್ಯ.

ಹದಿನಾರನೆ ಅಧ್ಯಾಯ

# ಸಾರ್ವಜನಿಕ ವ್ಯವಹಾರಗಳು

ಸಾರ್ವಜನಿಕರ ನೆಮ್ಮದಿಗೆ ಸಂಬಂಧಪಟ್ಟ ವಿಷಯಗಳನ್ನು ಈ ಅಧ್ಯಾಯದಲ್ಲಿ ಸೇರಿಸಿದೆ. ಸಧ್ಯದಲ್ಲಿ ಅಧಿಕಾರಸ್ಥರ ಮನೋಭಾವವು ಜ್ಯೋತಿಷದ ಬಗೆಗೆ ಇರುವುದನ್ನು ಗಮನಿಸಿದರೆ, ಈ ಅಧ್ಯಾಯ ಅಷ್ಟು ವ್ಯವಹಾರ ಪ್ರಯೋಜಕವಾಗಲಾರದು. ಆದರೆ ಭಾರತದಲ್ಲಿ ಹಲವಾರು ಸಾರ್ವಜನಿಕ ಸಮಾರಂಭಗಳಲ್ಲಿ ಜ್ಯೋತಿಷ ಸಲಹೆಗಳನ್ನು ಗೋಪ್ಯವಾಗಿ ಪಡೆಯುತ್ತ ಪೂರ್ತಿಯಾಗಿ ತಳ್ಳಿಹಾಕುತ್ತಿಲ್ಲವಾದ ಕಾರಣ, ಸಾರ್ವಜನಿಕರಿಗೆ ಮಹತ್ವದ ಪ್ರಯೋಜನವುಳ್ಳಂಥ ವ್ಯವಹಾರಗಳಿಗೆ ಯುಕ್ತವಾದ ಮುಹೂರ್ತಗಳನ್ನು ಗೊತ್ತುಮಾಡಬೇಕಾದ ಕರ್ತವ್ಯ ಹೊತ್ತಿರುವವರಿಗೆ ಕೆಳಗೆ ಕೊಟ್ಟಿರುವ ತತ್ವಗಳು ಉಪಯುಕ್ತವಾದುವೆಂದು ಆಶಿಸಲಾಗಿದೆ.

ಸಾರ್ವಜನಿಕ ವ್ಯವಹಾರಗಳಿಗೆ ಜ್ಯೋತಿಷ ತತ್ವಗಳು ಅನ್ವಯವಾಗುವುದನ್ನು ತಪ್ಪು ತಿಳಿದುಕೊಂಡಿರುವವರೂ ಅರ್ಧಂಬರ್ಧ ಶಿಕ್ಷಣ ಪಡೆದುಕೊಂಡವರೂ ಅಪಹಾಸ್ಯಕರವೆಂದು ಭಾವಿಸಬಹುದು. ಆದರೆ ಪ್ರಕೃತಿನಿಯಮಗಳನ್ನು ಪರಿಶೀಲಿಸಿರುವ ಸೂಕ್ಷ್ಮಮತಿಯೂ ಮತ್ತು ಕಾಲತತ್ವದ ಪ್ರಾಮುಖ್ಯವನ್ನೂ ಅದರ ರೂಪಾಂತರಗಳನ್ನೂ ಬಲ್ಲವನೂ ಈ ಜ್ಯೋತಿಷ ತತ್ವಗಳಲ್ಲಿ ಅಡಗಿರುವ ಪರಿಜ್ಞಾನವನ್ನು ಮನಗಾಣದೆ ಇರಲಾರ. ಏಕೆಂದರೆ ಈ ತತ್ವಗಳು ಬೋಧಿಸುವುದಾದರೂ ಏನು? ನಾವು ಪ್ರಕೃತಿ ನಿಯಮಗಳಿಗೆ ಸಾಮರಸ್ಯವಾಗಿ ನಡೆದುಕೊಳ್ಳಬೇಕು ಎಂದವು ಹೇಳುತ್ತವೆ. ಬುದ್ಧಿವಂತನಾದ ಮನುಷ್ಯನು ಒಂದು ವೇಳೆಯಲ್ಲಿ ಆರಂಭಿಸಿದ ಯೋಜನೆಯು ಶ್ರೇಯಸ್ಕರವಾಗುವುದಾದರೂ ಏಕೆ, ಮತ್ತೊಂದು ವೇಳೆಯಲ್ಲಿ ಪ್ರಾರಂಭಿಸಿದ ಯೋಜನೆಯು ದುರದೃಷ್ಟಕರವಾಗಿ ಪರಿಣಮಿಸುವುದಾದರೂ ಏಕೆ ಎಂದು ಪ್ರಶ್ನಿಸಿಕೊಳ್ಳದೆ ಇರಲಾರ. ಎಷ್ಟೇ ಅನುಕೂಲ ಸಂದರ್ಭಗಳಲ್ಲಿ ಪ್ರಾರಂಭ ವಾಗಿದ್ದರೂ ಕೆಲವು ಪ್ರಯತ್ನಗಳು ಮೊದಲಿಂದಲೇ ವಿಫಲಕಾರಿಯಾಗುತ್ತವೆ. ಇದರ ಪರಿಣಾಮವಾಗಿ ಜ್ಯೋತಿಷವನ್ನು ಹೀಯಾಳಿಸುವುದನ್ನೇ ಒಂದು ಮುಖ್ಯ

ಹವ್ಯಾಸವನ್ನಾಗಿ ಮಾಡಿಕೊಂಡಿರುವವರೂ ಕೂಡ ಇಂಥ 'ನತದೃಷ್ಟ' ವ್ಯವಹಾರದ ಮಾತಾಡದೇ ಇರಲಾರರು. ಆಮಾತಿನ ಅರ್ಥವೂ ಅವರಿಗೆ ಹೊಳೆಯದೆ ಇರಬಹುದು. ಹಲವಾರು ರಾಷ್ಟ್ರ ನಿರ್ಮಾಣ ಕಾರ್ಯಗಳು ಕೆಟ್ಟ ಗಳಿಗೆಯಲ್ಲಿ ಆರಂಭವಾದ ಒಂದೇ ಕಾರಣಕ್ಕಾಗಿ ವಿಫಲವಾಗಿವೆ ಇಲ್ಲವೆ ಕೆಟ್ಟುಹೋಗಿವೆ.

***ಹಡಗು ಕಟ್ಟುವುದು ಮತ್ತು ಯಾನಾರಂಭ:*** ಜ್ಯೇಷ್ಠ, ಮಖ, ವಿಶಾಖ, ಆರ್ದ್ರ, ರೋಹಿಣಿ, ಭರಣಿ, ಕೃತ್ತಿಕ, ಆಶ್ಲೇಷ ನಕ್ಷತ್ರಗಳನ್ನು ತ್ಯಜಿಸಬೇಕು. ಉಳಿದವು ಶುಭಕರ. ಭಾನುವಾರ, ಗುರುವಾರ, ಶುಕ್ರವಾರ ಒಳ್ಳೆಯವು. ಲಗ್ನವು ಜಲತತ್ವದ ರಾಶಿಯಾಗಿರಲಿ. ಲಗ್ನಾಧಿಪತಿಯು ಒಂಭತ್ತರಲ್ಲೋ ಹನ್ನೊಂದರಲ್ಲೋ ಇರಲಿ. ಜನ್ಮರಾಶಿಯ ಅಧಿಪತಿ ಜಲತತ್ವರಾಶಿಯಲ್ಲಿರಲಿ ಚರರಾಶಿಗಳನ್ನು ಬಿಡಿ. ಎಂಟರಲ್ಲಿ ಯಾವ ಗ್ರಹವೂ ಇಲ್ಲದಿರಲಿ. ಯುದ್ಧ ನೌಕೆಗಳ ನಿರ್ಮಾಣ ಕೈಕೊಳ್ಳುವಾಗ ಕುಜನ ಸ್ಥಾನವು ಬಲಯುತವಾಗಿರಲಿ. ವಾಣಿಜ್ಯ ಸಂಚಾರ ನೌಕೆಗಳನ್ನು ಕಟ್ಟುವುದಕ್ಕೆ ತೊಡಗಿದಾಗ ಬುಧನ ಸ್ಥಾನವು ಉತ್ಕೃಷ್ಟವಾಗಿರಲಿ. ಕಡೆಗೆ ಉಪಚಯ ಸ್ಥಾನದಲ್ಲಿ ನಿರ್ಬಾಧಿತನಾಗಿರುವಂತೆ ನೋಡಿಕೊಳ್ಳಿ. ಗುರುವೋ, ಶುಕ್ರನೋ ತ್ರಿಕೋಣದಲ್ಲಿ ಇಲ್ಲವೆ ಕೇಂದ್ರದಲ್ಲಿ ಇರಲಿ. ಕುಜ, ಚಂದ್ರರು, ಕುಜ ಲಗ್ನಾಧಿಪತಿ ಒಟ್ಟಿಗಿಲ್ಲದಂತೆ ನೋಡಿಕೊಳ್ಳಿ ಲಗ್ನದಲ್ಲೂ ಕುಜನಿರಬಾರದು.

***ಊರು ನಗರಗಳ ನಿರ್ಮಾಣ:*** ಮನೆ ಕಟ್ಟುವುದಕ್ಕೆ ಸಂಬಂಧಿಸಿದ ಅಧ್ಯಾಯದಲ್ಲಿ ಕೊಟ್ಟಿರುವ ನಿಯಮಗಳ ಪ್ರಕಾರ ಶುಭಮುಹೂರ್ತದಲ್ಲಿ ಅಡಿಪಾಯ ಶಿಲೆಯನ್ನು ವಿನ್ಯಾಸ ಮಾಡಿ ನಗರ ನಿರ್ಮಾಣಕ್ಕೆಂದು ಅಡಿಪಾಯ ಹಾಕುವುದಕ್ಕೆ ಶ್ರೇಷ್ಠವಾದ ನಕ್ಷತ್ರಗಳು ಅಶ್ವಿನಿ, ಚಿತ್ತ, ರೇವತಿ. ಲಗ್ನವು ಸ್ಥಿರ ರಾಶಿಯಾಗಿದ್ದು ಗುರುವಿನ ಪ್ರಬಲ ವೀಕ್ಷಣೆಗೆ ಒಳಗಾಗಿರಬೇಕು. ಇದರಿಂದ ಆ ನಗರವು ಚಿರಕಾಲ ಬಾಳಿ ಬದುಕುತ್ತದೆ. ಬುಧನು ಶುಭ ಸ್ಥಾನದಲ್ಲಿರಲಿ. ಇದರಿಂದ ಆ ನಗರವು ಬೆಳೆದು ವಾಣಿಜ್ಯ ಕೇಂದ್ರವಾಗಿ ಬಡಾಯಿಸುತ್ತದೆ. ಶನಿಯು ಉಪಜಯವೊಂದಕ್ಕೆ ಪರಿಮಿತವಾಗಿರಲಿ. ಕುಜನಿಗೂ ಲಗ್ನಕ್ಕೂ ಯಾವ ಸಂಬಂಧವೂ ಇರಬಾರದು. ಚಂದ್ರನ ಕಲೆಗಳು ವೃದ್ಧಿಯಾಗುತ್ತಿರುವಾಗ ನಿರ್ಮಾಣ ಪ್ರಾರಂಭಿಸಿ. ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಒಳ್ಳೆಯವು. ಚರ ರಾಶಿಗಳನ್ನು ನಿವಾರಿಸಿಕೊಳ್ಳ ಬೇಕು. ಲಗ್ನದಲ್ಲೂ ಎರಡು ಒಂಭತ್ತರಲ್ಲೂ ಶುಭ ಗ್ರಹಗಳಿರಬೇಕು. ಅಶುಭರು ಮೂರು ಹನ್ನೊಂದರಲ್ಲಿರಬೇಕು. ಎಂಟನೆಯ ಮನೆ ಖಾಲಿ ಇರಬೇಕು. ಹನ್ನೆರಡರಲ್ಲಿ ಶುಭನಿದ್ದರೆ ಪರವಾಯಿಲ್ಲ.

***ಸೇನಾ ಪಾಳಯ ರಚನೆ :*** ಉತ್ತರಾಭಾದ್ರಪದ ಉತ್ತಮ ನಕ್ಷತ್ರ. ಸೇನೆಯ ಪಾಳಯ ರಚನೆಗೂ ಬಿಡಾರ ರಚನೆಗೂ ಇದು ಶ್ರೇಷ್ಠ.

***ಹಾಲಿನ ಕೇಂದ್ರಗಳು :*** ವೃಷಭ, ಅಥವಾ ಕಟಕ ಉದಯ ಲಗ್ನವಾಗಿರಲಿ. ಅಶ್ವಿನಿ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಶ್ರವಣ, ಧನಿಷ್ಠ, ಶತಭಿಷ ಉತ್ಕೃಷ್ಟ ನಕ್ಷತ್ರಗಳು. ಲಗ್ನದಲ್ಲಿ ಚಂದ್ರನಿದ್ದರೆ ಅದು ಸಂಪತ್ಸೂಚಕ. ಸೋಮವಾರ ಶ್ರೇಷ್ಠ ವಾರ.

***ರಾಷ್ಟ್ರಪತಿಯ ಆಯ್ಕೆ :*** ಉತ್ಕೃಷ್ಟ ನಕ್ಷತ್ರಗಳು ಅಶ್ವಿನಿ, ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯಮಿ, ಉತ್ತರ, ಹಸ್ತ, ಅನೂರಾಧ, ಉತ್ತರಾಷಾಢ, ಶ್ರವಣ, ಉತ್ತರಾಭಾದ್ರ, ರೇವತಿ ಶುಕ್ಲಪಕ್ಷದ ಎಲ್ಲ ಬೆಸ ತಿಥಿಗಳೂ ನವಮಿ ಬಿಟ್ಟು ಒಳ್ಳೆಯವು. ಬಿದಿಗೆ ದಶಮಿ ಕೂಡ ಅನುಕೂಲಕರ. ಉದಯ ಲಗ್ನ ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಧನುಸ್ ಅಥವಾ ಕುಂಭ ಅಥವಾ ಮೀನ ಆಗಿರಬೇಕು.

ಸೂರ್ಯ ಚಂದ್ರರು ಬಲಯುತರಾಗಿರಲಿ. ಲಗ್ನವನ್ನೂ ದಶಮ ದಶಮಾಧಿಪತಿಗಳನ್ನೂ ದೃಢಗೊಳಿಸಿ ಎಂಟನೆ ಮನೆ ಖಾಲಿ ಇರಲಿ. ಅಶುಭರು ಉಪಚಯಗಳಿಗೆ ಸೀಮಿತವಾಗಿರಲಿ. ಸಾಧ್ಯವಾದರೆ ಸೂರ್ಯ ಚಂದ್ರರು ಕಟಕದಲ್ಲೋ, ಸಿಂಹದಲ್ಲೋ ಇದ್ದು ಗುರುವಿನ ದೃಷ್ಟಿಗೆ ಒಳಗಾಗಿರಲಿ. ಎಂದಿನಂತೆ ತಾರಾಬಲ ಚಂದ್ರಬಲ ಪಂಚಕಗಳನ್ನು ಜಾಗರೂಕತೆಯಿಂದ ಪರಿಗಣಿಸಿ.

***ಕಿರೀಟಧಾರಣೆ:*** ಮೇಲೆ ಕೊಟ್ಟಿರುವ ನಿಯಮಗಳು ಕಿರೀಟಧಾರಣೆಗೂ ಅನ್ವಯವಾಗುತ್ತವೆ. ಸಾಧ್ಯವಾಗುವುದಾದರೆ, ಲಗ್ನವು ಸಿಂಹವಾಗಿದ್ದು ಅಲ್ಲಿ ಸೂರ್ಯನಿರಲಿ, ಅದಕ್ಕೆ ಗುರುದೃಷ್ಟಿ ಇರಲಿ. ಪ್ರಜಾಪ್ರಭುತ್ವದಲ್ಲಿ ಹೊಸ ಸರಕಾರವು ಕುಂಭ ಲಗ್ನದಲ್ಲಿ ಅಥವಾ ತುಲಾ ಲಗ್ನದಲ್ಲಿ ಶನಿ ಇದ್ದು ಗುರುವಿನ ಅಥವಾ ಶುಕ್ರನ ವೀಕ್ಷಣೆಗೆ ಒಳಗಾಗಿರುವಾಗ ಕಾರ್ಯಾರಂಭ ಮಾಡಲಿ.

***ವಿಗ್ರಹ ಪ್ರತಿಷ್ಠಾಪನೆ :*** ದೇವಸ್ಥಾನಗಳ ನಿರ್ಮಾಣ ಮತ್ತು ದೇವತಾ ವಿಗ್ರಹಗಳ ಪ್ರತಿಷ್ಠಾಪನೆ ಸಾಧಾರಣ ಜ್ಯೋತಿಷ ಪರಿಪಾಟಿಯುಳ್ಳವರು ಅರ್ಥ ಮಾಡಿಕೊಳ್ಳಲು ಕಷ್ಟವಾಗುವಷ್ಟು ಮುಖ್ಯವಾದ ಜ್ಯೋತಿಷಿಕ ತತ್ವಗಳನ್ನು ಒಳಗೊಂಡಿವೆ. ಆದಕಾರಣ ಇಂಥ ಉದ್ದೇಶಗಳಿಗಾಗಿ ಮುಹೂರ್ತ ನಿರ್ಣಯಿಸುವ ಕೆಲಸವನ್ನು ವಿಶೇಷಜ್ಞರಿಗೆ ಬಿಡುವುದು ಒಳ್ಳೆಯದು. ಈ ಸಂಬಂಧವಾದ ವಿಧಿ ನಿಯಮಗಳು ಜಟಿಲವಾದ, ಸಂಕೀರ್ಣವಾದ ಖಗೋಳ ವಿಜ್ಞಾನ, ಜ್ಯೋತಿಷ ವಿಜ್ಞಾನ, ಧಾರ್ಮಿಕ

ತತ್ವಗಳನ್ನೊಳಗೊಂಡವಾಗಿದ್ದು ಕೆಲವು ಮೂಲ ಗ್ರಂಥಗಳಲ್ಲಿ ದೊರಕುತ್ತವೆ. ಹೆಚ್ಚಿನ ವಿವರಗಳನ್ನು ಅಪೇಕ್ಷಿಸುವ ವಾಚಕರು ***ಬೃಹತ್ ಸಂಹಿತ, ಕಾಲಾಮೃತ*** ಮುಂತಾದ ಗ್ರಂಥಗಳನ್ನು ನೋಡುವುದು ಉಚಿತ. ನಾನು ಇಲ್ಲಿ ಕೆಲವು ಪ್ರಮುಖ ತತ್ವಗಳನ್ನು ಮಾತ್ರ ಕೊಡುತ್ತೇನೆ.

ದೇವತಾ ವಿಗ್ರಹದ ಪ್ರತಿಷ್ಠಾಪನೆಯನ್ನು ಉತ್ತರಾಯಣದಲ್ಲಿ ನೆರವೇರಿಸಬೇಕು. ಮಾಘಮಾಸ ಕೂಡದು. **ಕಾಲಪ್ರಕಾಶಿಕ** ಗ್ರಂಥದ ಪ್ರಕಾರ ಗುರು ಶುಕ್ರರು ಸುಪ್ರತಿಷ್ಠಿತರಾಗಿರುವಾಗ ಮತ್ತು ಅವರ ಮೇಲೆ ಬೇರಾವ ಪ್ರತಿಕೂಲ ಪ್ರಭಾವವೂ ಇಲ್ಲದಿರುವಾಗ, ಪ್ರತಿಷ್ಠಾಪನ ಕಾರ್ಯವನ್ನು ನೆರವೇರಿಸಬೇಕು.

ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯ, ಉತ್ತರ, ಹಸ್ತ, ಸ್ವಾತಿ, ಉತ್ತರಾಷಾಢ, ಉತ್ತರಾಭಾದ್ರ ಈ ಉದ್ದೇಶಕ್ಕೆ ಉತ್ಕೃಷ್ಟವಾದ ನಕ್ಷತ್ರಗಳು. ನವಮಿ ಬಿಟ್ಟು ಉಳಿದೆಲ್ಲ ತಿಥಿಗಳೂ ಬಿದಿಗೆ, ಷಷ್ಠಿ, ದಶಮಿ, ಸಹಿತವಾಗಿ ಅನುಕೂಲಕರ. ಲಗ್ನವು ಸ್ಥಿರ ರಾಶಿಯಾಗಿರಬೇಕು. ಸ್ತ್ರೀ ದೇವತೆಯ ಪ್ರತಿಷ್ಠೆಗೆ ಉಭಯ ಸ್ವಭಾವ ರಾಶಿಯನ್ನು ಆರಿಸಿಕೊಳ್ಳಬೇಕು. ಚರ ರಾಶಿಗಳನ್ನು ಬಿಡಬೇಕು. ಲಗ್ನದಲ್ಲಿ ಸೂರ್ಯ ಚಂದ್ರರಿರಬಾರದು. ಅಶುಭರೂ ಇರಬಾರದು. ಹಾಗಿಲ್ಲವಾದರೆ ಆವೂರು ನಾಶವಾಗುತ್ತದೆ. ಏಳರಲ್ಲಿ ಯಾವ ಅಶುಭನೂ ಇರಕೂಡದು. ಎಂಟರಲ್ಲಿ ಯಾವ ಗ್ರಹವೂ ಇರಕೂಡದು. ಸಮಾರಂಭವನ್ನು ವರ್ಷಾಂತದಲ್ಲೂ ಆಯನಾಂತದಲ್ಲೂ ದಿನಾಂತದಲ್ಲೂ ನಕ್ಷತ್ರಾಂತದಲ್ಲೂ ಮಾಡಬಾರದು. ಹಾಗೆ ಸೂರ್ಯ ಚಂದ್ರರಿಗೆ ಪರಿವೇಷ ಕಟ್ಟಿರುವ ದಿವಸಗಳಲ್ಲೂ ಕೂಡದು.

# ಇತರೆ ವಿಷಯಗಳನ್ನು ಕುರಿತ ಮುಹೂರ್ತಗಳು

ಹಿಂದಿನ ಪುಟಗಳಲ್ಲಿ ಮನುಷ್ಯನ ಎಲ್ಲ ಚಟುವಟಿಕೆಗಳಿಗೂ ಸಂಬಂಧಪಟ್ಟಂತೆ ಮುಹೂರ್ತಗಳನ್ನು ಗೊತ್ತುಪಡಿಸುವ ವಿಷಯವನ್ನು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಕ್ರೀಡೆಗಳು, ಕಾನೂನು ಮೊಕದ್ದಮೆಗಳು, ಸೆರೆಯಾಳುಗಳು, ಯುದ್ಧಗಳು ಇವನ್ನು ಕುರಿತು ಪ್ರಸ್ತಾಪಿಸುತ್ತೇನೆ.

***ಲಾಟರಿ ಮತ್ತು ಸ್ಪರ್ಧೆಗಳು :*** ಲಾಟರಿಗಳಲ್ಲೂ ಸ್ಪರ್ಧೆಗಳಲ್ಲೂ ಸಾಧಾರಣವಾಗಿ ಜಯಶಾಲಿಗಳಾಗಬೇಕಾದರೆ ಜನ್ಮ ಕುಂಡಲಿಯಲ್ಲಿ ಧನಭಾವ ಬಲಯುತವಾಗಿದ್ದು, ದಶಾಭುಕ್ತಿಗಳು ಕುರಿತುಕೊಂಡ ಕಾಲದಲ್ಲಿ ಅನುಕೂಲವಾಗಿರಬೇಕು. ಆದಕಾರಣ, ಈ ಅದೃಷ್ಟ ಪರೀಕ್ಷೆ ಆಟಗಳಲ್ಲಿ ಮುಹೂರ್ತದ ಪ್ರಾಬಲ್ಯವನ್ನು ಅಷ್ಟಾಗಿ ನೆಚ್ಚಿಕೊಳ್ಳುವುದಕ್ಕೆ ಆಗುವುದಿಲ್ಲ.

ಅಶ್ವಿನಿ, ಭರಣಿ, ಪುನರ್ವಸು, ಪುಷ್ಯ, ಹಸ್ತ, ಚಿತ್ರ, ವಿಶಾಖ, ಪೂರ್ವಾಷಾಢ, ರೇವತಿ ನಕ್ಷತ್ರಗಳು ಈ ಸ್ಪರ್ಧೆಗಳಲ್ಲಿ ತೊಡಗಲು ಸರ್ವೋತ್ಕೃಷ್ಟವಾದವು. ಬಿದಿಗೆ, ತದಿಗೆ, ಪಂಚಮಿ, ಷಷ್ಠಿ, ಏಕಾದಶಿ, ತ್ರಯೋದಶಿಗಳು ಒಳ್ಳೆಯವು. ಮಂಗಳವಾರ, ಶನಿವಾರ ಹೊರತಾಗಿ ಉಳಿದೆಲ್ಲ ವಾರದ ದಿವಸಗಳು ಉಪಯುಕ್ತ. ಚಂದ್ರನೂ ಐದನೆ ಒಂಭತ್ತನೆ ಮನೆಗಳು ಬಲವಾಗಿರಲಿ ಲಗ್ನವು ಶುಭ ಗ್ರಹದ್ದಾಗಿರಲಿ. ಹನ್ನೊಂದರ ಅಧಿಪತಿಯು ಹನ್ನೆರಡರಲ್ಲೂ ಕುಜನು ಎಂಟರಲ್ಲೂ ಇರುವುದು ಬೇಡ. ಶನಿಯು ಎರಡನೆಯ ಮನೆಯ ಮೇಲೂ ಎರಡರ ಅಧಿಪತಿಯ ಮೇಲೂ ಯಾವ ದೃಷ್ಟಿಯನ್ನೂ ಬೀರದೆ ಇರಲಿ.

***ಜೂಜು ಕುದುರೆಗಳು :*** ಇಲ್ಲೂ ಜನ್ಮ ಕುಂಡಲಿಯು ಮುಖ್ಯ. ಕುದುರೆಗಳ ಅಧಿಪತಿ ಅಶ್ವಿನಿ ಎನ್ನುತ್ತಾರೆ. ಆದ ಕಾರಣ ಆ ನಕ್ಷತ್ರವು ಕುದುರೆಗಳನ್ನು ಜೂಜಿಗಾಗಿ ಕೊಳ್ಳಲೂ ತರಬೇತಿ ಮಾಡಲೂ ಶ್ರೇಷ್ಠ. ಕೃತ್ತಿಕ, ಮೃಗಶಿರ, ಪುನರ್ವಸು, ಪುಷ್ಯ, ಉತ್ತರಾಭಾದ್ರ, ಹಸ್ತ, ಸ್ವಾತಿ, ವಿಶಾಖ, ಅನೂರಾಧ, ಧನಿಷ್ಠ ಉತ್ತಮ.

ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಅನುಕೂಲಕರ. ನಿಮ್ಮ ಕುದುರೆಯು ಜೂಜಿನಲ್ಲಿ ಓಡಬೇಕಾದರೆ ಧನುಸ್ಸು ಲಗ್ನವಾಗಿದ್ದು ಹತ್ತನೆ ಮನೆಯು ಬಲಯುತವಾಗಿರಲಿ.

***ಕಾನೂನು ಕಟ್ಟಳೆಗಳನ್ನು ಪ್ರಾರಂಭಿಸುವುದು :*** ಪ್ರತಿಕೂಲರಾದ ತಿಥಿಗಳನ್ನು ಯಥಾ ಪ್ರಕಾರ ನಿವಾರಿಸಿಕೊಳ್ಳಿ. ಅಶ್ವಿನಿ, ರೋಹಿಣಿ, ಮೃಗಶಿರ, ಪುಷ್ಯ, ಉತ್ತರ, ಹಸ್ತ, ಚಿತ್ತ, ಅನೂರಾಧ, ಧನಿಷ್ಠ, ರೇವತಿ ಒಳ್ಳೆಯವು. ಮಂಗಳವಾರ, ಶನಿವಾರ ಬೇಡ. ಲಗ್ನವನ್ನು ಬಲಪಡಿಸಲು ಗುರು ತ್ರಿಕೋಣದಲ್ಲಿರಲಿ. ಆರನೆ ಮನೆಯಲ್ಲಿ ಅಶುಭನಿಲ್ಲದೆ ಇರಲಿ ಲಗ್ನಾಧಿಪತಿಯೂ ಷಷ್ಠಾಧಿಪತಿಯೂ ಸಾಧ್ಯವಾದಷ್ಟು ಪರಸ್ಪರ ದೂರವಾಗಿರಲಿ. ಲಗ್ನವು, ಕಡೆಯ ಪಕ್ಷ ನವಾಂಶವು ಮೇಷವಾಗಿದ್ದರೆ, ಮೊಕದ್ದಮೆಯು ಜಯಪ್ರದವಾಗುತ್ತದೆ. ಶುಭರು ಕೇಂದ್ರದಲ್ಲಿದ್ದು ಅಥವಾ ಪುರುಷರಾಶಿಗಳಲ್ಲಿದ್ದು ಶುಭದೃಷ್ಟಿಗೊಳಗಾಗಿದ್ದರೆ, ಉಭಯ ಪಕ್ಷಗಳ ನಡುವೆ ರಾಜಿಯುಂಟಾಗುತ್ತದೆ.

***ತಪ್ಪಿಸಿಕೊಂಡ ಖೈದಿಗಳನ್ನು ಹುಡುಕುವುದು :*** ಶನಿವಾರ, ಸೋಮವಾರ, ಮಂಗಳವಾರ ಅನುಕೂಲಕರವಾದ ವಾರದ ದಿವಸಗಳು. ಅಶ್ವಿನಿ, ರೋಹಿಣಿ, ಆರ್ದ್ರ, ಆಶ್ಲೇಷ, ಪುಬ್ಬ, ಚಿತ್ತ, ವಿಶಾಖ, ಮೂಲ, ಉತ್ತರಾಷಾಢ, ರೇವತಿ ಶುಭದಾಯಕ. ಲಗ್ನವು ಚರರಾಶಿಯಾಗಿದ್ದು ಚಂದ್ರ ಅಥವಾ ಬುಧ ಅಲ್ಲಿರಬೇಕು. ಇಲ್ಲವೇ ಅದನ್ನು ಕಾಣಿಸುತ್ತಿರಬೇಕು. ಷಷ್ಠಾಧಿಪತಿ ಏಕಾದಶದಲ್ಲಿ ನಿರ್ಬಾಧಿತನಾಗಿರಬೇಕು. ಹನ್ನೆರಡರಲ್ಲಿ ಚಂದ್ರನು ಯಾವ ಗ್ರಹದ ಸಂಗಡವೂ ಇಲ್ಲದಿರುವಂತೆ ನೋಡಿಕೊಳ್ಳಿ. ಸೂರ್ಯನು ದುರ್ಬಲನಾಗಿರಬೇಕು. ಸಾಧ್ಯವಾದರೆ ರಾಹು ಅಥವಾ ಕೇತು ಲಗ್ನದಲ್ಲಿರಲಿ. ಲಗ್ನಾಧಿಪತಿ ಸಪ್ತಮಾಧಿಪತಿಗಳು ಪರಿವರ್ತನೆಗೊಂಡಿರಬೇಕಾದುದು ಅಪೇಕ್ಷಣೀಯ.

***ಆಯುಧ ಕೊಳ್ಳುವುದು :*** ಅತ್ಯಂತ ಪ್ರಶಸ್ತವಾದ ನಕ್ಷತ್ರಗಳೆಂದರೆ ಪುನರ್ವಸು, ಪುಷ್ಯಮಿ, ಹಸ್ತ, ಚಿತ್ತ, ರೋಹಿಣಿ, ಮೃಗಶಿರ, ವಿಶಾಖ, ಅನೂರಾಧ, ಜ್ಯೇಷ್ಠ, ಉತ್ತರ, ಉತ್ತರಾಷಾಢ, ಉತ್ತರಾಭಾದ್ರ, ರೇವತಿ, ಅಶ್ವಿನಿ, ರಿಕ್ತ ತಿಥಿಗಳಾದ ಚೌತಿ, ನವಮಿ, ಚತುರ್ದಶಿ ಬೇಡ. ಭಾನುವಾರ, ಗುರುವಾರ, ಶುಕ್ರವಾರ ಶುಭದಾಯಕ. ಕೆಲವು ಶಾಸ್ತ್ರ ಗ್ರಂಥಗಳಲ್ಲಿ ಮಂಗಳವಾರವನ್ನು ಶುಭವೆಂದು ಹೇಳಿದೆ. ಕುಜನ ರಾಶಿ ಉದಯವೂ ಉಚ್ಚವೂ ಆಗಿರಬೇಕು. ಕುಜನು ಸುಪ್ರತಿಷ್ಠಿತನಾಗಿರಬೇಕು.

***ಯುದ್ಧಾರಂಭ :*** ಯುದ್ಧ ಪ್ರಾರಂಭಕ್ಕೆ ತಕ್ಕ ನಕ್ಷತ್ರಗಳಾವುವು ಎಂಬುದನ್ನು ಯಾವ ಮುಹೂರ್ತ ಗ್ರಂಥದಲ್ಲೂ ವಿವಿಕ್ತವಾಗಿ ಪ್ರಸ್ತಾಪಿಸಿಲ್ಲ. ಶತ್ರು ಸಂಹಾರಕ್ಕೆ

ತಕ್ಕ ಗ್ರಹ ಯೋಗಗಳನ್ನು ಕೊಟ್ಟಿದೆ. ಆದಾಗ್ಯೂ ಈ ವಿಷಯವಾಗಿರುವ ಜ್ಯೋತಿಷ ಸಾಹಿತ್ಯವನ್ನು ಪರಾಮರ್ಶಿಸಿ, ಕೆಳಗೆ ಹೇಳಿರುವ ಸಂಗತಿಗಳನ್ನು ಸಂಗ್ರಹಿಸಿದ್ದೇವೆ. ಯುದ್ಧ ಪ್ರಾರಂಭಿಸಲು ತಕ್ಕ ನಕ್ಷತ್ರಗಳು ಯಾವುದೆಂದರೆ ಅಶ್ವಿನಿ, ಭರಣಿ, ಕೃತ್ತಿಕ, ಆರ್ದ್ರ, ಆಶ್ಲೇಷ, ಮಖ, ಪುಬ್ಬ, ಚಿತ್ತ, ಜ್ಯೇಷ್ಠ, ಶತಭಿಷ, ರೇವತಿ ತಿಥಿಗಳ ಪೈಕಿ ಚೌತಿ, ನವಮಿ, ಚತುರ್ದಶಿಗಳನ್ನು ಬಿಟ್ಟರೆ ಉಳಿದವು ಅದೃಷ್ಟಕರ ಎನ್ನುತ್ತಾರೆ. ಭಾನುವಾರ, ಮಂಗಳವಾರ, ಗುರುವಾರ ವಿಜಯವನ್ನು ಖಚಿತಪಡಿಸಿಕೊಡುತ್ತವೆ ಎಂದು ಭಾವನೆ.

ನಮ್ಮ ನಮ್ರವಾದ ಅಭಿಪ್ರಾಯದಲ್ಲಿ ಮಂಗಳವಾರವನ್ನು ಚುನಾಯಿಸಿಕೊಂಡರೆ ಅಂದು ಕುಜನು ಪ್ರಬಲನಾಗಿರಬೇಕು.

ಚರ ಲಗ್ನದಲ್ಲಿ ಚಂದ್ರನು ಸ್ಥಿರ ರಾಶಿಯಲ್ಲಿರುವಾಗ ಯುದ್ಧಾರಂಭ ಮಾಡಿದರೆ ಶತ್ರುವು ಅವಾಂತರದಲ್ಲಿ ಪರಾರಿಯಾಗುತ್ತಾನೆ. ಎಂದು ಹೇಳಿದೆ. ಲಗ್ನವು ಮೇಷ, ಸಿಂಹ, ವೃಷಭ ಅಥವಾ ಧನುಸ್ ಆಗಿದ್ದರೂ ಶತ್ರುಪಲಾಯನವು ಸುಲಭವಾಗಿ ಆಗುತ್ತದೆಂದೂ ಹೇಳಲಾಗಿದೆ. ಮಹತ್ತಾಗಿ ಪ್ರಾಣಹಾನಿ, ರಕ್ತಪಾತ ತಪ್ಪಿಸಬೇಕಾದರೆ ಕುಜ ಶನಿಗಳ ಸಮಾಗಮವೂ ಆಗಿರಕೂಡದು. ಪರಸ್ಪರ ವೀಕ್ಷಣವೂ ಇರಬಾರದು. ಕುಜನು ಸಪ್ತಮದಲ್ಲಿ ಅಥವಾ ನೆತ್ತಿಯ ಮೇಲೆ ಉಚ್ಚನಾಗಿರಬೇಕು. ಲಗ್ನವು ಯಥಾಪ್ರಕಾರ ಬಲಯುತವಾಗಿರಬೇಕು.

***ದುರ್ಗ ವಿಧ್ವಂಸನ :*** ಅಗ್ನಿತತ್ತ್ವ ರಾಶಿಯು ಉದಯಿಸುತ್ತಿದ್ದು ಅದರಲ್ಲಿ ಕುಜನಿರಬೇಕು ಅಥವಾ ಅದನ್ನು ಕುಜನು ಕಾಣುತ್ತಿರಬೇಕು. ಇಂಥ ಭದ್ರಕೋಟೆ ಯಾದರೂ ಮೇಷದಲ್ಲಿ ಆರಂಭವಾದ ದಾಳಿಗೆ ಬಲಿಯಾಗುತ್ತದೆ. ಅದೇ ರೀತಿಯಲ್ಲಿ ಧನುಸ್ ಲಗ್ನವಾಗಿದ್ದು ಅದರಲ್ಲಿ ಕುಜನಿದ್ದರೆ, ಎಂಥ ಭದ್ರಕೋಟೆ ಯಾದರೂ ಬೀಳುವುದು ಅನಿವಾರ್ಯವಾಗುತ್ತದೆ.

***ಶಾಂತಿ ವ್ಯವಸ್ಥೆ:*** ರಾಷ್ಟ್ರಗಳ ಜೀವನದಲ್ಲಿ ಇದೊಂದು ಮುಖ್ಯವಾದ ಪ್ರಕರಣ. ಗುರುವಿನ ಪ್ರಬಲವಾದ ಪ್ರಭಾವದಲ್ಲಿ ಶಾಂತಿ ವ್ಯವಸ್ಥೆಯಾಗಬೇಕು. ಲಗ್ನವು ಅಂಶವೂ ಮೀನವೋ, ವೃಷಭವೋ, ಕನ್ಯೆಯೋ, ಆಗಿರಬೇಕು. ಶುಭರು ಭದ್ರವಾಗಿ ಸ್ಥಾಪಿತರಾಗಿರಬೇಕು. ಶನಿಯು ಹನ್ನೆರಡರಲ್ಲೋ ಉಪಚಯದಲ್ಲೋ ಇರಬೇಕು. ಕುಜ–ರಾಹು ಅಥವಾ ಕುಜ–ಶನಿ, ಅಥವಾ ರಾಹು–ಶನಿ ಸಮಾಗಮ ಇರಕೂಡದು. ಶಾಂತಿ ಒಪ್ಪಂದಕ್ಕೆ ಸಹಿ ಹಾಕುವವರ ಜನ್ಮ ಕುಂಡಲಿಗಳು ಸಮರಸವಾಗಿ ಇರಬೇಕು. ಮೃಗಶಿರ, ಚಿತ್ತ, ಧನಿಷ್ಠ, ಆರ್ದ್ರ, ಸ್ವಾತಿ, ಶತಭಿಷ, ಅನೂರಾಧ, ಉತ್ತರಾಭಾದ್ರ,

ನಕ್ಷತ್ರಗಳನ್ನು ಬಿಡಬೇಕು. ಹಾಗೆ ಚೌತಿ ಸಪ್ತಮಿ ಅಷ್ಟಮಿ ನವಮಿ ದ್ವಾದಶಿಗಳನ್ನು ಬಿಡತಕ್ಕುದು. ಮುಂದೆ ಕೊಟ್ಟಿರುವ ಗ್ರಹಯೋಗಗಳಲ್ಲಿ ಏರ್ಪಡಿಸಿದ ಶಾಂತಿಯು ಚಿರಕಾಲ ಬಾಳುತ್ತದೆಂದು ಹೇಳುತ್ತಾರೆ:

1) ಹತ್ತರಲ್ಲಿ ಚಂದ್ರ, ನಾಲ್ಕರಲ್ಲಿ ಗುರು, ಹನ್ನೊಂದರಲ್ಲಿ ಕುಜ, ಶನಿಗಳು (ಕುಜ ಶನಿಗಳ ಯುತಿ ಇರಕೂಡದು).

2) ಲಗ್ನದಲ್ಲಿ ಗುರು, ಸಪ್ತಮದಲ್ಲಿ ಬುಧ, ತೃತೀಯದಲ್ಲಿ ಶನಿ, ಷಷ್ಠದಲ್ಲಿ ಸೂರ್ಯ, ಚತುರ್ಥದಲ್ಲಿ ಶುಕ್ರ.

3) ಲಗ್ನದಿಂದ ಪಂಚಮದಲ್ಲಿ (ಅದು ವೃಷಭವಾಗಿರಬೇಕು), ತೃತೀಯದಲ್ಲಿ ಸೂರ್ಯ, ಷಷ್ಠದಲ್ಲಿ ಕುಜ

4) ಲಗ್ನದಲ್ಲಿ ಬುಧ, ಸಪ್ತಮದಲ್ಲಿ ಗುರು, ದಶಮದಲ್ಲಿ ಚಂದ್ರ.

5) ಲಗ್ನದಲ್ಲಿ ಗುರು (ಸ್ಥಿರ ರಾಶಿಯಾಗಿರಬೇಕು), ಸಪ್ತಮದಲ್ಲಿ ಬುಧ, ದಶಮದಲ್ಲಿ ಚಂದ್ರ.

ಜ್ಯೋತಿಷದ ಹಿತವಾದಕ್ಕೆ ನಮ್ಮ ರಾಜನೀತಿಜ್ಞರು ಕಿವಿಗೊಡುವರೆ ? ಈ ಸುಲಭವಾದ ಜ್ಯೋತಿಷಿಕ ನಿಯಮಗಳನ್ನು ಪ್ರಯೋಗಿಸಿ ಶಾಂತಿಯನ್ನು ಸಂರಕ್ಷಿಸುವ ಮೂಲಕ ಪ್ರಪಂಚವನ್ನು ಯುದ್ಧದ ಪಿಡುಗಿನಿಂದ ಪಾರು ಮಾಡುವರೆ?

## ಸಾರಾಂಶ

ಹಿಂದಿನ ಹದಿನೇಳು ಅಧ್ಯಾಯಗಳಲ್ಲಿ ನಾವು ಮುಹೂರ್ತಕ್ಕೆ ಸಂಬಂಧಪಟ್ಟ ಎಲ್ಲ ಪ್ರಾಕಾರಗಳನ್ನೂ ಪ್ರಸ್ತಾಪಿಸಿದ್ದೇವೆ. ಮುಹೂರ್ತವು ಭಾರತವಲ್ಲಿ ಮಾತ್ರವಲ್ಲ ಪ್ರಪಂಚದ ಇತರ ಕಡೆಗಳಲ್ಲೂ ಜನರಲ್ಲಿ ವಾಡಿಕೆಯಾಗಿದೆ.

ಮುಹೂರ್ತ ಶಾಸ್ತ್ರದ ತತ್ವಾಧಾರ ಯಾವುದೆಂದರೆ, ಎಲ್ಲ ಮಾನವ ಪ್ರಯತ್ನಗಳಿಗೂ ಕಾಲ ಅಥವಾ ವೇಳೆ ಎಂಬ ಕಾರಣೀಭೂತವಾದ ಸಂದರ್ಭವಿದೆ ಎಂಬುದನ್ನು ಗ್ರಹಿಸಿರುವದೇ ಆಗಿದೆ. ಜೀವಕ್ಕೆ ಸಕಲ ಮೂಲವೂ ಭೂಮಿಯ ಮೇಲಣ ನಡುವಳಿಕೆಗಳಿಗೆ ಸಕಲಾಧಾರವೂ ಆದುದು ಸೂರ್ಯ ಎಂಬುದು ಸರ್ವ ಸಮ್ಮತವಾದ ವಿಷಯ. ಈ ಶೋಭಾಯಮಾನವಾದ ಆಕಾಶ ಕಾಯದಿಂದ ಹೊರಹೊಮ್ಮುವ ಶಕ್ತಿಗಳು ಇತರೆ ಆಕಾಶಕಾಯಗಳ ಸಂಪರ್ಕದ ಪರಿಣಾಮವಾಗಿ ತೀವ್ರತೆಯಲ್ಲೂ ಪ್ರಭಾವದಲ್ಲೂ ವ್ಯತ್ಯಾಸಗೊಳ್ಳುತ್ತವೆ. ಮನುಷ್ಯನೇ ವಿದ್ಯುತ್ ಸೆಳೆತಗಳ ಒಂದು ಪಿಂಡಿ. ಆದಕಾರಣ ಮನುಷ್ಯನಿಂದ ಸತತವಾಗಿ ವಿಕಿರಣಗೊಳ್ಳುವ ಶಕ್ತಿಗಳಿಗೂ ಗ್ರಹಗಳ ಪ್ರಭಾವಗಳಿಗೂ ಯಾವಾಗಲೂ ಪರಸ್ಪರ ಪ್ರತಿಕ್ರಿಯೆಯುಂಟಾಗುತ್ತಿರುತ್ತದೆ. ಮುಹೂರ್ತವೆಂದರೆ, ಮಾನವ ವಿಕಿರಣಗಳಿಗೂ ನಾಕ್ಷತ್ರಿಕ ವಿಕಿರಣಗಳಿಗೂ ಪರಸ್ಪರ ಸಾಮರಸ್ಯ, ಅಂದರೆ ಅನುರಣನ ಅತ್ಯಧಿಕವಾಗಿರುವ ಪ್ರಶಸ್ತವಾದ ವೇಳೆ.

ಜಾತಕ ವಿದ್ಯೆಯು ಲಕ್ಷಣ ಸೂಚಕ. ಮುಹೂರ್ತ ಶಾಸ್ತ್ರವಾದರೋ ನಿವಾರಕ ಇಲ್ಲವೆ ವಿಧಾಯಕ. ವಿಧಿ ಅಥವಾ ಅದೃಷ್ಟ ಎಂಬುದು ಕಡ್ಡಾಯ ಎಂಬ ವಾದವನ್ನು ಅದು ನಿರಾಕರಿಸಿ, ಕಾರಣ ವಿಹಿತವಾದ ಪರಿಮಿತಿಯೊಳಗೆ ಇಚ್ಛಾ ಸ್ವಾತಂತ್ರ್ಯ ಅಥವಾ ಪುರುಷ ಪ್ರಯತ್ನಕ್ಕೆ ಅವಕಾಶವಿದೆ ಎಂದು ಸ್ಥಾಪಿಸುತ್ತದೆ. ಆದ ಕಾರಣ ಜನ್ಮ ಕುಂಡಲಿಯ ಒಂಭತ್ತನೆ ಮನೆಯಲ್ಲಿ ಬಾಧೆಗಳು ಕಂಡುಬಂದರೂ ಸರಿಯಾದ ಮುಹೂರ್ತದಿಂದ ಅವನ್ನು ನಿಷ್ಕ್ರಿಯೆಗೊಳಿಸಬಹುದು ಅಥವಾ ಕೊಂಚಮಟ್ಟಿಗಾದರೂ ತಗ್ಗಿಸಿಕೊಳ್ಳಬಹುದು.

ಚಂದ್ರನು ಮನಸ್ಸಿಗೂ ಮತ್ತು ನಮ್ಮೆಲ್ಲ ಮಾನಸಿಕ ಸಂಯಮ ಪ್ರವೃತ್ತಿಗಳಿಗೂ ಕಾರಕನಾಗಿರುವ ಕಾರಣ, ಮುಹೂರ್ತವು ಜನ್ಮ ಚಂದ್ರನ ಮಹತ್ವವನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಆದುದರಿಂದ ಪ್ರತಿಯೊಂದು ಮುಹೂರ್ತವನ್ನೂ ಜನ್ಮತಾರೆಗೂ, ತತ್ಪರಿಣಾಮವಾಗಿ ಜನ್ಮ ಚಂದ್ರನಿಗೂ ಅನ್ವಯವಾಗುವಂತೆಯೇ ಗೊತ್ತುಪಡಿಸಲಾಗುತ್ತದೆ. ಜನ್ಮ ತಾರೆ ಎಂದರೆ ವ್ಯಕ್ತಿ ಹುಟ್ಟಿದಾಗ ಚಂದ್ರನಿದ್ದ ನಕ್ಷತ್ರ. ಜನ್ಮ ಚಂದ್ರನು ಜನನ ಕಾಲದಲ್ಲಿದ್ದ ರಾಶಿಯು ಜನ್ಮರಾಶಿ.

ಮುಹೂರ್ತ ನಿರ್ಣಯದಲ್ಲಿ ಪಂಚಾಂಗದ ಪ್ರಾಮುಖ್ಯ ದೊಡ್ಡದು. ಪಂಚಾಂಗಗಳು ಯಾವುವೆಂದರೆ (1) ವಾರ (2) ತಿಥಿ (3) ನಕ್ಷತ್ರ (4) ಯೋಗ (5) ಕರಣ.

ತಿಥಿ ಅಂದರೆ ಚಾಂದ್ರಮಾನ ದಿವಸ. ಇದನ್ನು ತಿಳಿಯವ ಬಗೆ ಹೇಗೆ: ಕುರಿತ ವೇಳೆಯಲ್ಲಿದ್ದ ಚಂದ್ರ ಸ್ಫುಟದಿಂದ ಸೂರ್ಯ ಸ್ಫುಟವನ್ನು (ಡಿಗ್ರಿಗಳಲ್ಲಿ) ಕಳೆಯಿರಿ. ಶೇಷವನ್ನು 12ರಿಂದ ಭಾಗಿಸಿ. ಭಾಗಲಬ್ಧಕ್ಕೆ ಒಂದನ್ನು ಸೇರಿಸಿ. ಅದೇ ಚಾಲ್ತಿಯಲ್ಲಿರುವ ತಿಥಿ. ಶೇಷವನ್ನು 12ರಿಂದ ಕಳೆದು, ಉಳಿದುದನ್ನು ಅಂದಿನ ದಿವಸದ ಚಲನದ ಡಿಗ್ರಿಗಳಿಂದ ಭಾಗಿಸಿದರೆ, ಆ ದಿನ ಚಾಂದ್ರಮಾನದ ದಿವಸವು (ತಿಥಿಯು) ಬದಲಾಯಿಸುತ್ತದೆ ಎಂಬುದು ದೊರಕುತ್ತದೆ. ವಾರ ಅನ್ನುವುದು ವಾರ ನಾಮಾಂಕಿತರಾದ ದಿವಸ. ಭಾನುವಾರದಿಂದ ಪ್ರಾರಂಭವಾಗಿ ಶನಿವಾರ ಮುಕ್ತಾಯವಾಗುತ್ತದೆ. ನಕ್ಷತ್ರವೆಂದರೆ ಅಂದು ಚಂದ್ರನಿರುವ ನಕ್ಷತ್ರ. ಇದನ್ನು ತಿಳಿಯುವ ಬಗೆ: ಚಂದ್ರ ಸ್ಫುಟವನ್ನು ನಿಮಿಷಗಳಾಗಿ ಪರಿವರ್ತಿಸಿ, 800 ರಿಂದ ಭಾಗಿಸಿ. ಭಾಗಲಬ್ಧವು ಕಳೆದ ನಕ್ಷತ್ರವನ್ನು ಸೂಚಿಸುತ್ತದೆ. ಶೇಷವು ಮುಂದಿನ ನಕ್ಷತ್ರದ ಭಾಗ ತರುವಾಯ ಯೋಗ. ಇದನ್ನು ಹೀಗೆ ತಿಳಿಯಬಹುದು. ಸೂರ್ಯ ಚಂದ್ರರ ಸ್ಫುಟಗಳನ್ನು ಕೂಡಿ ಅದನ್ನು ಸೂರ್ಯ ಚಂದ್ರರ ಚಲನದ ಮೊತ್ತದಿಂದ ಭಾಗಿಸಿ. ಭಾಗಲಬ್ಧವು ಎಂದಿನಂತೆ ಕಳೆದ ಯೋಗವನ್ನು ಸೂಚಿಸುತ್ತದೆ. ಇನ್ನು ಉಳಿದವು ಮೂರು ಅಂಗಗಳು. ಕರಣ ಅಂದರೆ ಅರ್ಧ ಚಂದ್ರ ದಿವಸ. ನಕ್ಷತ್ರಗಳು 27.ಯೋಗಗಳು 27 ಮತ್ತು ಕರಣಗಳು 11.

ಮುಹೂರ್ತದಲ್ಲಿ ನಕ್ಷತ್ರ ವಾರ ತಿಥಿಗಳಿಗೆ ಅಗ್ರ ಪ್ರಾಧಾನ್ಯ. ಉಳಿದೆರಡು ಅಂಗಗಳು ತಮ್ಮ ತಮ್ಮ ರೀತಿಯಲ್ಲಿ ಮುಖ್ಯವಾದರೂ ಎರಡನೆ ಹಂತಕ್ಕೆ ಸೇರಿದವು.

ಶುಭ ಮುಹೂರ್ತವನ್ನು ಆಯ್ಕೆ ಮಾಡುವಾಗ, ಯಾವ ಉದ್ದೇಶಕ್ಕಾಗಿ ಎಂಬುದಕ್ಕೆ ತಕ್ಕ ಗಮನವೀಯಬೇಕು. ಮನುಷ್ಯನ ಚಟುವಟಿಕೆ ಪ್ರತಿಯೊಂದಕ್ಕೂ

ಪ್ರತ್ಯೇಕವಾದ ಭಾವವನ್ನು (ಮನೆಯನ್ನು) ಬಳಿಪಡಿಸಬೇಕಾಗುತ್ತದೆ. ಇಲ್ಲವೆ ಪ್ರತ್ಯೇಕ ಗ್ರಹಯೋಗವನ್ನು ಅಪೇಕ್ಷಿಸಬೇಕಾಗುತ್ತದೆ.

ರಾಶಿಗಳಿಗೂ ನಕ್ಷತ್ರಗಳಿಗೂ ತ್ಯಾಜ್ಯ ಕಾಲವುಂಟು. ಅಂಥ ಕಾಲಗಳನ್ನು ಎಲ್ಲ ಸತ್ಕಾರ್ಯಗಳಿಗೂ ಬಿಟ್ಟು ಬಿಡಬೇಕು. ಮಂಗಳವಾರ ಶನಿವಾರ ಎಲ್ಲ ಒಳ್ಳೆಯ ಕಾರ್ಯಗಳಿಗೂ ಕೆಟ್ಟವು. ಈ ಸಾಮಾನ್ಯ ನಿಯಮಕ್ಕೆ ಕೆಲವು ವಾಪಕಗಳು ಅಂದರೆ ವಿನಾಯತಿಗಳುಂಟು. ಉದಾಹರಣೆಗೆ ಮಂಗಳವಾರವು ಶಸ್ತ್ರಚಿಕಿತ್ಸೆಗೆ ಒಳ್ಳೆಯದು.

ಅತ್ಯಂತ ಮುಖ್ಯವಾಗಿ ಪರಿಗಣಿಸಬೇಕಾದ ಸಂಗತಿಗಳು ಯಾವುವೆಂದರೆ ತಾರಾಬಲ ಅರ್ಥಾತ್ ನಕ್ಷತ್ರ ಬಲ, ಚಂದ್ರಬಲ ಮತ್ತು ಪಂಚಕ ಬಲ. ಪಂಚಕ ಬಲ ಎಂದರೆ ಕುರಿತ ವೇಳೆಯಲ್ಲಿರುವ ಐದು ಬಗೆಯ ಶಕ್ತಿಗಳ ಮೊತ್ತ. ಇವೆಲ್ಲ ಪ್ರಕರಣಗಳಲ್ಲೂ ವಿನಾಯಿತಿಗಳಿರುವುದನ್ನು ಗಮನಿಸತಕ್ಕುದು. ಆದುದರಿಂದ ಮುಹೂರ್ತವನ್ನು ಗೊತ್ತುಪಡಿಸುವಾಗ ತುಂಬ ಎಚ್ಚರವಾಗಿರಬೇಕು. ಪ್ರತಿಯೊಂದು ನಕ್ಷತ್ರವೂ ಒಂದು ಬಗೆಯ ಕಾರ್ಯಕ್ಕೆ ತಕ್ಕದು. ವಾಸ್ತವವಾಗಿ, ಪುಷ್ಯಮಿಯು ಪರಮ ಶ್ರೇಷ್ಠವಾದ ನಕ್ಷತ್ರವೆಂದು ಪರಿಗಣಿಸಲ್ಪಟ್ಟಿದೆ. ಅದನ್ನು ಮದುವೆ ವಿನಾಯಿಸಿ ಬಾಕಿ ಎಲ್ಲ ಕಾರ್ಯಗಳಿಗೂ ಉಪಯೋಗಿಸಬಹುದು.

ವಿವಿಧ ಶಕ್ತಿಗಳು ಚಾಲ್ತಿಯಲ್ಲಿರುವುದರಿಂದ 21 ಮಹಾದೋಷಗಳು ಉಂಟಾಗುತ್ತವೆ. ಈ ದೋಷಗಳ ಪೈಕಿ ಸಾಧ್ಯವಾದಷ್ಟನ್ನು ನಿವಾರಿಸಿಕೊಳ್ಳಬೇಕು. ಇವುಗಳನ್ನು ಕುಜಾಷ್ಟಮ ಮತ್ತು ಭೃಗುಷಷ್ಠಕ ಮದುವೆಗೆ ಅಪಾಯಕಾರಿ. ಉಳಿದವೂ ತಮಗೆ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೇಡುಂಟು ಮಾಡುತ್ತವೆ. ಜ್ಯೋತಿಷಿಯಾದವನು ಒಂದು ಮುಖ್ಯವಾದ ವಿಷಯಕ್ಕೆ ಗಮನ ಕೊಡಬೇಕು. ಸರ್ವ ಪ್ರಕಾರವಾಗಿಯೂ ಸಮರ್ಪಕವಾದ ಮುಹೂರ್ತವೆಂಬುದು ದೊರಕುವುದೇ ಇಲ್ಲವಾದ ಕಾರಣ, ಒಳ್ಳೆಯ ಪ್ರಭಾವಗಳು ಕೆಟ್ಟ ಪ್ರಭಾವಗಳನ್ನು ಬದಿಗೆ ತಳ್ಳುವಂತಿರಬೇಕು. ಕೆಟ್ಟ ಪ್ರಭಾವಗಳನ್ನು ಇಲ್ಲವಾಗಿಸುವ ಅಥವಾ ಅವುಗಳ ಹೊಡೆತವನ್ನು ಕುಗ್ಗಿಸುವ ಹಲವಾರು ವಿನಾಯಿತಿಗಳೂ ಯೋಗಗಳೂ ಇವೆ. ಉದಾಹರಣೆಗೆ ಯಾವ ವಾರದ ಅಧಿಪತಿಯು ಬಲಯುತನಾಗಿರುತ್ತಾನೋ ಆ ವಾರದ ದೋಷ ಇಲ್ಲವಾಗುತ್ತದೆ. ಲಗ್ನದಲ್ಲಿ ಶುಭನು ಉಚ್ಚನಾಗಿದ್ದರೆ ಇತರ ಎಲ್ಲ ದೋಷಗಳನ್ನೂ ನಿವಾರಿಸುತ್ತಾನೆ. ಕೇಂದ್ರಗಳು ಬಲಯುತವಾಗಿದ್ದರೆ, ದೋಷ ಮೂಲಗಳೆಲ್ಲ ಕಡಿಮೆಯಾಗುತ್ತವೆ.

ಇಂಥ ತಿಥಿ, ಇಂಥ ವಾರ, ಇಂಥ ನಕ್ಷತ್ರ ಕೂಡಿದರೆ ಕೆಲವು ವಿಶೇಷ ಯೋಗಗಳುಂಟಾಗಿ ತುಂಬ ಒಳ್ಳೆಯ ಪ್ರಭಾವಗಳನ್ನು ಉಂಟುಮಾಡುತ್ತವೆ. ಉದಾಹರಣೆಗೆ ಗುರುವಾರ ಚೌತಿಯಾಗಿ ಮಖ ನಕ್ಷತ್ರದಿಂದ ಕೂಡಿದ್ದರೆ ಅದು ಸಿದ್ಧಯೋಗವನ್ನು ಉಂಟುಮಾಡುತ್ತದೆ. ಇದು ಅತ್ಯಂತ ಪ್ರಶಸ್ತವಾದ ಯೋಗ. ಈ ಪ್ರಭಾವಗಳನ್ನು ಮುಹೂರ್ತ ಹುಡುಕುವವರು ಗಮನಿಸಬೇಕು.

ಷೋಡಶ ಕರ್ಮ ಅಂದರೆ ಹದಿನಾರು ಕರ್ಮಗಳನ್ನು ಹಿಂದುಗಳು ಮಾಡಬೇಕಾಗಿ ವಿಧಿಸಿದೆ. ಈ ಪೈಕಿ ಕೆಲವು ವಿನಾ ಉಳಿದವಲ್ಲ ಎಲ್ಲ ಜಾತಿ ಮತ ಶಾಸ್ತ್ರಗಳಿಗೂ ಅನ್ವಯವಾಗುತ್ತವೆ. ಆದಕಾರಣ ಅವು ಸಾರ್ವತ್ರಿಕ ಆಚರಣೆಯಲ್ಲಿರುವುವು. ನಿಷೇಕವು* ಜ್ಯೋತಿಷದ ಅಪೇಕ್ಷೆಯಿಂದ ಅತ್ಯಂತ ಮುಖ್ಯವಾದ ಪ್ರಥಮ ಲಿಂಗ ಕ್ರಿಯೆ. ಏಕೆಂದರೆ ಈ ನಕ್ಷತ್ರಗಳು ಮಾನವ ಭ್ರೂಣದ ಮೇಲೂ ಪ್ರಾಣಿಗಳ ಭ್ರೂಣದ ಮೇಲೂ ತಮ್ಮ ವಿಸರಣ ಪ್ರಭಾವ ಬೀರುತ್ತವೆ. ಆದರೆ ಎಲ್ಲ ಸಜೀವ ನಿರ್ಜೀವ ವಸ್ತುಗಳೂ ಎಲೆಕ್ಟ್ರಾನ್‌ಗಳಿಂದ ರಚಿತವಾಗಿರುವ ಕಾರಣ – ಎಲೆಕ್ಟ್ರಾನ್ ಆದರೂ ವಸ್ತುರೂಪದ ವಿಸರಣಗಳು – ಭ್ರೂಮಿಯ ಮೇಲೆ ಅಂಗಾಂಗಗಳು ಆಕೃತಿಗೊಳ್ಳುವ ಕಾರ್ಯವು ನೇರವಾಗಿ ಮಾನವ ಅಂಡದ ಮೇಲೆ ಗರ್ಭಾಂಕುರ ಕಾಲದಲ್ಲಿ ಬೀಳುವ ಈ ವಿಸರಣಗಳನ್ನು ಅವಲಂಬಿಸಿದೆ.

ನಮ್ಮ ಪ್ರಾಚೀನರು ಪುಂಸವನ ಎಂಬ ಕರ್ಮವನ್ನು ಭ್ರೂಣವು ಒಂದು ಮಟ್ಟದ ಬೆಳವಣಿಗೆಯನ್ನು ಪಡೆಯುವ ಕಾಲದಲ್ಲಿ ಮಾಡುವ ಮೂಲಕ ಲಿಂಗವನ್ನು ಬದಲಾಯಿಸಲು ಶಕ್ಯ ಎಂದು ಸೂಚಿಸಿದ್ದಾರೆ. ಜನ್ಮಾನಂತರದ ಕರ್ಮಗಳಲ್ಲಿ ಉಪನಯನವು ತುಂಬ ಮುಖ್ಯ. ಈ ಕರ್ಮಕ್ಕೆ ಮುಹೂರ್ತ ಹೊಂಚುವುದು ತುಂಬ ಕಷ್ಟಸಾಧ್ಯ. ಜ್ಯೋತಿಷ ಅಭ್ಯರ್ಥಿಯು ತನ್ನ ವಿದ್ಯಾ ವ್ಯಾಸಂಗದಲ್ಲಿ ಸಾಕಷ್ಟು ಅನುಭವವನ್ನು ಪಡೆಯುವ ತನಕ ಈ ಕೆಲಸವನ್ನು ಪ್ರಾಜ್ಞರಿಗೆ ಬಿಡುವುದು ಉಚಿತ. ಅನುಭವ ಮತ್ತು ಜ್ಞಾನ ಪಡೆದ ನಂತರ ಸ್ವತಂತ್ರವಾಗಿ ವರ್ತಿಸಬಹುದು. ಮದುವೆಗೆ ಮುಹೂರ್ತ ನಿಷ್ಕರ್ಷಿಸುವಾಗ ಮುಂದೆ ಕೊಟ್ಟಿರುವ ಸೂಚನೆಗಳನ್ನು ಜೋಪಾನವಾಗಿ ಗಮನಿಸತಕ್ಕದು :

---

* ಎ ಗ್ರಾಂಡ್ ಪ್ರಾಬ್ಲಂ ಎಂಬ ಫ್ರೆಂಚ್ ಪುಸ್ತಕ ಕರ್ತ ಲಾಯೊವಸ್ಕಿ

1) ಕೈಗೆ ಬಂದ ಕುಂಡಲಿಗಳು ನ್ಯೂನಾತಿರೇಕಗಳಿಲ್ಲದೆ ಸರಿಯಾಗಿ ಹಾಕಿದವೆ ಎಂಬುದನ್ನು ಪರೀಕ್ಷಿಸಿದ ಹೊರತು ಕುಂಡಲಿಗಳು ಹೊಂದುತ್ತವೆಯೆ ಎಂದು ನೋಡುವ ಗೋಜಿಗೆ ತೊಡಗಬೇಡಿ.

2) ವಧೂವರರ ಆಯುರ್ದಾಯವನ್ನು ಪರೀಕ್ಷಿಸಿ ವಧುವಿಗಾಗಲಿ ವರನಿಗಾಗಲಿ ಅಲ್ಪಾಯು ಸೂಚಿತವಾಗಿದ್ದರೆ ಅಂಥ ಸಂಬಂಧವನ್ನು ಕುದುರಿಸಬೇಡಿ. ಉಭಯ ಕುಂಡಲಿಗಳಲ್ಲೂ ನಿವಾರಕ ಪ್ರಭಾವಗಳಿವೆಯೇ ಪರಿಶೀಲಿಸಿ.

3) ಏಳನೆ ಎಂಟನೆ ಮನೆಗಳನ್ನು ಜಾಗರೂಕತೆಯಿಂದ ಪರೀಕ್ಷಿಸಬೇಕು. ಹಲವು ದೋಷಗಳು ಕಂಡುಬರುವಾಗ ಅವಕ್ಕೆ ಪರಿಹಾರವಾದ ಪ್ರತಿ ಪ್ರಭಾವಗಳಿವೆಯೇ ಕಂಡುಹಿಡಿಯಿರಿ. ಯಾವುವೂ ಇಲ್ಲವಾದರೆ ತಿರಸ್ಕರಿಸಿ.

4) ಮೊದಲ ಪರಿಗಣನೆ ಅಂದರೆ ಕುಂಡಲಿಯ ಬಲಾಬಲ. ಎರಡನೆಯದೇ ಮದುವೆಗೆ ಹೊಂದುತ್ತವೆಯೇ ಎಂಬ ಪ್ರಶ್ನೆ.

5) ರಾಕ್ಷಸ ಗಣದ ಹುಡುಗಿಯನ್ನು ಮನುಷ ಗಣದ ಅಥವಾ ದೇವ ಗಣದ ಹುಡುಗನಿಗೆ ಮದುವೆ ಮಾಡಕೂಡದು. ಇದಕ್ಕೆ ಪ್ರತಿರೂಪದಲ್ಲೂ ಮದುವೆ ಕೂಡದು.

6) ಗ್ರಹಮೈತ್ರಿಯು ವಿವಾಹ ಭದ್ರತೆಗೆ ಅತ್ಯವಶ್ಯಕವಾದ ಲಕ್ಷಣ. ಅದನ್ನು ನೋಡುವಾಗ ಉಭಯತ್ರರ ಜನ್ಮರಾಶಿಯಿಂದ ಮಾತ್ರವಲ್ಲ ಜನ್ಮ ನವಾಂಶದಿಂದಲೂ ಪರಿಶೀಲಿಸಬೇಕು. ಜನ್ಮ ರಾಶಿಯಲ್ಲಿ ಗ್ರಹ ಮೈತ್ರಿ ಇಲ್ಲದಿರುವಾಗ ಜನ್ಮ ನವಾಂಶದಲ್ಲಿಯೇ ನೋಡಬೇಕು. ಕೆಲವು ಸಂದರ್ಭಗಳಲ್ಲಿ (ಪುಟ....) ಗ್ರಹ ಮೈತ್ರಿಯನ್ನು ಕೂಡ ಕಡೆಗಾಣಬಹುದು. ಇವನ್ನೆಲ್ಲ ಜಾಗರೂಕತೆಯಿಂದ ಪರೀಕ್ಷಿಸದ ಹೊರತು ಅಭಿಪ್ರಾಯ ಪ್ರಕಟಿಸಬಾರದು. ಜನ್ಮ ನಕ್ಷತ್ರವು ಇಬ್ಬರಿಗೂ ಒಂದೇ ಆಗಿರುವ ಪ್ರಕರಣ ಪ್ರಾರಂಭಿಕರಿಗೆ ಕೊಂಚ ಕ್ಲಿಷ್ಟವಾಗಿದ್ದೀತು. ಈ ವಿಷಯದಲ್ಲಿ ಸೂಕ್ಷ್ಮ ತಾರತಮ್ಯಗಳಿರುವುದನ್ನು ಜೋಪಾನವಾಗಿ ಗ್ರಹಿಸಬೇಕು. ತರುವಾಯ ಕುಜದೋಷ. ಈ ದೋಷ ಕುರಿತು ಭಾರತದ ಕೆಲ ಭಾಗಗಳಲ್ಲಿ ದೊಡ್ಡ ಹಗರಣ ಮಾಡುತ್ತಿದೆ. ಎಲ್ಲ ಜ್ಯೋತಿಷಿಕ ನಿಟ್ಟುಗಳಿಂದಲೂ ಕುಂಡಲಿಗಳನ್ನು ಪರೀಕ್ಷಿಸದ ಹೊರತು ಯಾವ ಜಾತಕವನ್ನೂ ತಿರಸ್ಕರಿಸಬಾರದು.

7) ಹುಡುಗ ಹುಡುಗಿಯರಿಬ್ಬರ ಜಾತಕಗಳಲ್ಲೂ ಐದನೆಯ ಮನೆಯು ಪೀಡಿತವಾಗಿದ್ದರೆ, ಅವರ ಮದುವೆಯು ಅಪೇಕ್ಷಣೀಯವಲ್ಲ. ಈ ಜಾತಕ ಸಂಬಂಧವಾದ ಕುಂದುಕೊರತೆಗಳಲ್ಲಿ ಸಮರ್ಪಕವಾದ ಮುಹೂರ್ತ ಚುನಾಯಿಸುವುದರಿಂದ ನಿವಾರಿಸಿಕೊಳ್ಳಬಹುದು.

8) * " ಮೇಲೆ ಹೇಳಿರುವ ತತ್ವಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದೇನೆ ಎಂದು ನಿಮ್ಮ ಜ್ಯೋತಿಷಾಭ್ಯಾಸದ ಪ್ರಾರಂಭದಲ್ಲಿ ದುಡುಕಬಾರದು. ಅತಿ ನೆಚ್ಚಿಕೆಯನ್ನು ಹೊಂದಬಾರದು. ಈ ವಿಷಯಗಳಲ್ಲಿ ಯಾರು ಅನುಭವಸ್ಥರೆಂದು ನಿಮಗೆ ವಿಶ್ವಾಸವಿರುತ್ತದೆಯೋ ಮತ್ತು ಯಾರ ಅಭಿಪ್ರಾಯವನ್ನು ನೀವು ಪಡೆದುಕೊಂಡು ನಿಮ್ಮ ಮತ್ತು ಅವರ ಅನುಭವ ಜ್ಞಾನಗಳನ್ನು ಹೋಲಿಸಿ ನೋಡ ಬಯಸುತ್ತೀರೋ ಅವರೊಡನೆ ವಿಚಾರ ವಿನಿಮಯ ಮಾಡಿಕೊಳ್ಳಿ."

9) ಮದುವೆ ಮಾಡುವಾಗ ಯಾರಿಗೆ ಮದುವೆ ಉದ್ದಿಷ್ಟವಾಗಿರೆಯೋ ಅವರಿಗಿಂತ ಹಿರಿಯರಾದ ಒಡಹುಟ್ಟಿದವರು ಅಂದರೆ ಜ್ಯೇಷ್ಠರು ಮೂರು ಮಂದಿಗಿಂತ ಹೆಚ್ಚಾಗಿ ಮದುವೆ ಆಗದೆ ಉಳಿದಿರಬಾರದು. ಜ್ಯೇಷ್ಠ ಎಂದರೆ ಮೊದಲು ಹುಟ್ಟಿದ ಮಗ ಅಥವಾ ಮಗಳು. ಜ್ಯೇಷ್ಠಮಾಸವು ಇದೆ. ಜ್ಯೇಷ್ಠಾ ನಕ್ಷತ್ರವೂ ಇದೆ. ಆದ ಕಾರಣ, ಜ್ಯೇಷ್ಠರ ಮದುವೆಯನ್ನು ಜ್ಯೇಷ್ಠ ಮಾಸದಲ್ಲೂ ಜ್ಯೇಷ್ಠಾ ನಕ್ಷತ್ರದಲ್ಲೂ ಮಾಡಕೂಡದು. ಮದುಮಗಳೂ ಮದುಮಗನೂ ಜ್ಯೇಷ್ಠರಾಗಿದ್ದರಂತೂ ಮದುವೆಯನ್ನು ಜ್ಯೇಷ್ಠಮಾಸದಲ್ಲೂ ಜ್ಯೇಷ್ಠಾ ನಕ್ಷತ್ರದಲ್ಲೂ ಮಾಡಕೂಡದು.

10) ಮದುವೆಗೆ ಮುಹೂರ್ತವನ್ನು ಗೊತ್ತುಪಡಿಸುವಾಗ ಏಳನೆ ಮನೆಯನ್ನು ಶುದ್ಧವಾಗಿರುವಂತೆ ನೋಡಿಕೊಳ್ಳಬೇಕು. ಆರನೆ ಎಂಟನೆ ಮನೆಗಳಲ್ಲಿ ಕ್ರಮವಾಗಿ ಶುಕ್ರ ಕುಜರು ಇರಬಾರದು. ಗುರುವು ಕೇಂದ್ರದಲ್ಲೋ ಕೋಣದಲ್ಲೋ ಇರುವುದು ಅಪೇಕ್ಷಣೀಯ.

11) ಜನ್ಮ ವಿವರಗಳು ದೊರಕದೆ ಇರುವಾಗ ನಾಮ ನಕ್ಷತ್ರಗಳನ್ನು (ಪರಿಶಿಷ್ಟ .... ನೋಡಿ) ತೆಗೆದುಕೊಳ್ಳಬೇಕು. ಹೆಸರಿನಲ್ಲಿ ಅಕ್ಷರಗಳಿರುತ್ತವಷ್ಟೆ. ಅಕ್ಷರ ಎಂದರೆ ನಾಶವಿಲ್ಲ ಧ್ವನಿ ಸ್ಪಂದನಗಳು. ನೀವು ಒಂದು ಹೆಸರನ್ನು ಗಮನಿಸುವಾಗ ಆ ವ್ಯಕ್ತಿಯ ಶಕ್ತಿ ಸಂಚಯ ಎಷ್ಟು ಎಂಬುದನ್ನು ನೀವು ಅಳಿಯುತ್ತಿರುತ್ತೀರಿ.

12) ತಂದೆ ತಾಯಿಗಳು ತಮ್ಮ ಮಕ್ಕಳ ವಿವಾಹಗಳನ್ನು ಪ್ರದರ್ಶನಪೂರ್ವಕವಾಗಿ ನಡೆಸಲು ಸಮಾರಾಧನೆ, ಸಂಗೀತ ಕಛೇರಿ, ಆಭರಣಗಳು, ಚಪ್ಪರ ಮುಂತಾದವಕ್ಕಾಗಿ ಯಥೇಷ್ಟವಾಗಿ ದುಂದು ವೆಚ್ಚ ಮಾಡುತ್ತಾರೆ. ಆದರೆ ಯೋಗ್ಯನಾದ ಜ್ಯೋತಿಷಿಯಿಂದ ಶುಭ ಮುಹೂರ್ತವನ್ನು ಕಟ್ಟಿಸಿಕೊಳ್ಳುವುದಕ್ಕೆ ತಕ್ಕ ಸಂಭಾವನೆಕೊಡಲು ಕೈ

---

* **ದಿ ಆಸ್ಟ್ರಾಲಜಿಕಲ್ ಮಿರರ್** ಎಂಬ ಆಂಗ್ಲ ಗ್ರಂಥಕರ್ತ ಪ್ರೊ.ಬಿ. ಸೂರ್ಯನಾರಾಯಣರಾವ್

ತಡೆಯುತ್ತಾರೆ. ಜ್ಯೋತಿಷ ಸಲಹೆಯನ್ನು ಕೇಳುವುದು ಕೇವಲ ಔಪಚಾರಿಕವಲ್ಲದೆ ಮಹತ್ವದ ಪ್ರಸಂಗವಾಗಿ ಇರುವ ಪಕ್ಷಕ್ಕೆ ಪ್ರಾಜ್ಞರಾದ ಜ್ಯೋತಿಷಿಗಳಿಗೆ ತಕ್ಕ ಸಂಭಾವನೆಯನ್ನು ಕೊಡಬೇಕು. ಯುಕ್ತವಾದ ಮುಹೂರ್ತವು ವಧೂವರರ ಭವಿಷ್ಯವನ್ನು ಭದ್ರಪಡಿಸುತ್ತದೆ. ಈ ದಿಸೆಯಲ್ಲಿ ಖರ್ಚು ಮಾಡಿದ ಹಣವು ಸದ್ವಿನಿಯೋಗವೇ ಆಗುತ್ತದೆ. ದಕ್ಷನಾದ ಜ್ಯೋತಿಷಿಯನ್ನು ಲೇಂಕಾರದಿಂದ ಕೇಳದೆಯೇ ಮಾಡಿದ ಮದುವೆಯು ಹಳಸಿಕೊಂಡರೆ ದೇಹಶ್ರಮ ಧನ ವ್ಯಯ ಎಲ್ಲ ವ್ಯರ್ಥವಾಗುತ್ತವೆ. ಆದಕಾರಣ ದಕ್ಷನಾದ ಜ್ಯೋತಿಷಿಯ ಪ್ರಯೋಜನವನ್ನು ಪಡೆಯತಕ್ಕದು.

ಹದಿನಾಲ್ಕನೆ ಅಧ್ಯಾಯದಲ್ಲಿ ಕೊಟ್ಟಿರುವ ಮುಹೂರ್ತ ಸೂಚನೆಗಳು ಮನುಷ್ಯನ ವ್ಯವಹಾರಗಳಿಗೆ ತುಂಬ ಮುಖ್ಯವಾದವು. ಸಾಧ್ಯವಾದಷ್ಟು ಮಟ್ಟಿಗೂ ಅವಕ್ಕೆ ತಕ್ಕ ಪ್ರಾಮುಖ್ಯತೆ ಕೊಡತಕ್ಕುದು – ಪ್ರಯಾಣ ಹೊರಡುವುದೋ ವ್ಯವಹಾರ ಪ್ರಾರಂಭಿಸುವುದೋ ಮುಖ್ಯವಾದ ಕಾರ್ಯ ಕೈಕೊಳ್ಳುವುದೋ ಯಾವುದಾದರೂ ಸರಿ. ದಿನ ನಿತ್ಯದ ಚಟುವಟಿಕೆಗಳಿಗೆ ತಕ್ಕ ಮುಹೂರ್ತಗಳನ್ನು ಹೊಸ ಜ್ಯೋತಿಷಿಯವರೂ ಗೊತ್ತುಪಡಿಸಬಹುದು.

ಮನೆ ಕಟ್ಟುವುದಕ್ಕೆ ಸಂಬಂಧಿಸಿದಂತೆ ಜ್ಯೋತಿಷದ ಪ್ರಾಮುಖ್ಯ ಹೆಚ್ಚು ಸಾಧಾರಣವಾಗಿ ವಾಸ್ತುಶಿಲ್ಪಿಯೂ ಮನೆ ಕಟ್ಟುವ ಕೆಲಸದ ಗುತ್ತಿಗೆದಾರನೂ ಕಡೆಗಾಣುವ ಅಂಶಗಳನ್ನು ಜ್ಯೋತಿಷವು ಎಣಿಕೆಗೆ ತೆಗೆದುಕೊಳ್ಳುತ್ತದೆ. ಮನೆ ಕಟ್ಟಲು ಉಪಯೋಗಿಸುವ ಸಾಮಾನುಗಳು ವಿವಿಧ ರೀತಿಯ ಶಕ್ತಿಗಳನ್ನು ವಿಕಿರಣ ಮಾಡುತ್ತವೆ. ಈ ವಿಕಿರಣ ಶಕ್ತಿಗಳು ಕೆಲವು ಒಳ್ಳೆಯವು ಕೆಲವು ತಟಸ್ಥ. ಮತ್ತೆ ಕೆಲವು ಖಂಡಿತವಾಗಿಯೂ ಕೆಡುಕುಂಟುಮಾಡತಕ್ಕವು. ಈ ಮೂಲಗಳಿಂದ ಬರುವ ಕೆಡುಕಿನ ಶಕ್ತಿಗಳನ್ನು ಶುಭ ಮುಹೂರ್ತದಲ್ಲಿ ಅಡಿಪಾಯ ಹಾಕುವುದರಿಂದಲೂ ಗೃಹ ಪ್ರವೇಶ ಮಾಡುವುದರಿಂದಲೂ ಕುಂಠಿಸಬಹುದು. ಹೊಸ ಜ್ಯೋತಿಷಿಯು ಈ ಕೆಲಸ ಕೈಕೊಳ್ಳುವ ಜವಾಬ್ದಾರಿ ಹೊತ್ತುಕೊಳ್ಳಬಾರದು. ಈ ಕೆಲಸಕ್ಕೆ ವಾಸ್ತು ಶಾಸ್ತ್ರದ ಪರಿಪೂರ್ಣವಾದ ಪರಿಶ್ರಮ ಇರಬೇಕು.

ಪ್ರಯಾಣ ಅಥವಾ ಯಾತ್ರೆ ಕೈಕೊಳ್ಳಲು ಕೃತ್ತಿಕ, ರೋಹಿಣಿ ನಕ್ಷತ್ರಗಳನ್ನೂ ಅಷ್ಟಮಿ, ನವಮಿಗಳನ್ನೂ ನಿವಾರಿಸಿಕೊಳ್ಳಬೇಕು. ವಿವಿಧವಾದ ಬೇರೆ ಬೇರೆ ದಿಕ್ಕುಗಳಿಗೆ ಪ್ರಯಾಣ ಕೈಕೊಳ್ಳುವುದನ್ನೂ ನಿಷೇದಿಸಿದೆ. ತುರ್ತು ಪ್ರಸಂಗಗಳಲ್ಲಿ ಅಂಥ ನಿಷೇಧಗಳಿಗೆ ವಿನಾಯಿತಿಗಳೂ ಉಂಟು. ಪ್ರಯಾಣಕ್ಕೆ ತಕ್ಕ ಕಾಲವನ್ನು ಚುನಾಯಿಸುವಾಗ, ಅನುಕೂಲವಾದ ನಕ್ಷತ್ರ, ಬಲಗೊಂಡಿರುವ ಲಗ್ನ ಮೊದಲ

ಪರಿಗಣನೆ ಆಗಬೇಕು. ಹತ್ತಿರದ ಪ್ರಯಾಣಗಳಿಗೆ ತಾರಾಬಲವಿದ್ದರೆ ಸಾಕು. ಯಾತ್ರೆಗೆ ಹೊರಡಲೂ ಅಥವಾ ಮುಖ್ಯವಾದ ಕಾರ್ಯಾರ್ಥ ಪ್ರಯಾಣಮಾಡಲೂ ಎಲ್ಲ ಜ್ಯೋತಿಷದ ಅವಶ್ಯಕತೆಗಳನ್ನು ಗಮನಿಸಿ, ತಕ್ಕ ಮುಹೂರ್ತವನ್ನು ಗೊತ್ತುಪಡಿಸಿಕೊಳ್ಳಬೇಕು.

ಚಿಕಿತ್ಸಾ ಮುಹೂರ್ತಗಳು ರೋಗದಿಂದ ಶೀಘ್ರ ಗುಣಮುಖರಾಗುವಂತೆ ಮಾಡುವ ಉದ್ದೇಶವುಳ್ಳವು. ಚಂದ್ರನ ಚಲನಕ್ಕೂ ಕೆಲವು ಬಗೆ ರೋಗಗಳು ಉಲ್ಬಣಾವಸ್ಥೆ ತಾಳುವುದಕ್ಕೂ ಅನುಸಂಬಂಧವಿದೆ. ಇದರಿಂದಾಗಿ, ಹಳೆಯ ರೋಗಗಳ ಚಿಕಿತ್ಸೆಗೂ ಶಸ್ತ್ರ ಚಿಕಿತ್ಸೆಗೂ ತೊಡಗಲು ಯುಕ್ತವಾದ ಕಾಲವನ್ನು ಚುನಾಯಿಸತಕ್ಕುದೆಂದು ಸೂಚಿತವಾಗುತ್ತದೆ. ಸಾಧಾರಣವಾಗಿ ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಕ್ರಮವಾಗಿ ಹಸ್ತ ಅಶ್ವಿನಿ, ಚಿತ್ತ, ಪುನರ್ವಸು ನಕ್ಷತ್ರರೊಡಗೂಡಿದ್ದರೆ ವಾಯಿದೆ ಜ್ವರಗಳ ಮತ್ತು ಹಳೆ ಕಾಯಿಲೆಗಳ ಚಿಕಿತ್ಸೆ ಪ್ರಾರಂಭ ಮಾಡಲು ತುಂಬ ಪ್ರಶಸ್ತ. ಮೇಲಿನ ಮುಹೂರ್ತಗಳ ವೇಳೆಯಲ್ಲಿ ಚಂದ್ರ, ಬುಧ, ಗುರು, ಶುಕ್ರರು ಸ್ವವರ್ಗಗಳಲ್ಲಿದ್ದು, ನವಾಂಶ ಲಗ್ನವು ಚರ ರಾಶಿಯಾದರೆ ವಿಶೇಷತಃ ಪ್ರಶಸ್ತವಾಗುತ್ತದೆ.

ಸಾರ್ವಜನಿಕ ವ್ಯವಹಾರಗಳ ಅನ್ವಯ ಮುಹೂರ್ತ ಗೊತ್ತುಪಡಿಸಿಕೊಳ್ಳುವ ವಿಷಯ ಸಂಶಯಾಸ್ಪದವಾದ ಮಹತ್ವವುಳ್ಳದ್ದು. ಏಕೆಂದರೆ ಇವತ್ತು ಅಧಿಕಾರಸ್ಥರಾದವರ ಮನೋಭಾವ ಆ ರೀತಿಯದಾಗಿದೆ. ಆದರೂ ವಸ್ತುತಃ ಖಾಸಗಿ ಉದ್ದೇಶಗಳಿಗಾಗಿಯೋ ಸಾರ್ವಜನಿಕ ಉದ್ದೇಶಗಳಿಗಾಗಿಯೋ ಮುಹೂರ್ತವನ್ನು ಬಯಸುವವರಿದ್ದಾರೆ. ಅಂಥವರಿಗೆ ಮುಹೂರ್ತ ಕುರಿತ ವಿಧಿನಿಯಮಗಳಿಂದ ಪ್ರಯೋಜನವುಂಟಾಗುವುದು ಉಚಿತ. ಜ್ಯೋತಿಷವನ್ನು ಸರಕಾರವು ಯಥೋಚಿತವಾಗಿ ಮನ್ನಿಸುವ ಮತ್ತು ರಾಷ್ಟ್ರೀಯ, ಅಂತರರಾಷ್ಟ್ರೀಯ ಸಮಸ್ಯೆಗಳ ಪರಿಹಾರಗಳ ಅನ್ವೇಷಣದಲ್ಲಿ ಜ್ಯೋತಿಷವು ಸರ್ವೋತ್ಕೃಷ್ಟವಾದ ವಿಜ್ಞಾನವೆಂದು ಗಣನೆ ಮಾಡುವ ದಿವಸಹೆಚ್ಚು ದೂರವಾಗೇನೂ ಇರಲಾರದೆಂದು ಹಾರೈಸಲಾಗಿದೆ. ನಮ್ಮ ಈ ನಿರೀಕ್ಷೆಯನ್ನು 'ಸ್ತಿಮಿತ ಬುದ್ಧಿಯವರು' ಎನಿಸಿಕೊಳ್ಳುವವರು ಅಪಹಾಸ್ಯಕ್ಕೀಡು ಮಾಡಬಹುದು. ಅಂಥವರ ಮನೋದಿಗಂತ ವಾಡಿಕೆಯಾಗಿ ಪರಿಮಿತವಾದುದು. ಆದರೂ ನಾವು ಧೈರ್ಯದಿಂದ ಹೇಳುತ್ತೇವೆ. ನವನಾಗರಿಕತೆಯ ಸರಕಾರ ಎಳು ಪ್ರಪಂಚದಾದ್ಯಂತ ಯಾವ ಯಾವ ಸಾಧನ ಕಲಾಪಗಳನ್ನು ರಾಷ್ಟ್ರೀಯ ಅಂತರ ರಾಷ್ಟ್ರೀಯ ಜಟಿಲತೆಗಳನ್ನು ಬಿಡಿಸಲು ಉಪಯೋಗಿಸುತ್ತಿವೆಯೋ ಅವೆಲ್ಲಕ್ಕಿಂತ ಅತಿಶಯವಾದ ರೀತಿಯಲ್ಲಿ ಜ್ಯೋತಿಷವನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡರೆ ಹೆಚ್ಚು ಪ್ರಯೋಜನವಾಗುತ್ತದೆ.

## ಮುಕ್ತಾಯ ಸೂಚನೆಗಳು

ಮುಹೂರ್ತವು ಜಾತಕದಲ್ಲಿರುವ ಕುಂದುಗಳಿಗೆಲ್ಲ ಸಿದ್ಧೌಷಧವಲ್ಲ. ಜನ್ಮ ಕುಂಡಲಿಯಲ್ಲಿ ಬದುಕಿನ ಹಲವು ಪ್ರಸಂಗಗಳಿಗೆ ಬಾಧೆಯಾಗಿ ಕಂಡುಬರುವ ದೋಷಗಳನ್ನು ಕೊಂಚಮಟ್ಟಿಗೆ ತಗ್ಗಿಸಬಲ್ಲಂಥ ಶುಭಕರವಾದ ವೇಳೆಯೇ ಮುಹೂರ್ತ.

ಜನ್ಮ ಕುಂಡಲಿಯಲ್ಲಿ ಕುಟುಂಬ ಸಾಮರಸ್ಯವು ಸರ್ವಥಾ ಇಲ್ಲವಾಗಿದ್ದರೆ, ಮುಹೂರ್ತವು ವಿವಾಹ ಸೌಖ್ಯವನ್ನು ಜಾತಕನಿಗೆ ನೀಡುವುದಿಲ್ಲ. ಕೊಂಚಮಟ್ಟಿಗೆ ಘರ್ಷಣೆಯ ಮೂಲವನ್ನು ಅದು ತಗ್ಗಿಸಬಲ್ಲದು.

ಪಂಚಾಂಗದ ಐದು ಅಂಗಗಳಾದ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳ ಪೈಕಿ ನಕ್ಷತ್ರದ್ದೇ ತುಂಬ ಪ್ರಾಧಾನ್ಯ. ಮದುವೆಗೆ ಷಷ್ಠಿ ತಿಥಿಯನ್ನು ಸಾಧನ ತಾರೆಯನ್ನು ಚುನಾಯಿಸಿಕೊಳ್ಳಬಹುದು. ಇದು ಬೃಹಸ್ಪತಿಯ ಮತ. ಇದನ್ನು ಇತರ ಋಷಿಗಳೂ ಅಂಗೀಕರಿಸಿದ್ದಾರೆ. ಅದಾಗ್ಯೂ ತಿಥಿ, ವಾರ ಮುಂತಾದವುಗಳು ದೋಷಯುಕ್ತವಾಗಿದ್ದರೂ ಕೂಡ ಲಗ್ನವು ಪ್ರಬಲವಾಗಿದ್ದರೆ, ದೋಷ ನಿವಾರಣೆ ಆಗುತ್ತದೆ. ಇದು ನಾರದರ ಮತ. ಇದು ನಮಗೆ ಸಮ್ಮತ . ಆದರೆ ವಿಶೇಷ ಸಂದರ್ಭಗಳಲ್ಲಿ ಮಾತ್ರ ಇಂಥ ಪ್ರಸಂಗಕ್ಕೆ ತೊಡಗಬೇಕು. ಉದಾಹರಣೆಗೆ ಪರದೇಶದಿಂದ ಬಂದು ಮದುವೆ ಆದಕೂಡಲೇ ವಾಪಸಾಗಬೇಕಾಗಿರುವ ವರನ ಅನುಕೂಲಾರ್ಥವಾಗಿ ಇಂಥ ಮುಹೂರ್ತಗಳನ್ನು ಗೊತ್ತುಪಡಿಸಿಕೊಳ್ಳಬೇಕು ಅಷ್ಟೆ.

* ಗೌರವನ ಪ್ರಕಾರ ಮದುವೆಗೆ ಗುರು ಬಲಾಢ್ಯನಾಗಿರಬೇಕು. ಹಾಗೆ ಶುಕ್ರ ಪ್ರಯಾಣಕ್ಕೆ, ಬುಧ ವಿದ್ಯೆಯ ಕಲಿಕೆಗೆ, ಕುಜ ಯುದ್ಧಕ್ಕೆ, ಸೂರ್ಯನು ರಾಜನ, ಸರಕಾರದ ಅಧಿಕಾರಿಗಳ ಸಂದರ್ಶನಕ್ಕೆ ಮತ್ತು ಚಂದ್ರನು ಎಲ್ಲ ಕಾರ್ಯಗಳಿಗೂ ಬಲಾಢ್ಯರಾಗಿರಬೇಕು.

ಎಲ್ಲ ಕಾರ್ಯಗಳಿಗೂ ಅಭಿಜಿನ್ ಮುಹೂರ್ತವನ್ನು, ಬೇರೆ ಯಾವ ಶುಭ ಮುಹೂರ್ತವೂ ಸಿಗದಿದ್ದಲ್ಲಿ ಗೊತ್ತುಪಡಿಸಿಕೊಳ್ಳಬಹುದು. ಅಭಿಜಿನ್ ಮುಹೂರ್ತವೆಂದರೆ ನಡು ಹಗಲು. ಸೂರ್ಯೋದಯಕ್ಕೆ ಅಹಃ ಪ್ರಯಾಣದ

---

* ಗುರುರ್ವಿವಾಹೇ ನಮನೇಚ ಶುಕ್ರೋ
ಜ್ಞಾನೇ ಬುಧೌ ವೀಕ್ಷಣಕೇ ಚ ಗೌರಿ:
ರಣೇಷು ಭೌಮೋ ನೃಪಹ ಶನೇರ್ತ:
ಸರ್ವೇಷು ಕಾರ್ಯೇಷು ಶಶೀ ಬಲಾಢ್ಯ:

ಅರ್ಧವನ್ನು ಸೇರಿಸಿ. ಅದೇ ಅಭಿಜಿನ್ ಮುಹೂರ್ತ. ಸೂರ್ಯೋದಯವು ಭಾರತೀಯ ಸ್ಟಾಂಡರ್ಡ್ ವೇಳೆ 6-10 ಗಂಟೆಗೆ ಅನ್ನಿ. ಸೂರ್ಯಾಸ್ತ ಸಂಜೆ 6-15ಕ್ಕೆ. ಇವೆರಡರ ಅಂತರವಾದ ಅಹಃ ಪ್ರಮಾಣ 12 ಗಂಟೆ 30 ನಿಮಿಷಗಳು. ಈ ಅಂತರದ ಅರ್ಧ ಅಂದರೆ 6 ಗಂಟೆ 15 ನಿಮಿಷಗಳನ್ನು ಸೂರ್ಯೋದಯಕ್ಕೆ ಸೇರಿಸಿದರೆ ಅಭಿಜಿನ್ ಮುಹೂರ್ತವು, 6 ಗಂಟೆ 10 ನಿಮಿಷ + 6ಗಂಟೆ 15 ನಿಮಿಷ =12 ಗಂಟೆ 25 ನಿಮಿಷಗಳು ಆಗುತ್ತದೆ.

[1]ಭಾರದ್ವಾಜ ಋಷಿಯ ಪ್ರಕಾರ, ವರ್ಷಗಟ್ಟಲೆ ಹುಡುಕಾಡಿದರೂ ಸರ್ವಥಾ ದೋಷರಹಿತವಾದ ಮುಹೂರ್ತ ದೊರಕುವುದಿಲ್ಲ. ಆದಕಾರಣ ದೋಷಗಳು ಕಡಿಮೆ ಇದ್ದು, ಗುಣಗಳು ಹೆಚ್ಚಾಗಿರುವಂಥ ಮುಹೂರ್ತವನ್ನು ಇಡತಕ್ಕುದು. [2]ನಾರದ ಹೇಳುತ್ತಾನೆ : ಮಹಾ ದೋಷಗಳನ್ನು ನಿವಾರಿಸಿ. ಸಾಧಾರಣ ಗುಣದೋಷಗಳನ್ನು ಪರಿಶೀಲಿಸಿ ಗುಣಗಳು ಹೆಚ್ಚಾಗಿರುವ ಮುಹೂರ್ತವನ್ನು ಚುನಾಯಿಸಿ. ಅದು ಶುಭದಾಯಕವಾಗುತ್ತದೆ.

[3]ಗುರು ಅಥವಾ ಶುಕ್ರ ಲಗ್ನದಲ್ಲಿ ಯಾವಾಗಲೂ ಇರಲಿ ಅಥವಾ ಕೇಂದ್ರದಲ್ಲೋ ಕೋಣದಲ್ಲೋ ಇರಲಿ. ಆಗ ಸಮಸ್ತ ದೋಷಗಳು ವಿಫಲವಾಗುತ್ತವೆ.

ಮದುವೆಯ ವಿಷಯದಲ್ಲಿ ವಿಶೇಷತಃ ಮಹರ್ಷಿಗಳು ಉದಾರ ಮನೋಭಾವವನ್ನು ತಾಳಿರುವಂತೆ ಕಾಣುತ್ತದೆ. ಉದಾಹರಣೆಗೆ, ಹುಡುಗ ಹುಡುಗಿ ಪ್ರಥಮತಃ ಕಂಡು ಪರಸ್ಪರ ಮೆಚ್ಚಿಕೊಂಡಿದ್ದರೆ, ಅದಕ್ಕೆ ಪುರಸ್ಕಾರ ಕೊಡಬೇಕು ಎನ್ನುತ್ತಾರೆ. ಮನೇನುಕೂಲಂ ಪ್ರಥಮಂ ಪ್ರಶಸ್ತಂ. ಜಾತಕಾನುಕೂಲದ ವಿಷಯವಾಗಿ ವಿವಿಧ ಶಾಸ್ತ್ರಕಾರರಲ್ಲಿ ಭಿನ್ನಾಭಿಪ್ರಾಯವು ಕಂಡುಬಂದರೆ, ಶಕುನವನ್ನು (ನಿಮಿತ್ತವನ್ನು) ಕಂಡು ತೀರ್ಮಾನಕ್ಕೆ ಬರುವಂತೆ ಹೇಳುತ್ತಾರೆ. ಜ್ಯೋತಿಷ ಶಾಸ್ತ್ರದ ನಿರೂಪಣೆಯಲ್ಲಿ ನಮ್ಮ ಪೂಜ್ಯ ತಾತಂದಿರಾದ ದಿವಂಗತ ಪ್ರೊ.ಬಿ. ಸೂರ್ಯನಾರಾಯಣರಾಯರು

---

1 ದೋಷಾನ್ ಸರ್ವಾನ್ ಪರಿತ್ಯಜ್ಯ ನ ಶಕ್ಯಂ ಬಹುವತ್ಸರೈಃ |
ತಸ್ಮಾತ್ ಪರೀಕ್ಷ್ಯ ಕರ್ತವ್ಯ ಮಲ್ಪದೋಷ ಗುಣಾಧಿಕಂ||

2 ಮಹಾದೋಷಾನ್ ಪರಿತ್ಯಜ್ಯ ಶೇಷಯೋರ್ಗುಣದೋಷಯೋಃ |
ಗುಣಾಧಿಕ ಸ್ವಲ್ಪದೋಷಃ ನ ಕಾಲೋ ಮಂಗಲಪ್ರದಃ||

3 ತ್ರಿಥಕ್ಷ ಗ್ರಹವೀರಾದೌ ಯೋಯೋದಾಶಾಶ್ಯೋದಿತಃ ಪುರಾ |
ತೇಸರ್ವೇ ನಾಶಮಾಯಾಂತಿ ಜೀವಶುಕ್ರೇ ಕ್ಷಣೋದಯೇ||

ಅತ್ಯಂತ ಪ್ರಮುಖ ವ್ಯಕ್ತಿಗಳಾಗಿದ್ದರು. ಅವರು ಮಹಾನ್ ಚರಿತ್ರಕಾರರು, ವಿದ್ಯಾಪರಿಣತರು, ಬಹುಭಾಷಾ ಪಂಡಿತರು, ದಾರ್ಶನಿಕರು; ಸುಶಿಕ್ಷಿತರು ಎನಿಸಿಕೊಂಡಿದ್ದ ವರ್ಗಕ್ಕೇ ಬಹುತೇಕ ಸೇರಿದ್ದಂಥ ತಪ್ಪು ತಿಳಿವಳಿಕೆಯ ಟೀಕಾಕಾರರ ವಿರುದ್ಧ ಪ್ರೊ.ರಾಯರು ಜ್ಯೋತಿಷವನ್ನು ಪ್ರತಿಪಾದಿಸಿದ್ದರು. ದಿವಂಗತ ಪ್ರೊಫೆಸರ್ ಅವರ ***ದಿ ಆಸ್ಟ್ರಾಲಾಜಿಕಲ್ ಮಿರರ್*** ಎಂಬ ಆಂಗ್ಲ ಗ್ರಂಥದಿಂದ ಮುಂದೆ ಉದ್ಧರಿಸಿಕೊಟ್ಟಿರುವ ಭಾಗದೊಂದಿಗೆ ಈ ಕೃತಿಯನ್ನು ಸಮಾಪ್ತಿಗೊಳಿಸುತ್ತೇನೆ.

"ಕವಿದ ಕತ್ತಲೆಯಲ್ಲಿ ಬೆಳಗುವ ದೀಪವನ್ನು ಎತ್ತಿ ಹಿಡಿಯದೆ ಇರುವುದು ಹೆಡ್ಡತನ. ಬೆಳಗುವಂಥ ದೀಪವನ್ನು ಸರ್ವ ಪ್ರಯತ್ನದಿಂದ ಪಡೆದುಕೊಂಡು ನಮ್ಮ ಭವಿಷ್ಯ ಪಥದ ಮೇಲೆ ಬೆಳಕು ಚೆಲ್ಲುವುದು ಪರಿಪೂರ್ಣ ವಿವೇಕವನ್ನು ಸೂಚಿಸುತ್ತದೆ. ನಿಮ್ಮ ಇಷ್ಟಪ್ರಕಾರ ಭವಿತವ್ಯವನ್ನು ಆರಿಸಿಕೊಳ್ಳಿ. ಗ್ರಹಗಳನ್ನು ಸ್ವಾಧೀನಪಡಿಸಿಕೊಂಡು ಬದುಕಿನ ಹೋರಾಟದಲ್ಲಿ ಗೆದ್ದು ಸುಖವಾಗಿ ಬಾಳಿ. ಇಲ್ಲವಾದರೆ ವೈಯಕ್ತಿಕವಾದ ಯಾವ ಪ್ರಯತ್ನವನ್ನೂ ಮಾಡದೆ ಗ್ರಹಗಳ ಅನಿಷ್ಟ ಪ್ರಭಾವಗಳಿಗೆ ಬಲಿಯಾಗಿ ಹೇಡಿ ಜೀವನವನ್ನು ನಡೆಸಿ."

ಓಂ ತತ್ ಸತ್

# ಅನುಬಂಧ-೧

*ಬಾಧೆ, ಪೀಡೆ* : ಗ್ರಹವು ಅಶುಭ ಗ್ರಹಗಳ ದೃಷ್ಟಿಗೆ ಒಳಗಾಗಿರುವುದು ಇಲ್ಲವೆ ಜತೆಗೂಡಿರುವುದು. ಅಪೋಕ್ಲಿಮ: ಮೂರನೆ, ಆರನೆ, ಒಂಭತ್ತನೆ, ಹನ್ನೆರಡನೆ ಮನೆಗಳು.

*ಶುಭರು* : ವೃದ್ಧಿ, ಚಂದ್ರ, ಒಳ್ಳೆಯ ಸಹವಾಸದಲ್ಲಿರುವ ಬುಧ, ಗುರು ಮತ್ತು ಶುಕ್ರ.

*ಯುತಿ, ಸಮಾಗಮ* : ಜ್ಯೋತಿಷದ ಪ್ರಕಾರ, ಎರಡು ಗ್ರಹಗಳು ಒಂದೇ ರಾಶಿಯಲ್ಲಿದ್ದರೆ, ಅವು ಯುತಿಯಲ್ಲಿ, ಸಮಾಗಮದಲ್ಲಿ ಇರುತ್ತಾರೆ.

*ನೀಚಾವಸ್ಥೆ* : ಗ್ರಹದ ಪ್ರಭಾವವನ್ನು ದುರ್ಬಲಗೊಳಿಸುವ ಸ್ಥಾನ. ಎಲ್ಲ ಗ್ರಹಗಳೂ ತಮ್ಮ ಉಚ್ಚ ಸ್ಥಾನದಿಂದ 180 ದೂರದಲ್ಲಿದ್ದರೆ ನೀಚರಾಗುತ್ತಾರೆ.

*ಮೇಷ ಸಂಕ್ರಾಂತಿ* : ಸಾಯನ ಸೂರ್ಯನು ಮೇಷರಾಶಿಯನ್ನು ಪ್ರವೇಶಿಸುವ ದಿವಸ ಇದು ಸಾಧಾರಣವಾಗಿ ಪ್ರತಿ ವರ್ಷವೂ ಮಾರ್ಚ 21ರಂದು ಬೀಳುತ್ತದೆ. ಮೇಷಾಯನ.

*ತುಲಾ ಸಂಕ್ರಾಂತಿ* : ಸಾಯನ ಸೂರ್ಯನು ತುಲಾರಾಶಿಯನ್ನು ಪ್ರವೇಶಿಸುವ ದಿವಸ. ಇದು ಸಾಧಾರಣವಾಗಿ ಸೆಪ್ಟಂಬರ್ 21ರಂದು ಬೀಳುತ್ತದೆ. ತುಲಾಯನ.

*ಉಚ್ಚಾವಸ್ಥೆ* : ಗ್ರಹದ ಪ್ರಭಾವವನ್ನು ಬಲಗೊಳಿಸುವ ಸ್ಥಾನ. ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ ಕ್ರಮವಾಗಿ ಮೇಷ 10, ವೃಷಭ 3, ಮಕರ 28, ಕನ್ಯಾ 15, ಕಟಕ 5, ಮೀನ 27, ಮತ್ತು ತುಲಾ 20 ಗಳಲ್ಲಿ ಉಚ್ಚ ಸ್ಥಾನವನ್ನು ಪಡೆಯುತ್ತಾರೆ.

*ಬಲಗೊಳಿಸು, ಭದ್ರಗೊಳಿಸಿ* : ಗ್ರಹದ ಸ್ಥಾನವನ್ನು ಭದ್ರಗೊಳಿಸುವುದು, ಬಲಗೊಳಿಸುವುದು ಅಂದರೆ ಅದರ ಮೇಲೆ ಶುಭ ಗ್ರಹಗಳ ದೃಷ್ಟಿ ಬೀಳುವುದು ಅಥವಾ ಕೆಲವು ಕೋಣಾಂತರಗಳಲ್ಲಿ ಗ್ರಹವಿರುವಂತೆ ನೋಡಿಕೊಳ್ಳುವುದು.

*ಮನೆ, ಭಾವ* : ಕುಂಡಲಿಯಲ್ಲಿ ಮನುಷ್ಯನ ಎಲ್ಲ ಚಟುವಟಿಕೆಗಳಿಗೂ ಹೊಂದುವ ಹನ್ನೆರಡು ಮನೆಗಳು ಇರುತ್ತವೆ. ವಿವಿಧವಾದ ಮನೆಗಳಿಗೆ ಸೇರಿದ

ಭಾವಗಳು ಈ ರೀತಿ ಇವೆ.

*ಮೊದಲನೆ ಮನೆ* : ಮೈಕಟ್ಟು, ದೇಹ, ರೂಪ.

*ಎರಡನೆ ಮನೆ* : ಕುಟುಂಬ, ಸಾವಿನ ಕಾರಣ, ಆಸ್ತಿ, ದೃಷ್ಟಿ;

*ಮೂರನೆ ಮನೆ* : ಬುದ್ಧಿ, ಸೋದರ, ಸೋದರಿಯರು.

*ನಾಲ್ಕನೆ ಮನೆ* : ವಾಹನಗಳು, ಸಾಮಾನ್ಯ ಸೌಖ್ಯ, ವಿದ್ಯೆ, ತಾಯಿ.

*ಐದನೆ ಮನೆ* : ಕೀರ್ತಿ, ಮಕ್ಕಳು.

*ಆರನೆ ಮನೆ* : ಸಾಲಸೋಲ, ರೋಗರುಜಿನ, ಕಾರ್ಪಣ್ಯ, ಭಕ್ತಿ.

*ಏಳನೆ ಮನೆ* : ಹೆಂಡತಿ ಅಥವಾ ಗಂಡ, ಸಾವು, ಚಾತುರ್ಯ.

*ಎಂಟನೆ ಮನೆ* : ಆಯುರ್ದಾಯ, ಕೊಡುಗೆಗಳು.

*ಒಂಭತ್ತನೆ ಮನೆ* : ದೇವರು, ಗುರು, ತಂದೆ, ಪ್ರಯಾಣ, ಭಕ್ತಿ.

*ಹತ್ತನೆ ಮನೆ* : ಉದ್ಯೋಗ, ಕರ್ಮ, ಜ್ಞಾನ.

*ಹನ್ನೊಂದನೆ ಮನೆ* : ಲಾಭ.

*ಹನ್ನೆರಡನೆ ಮನೆ* : ನಷ್ಟ, ಮೋಕ್ಷ.

*ಕಾಲಪುರುಷ* : ಪುರುಷ ರೂಪ ತಾಳಿದ ಕಾಲ.

*ಪ್ರತಿಕೂಲ ಕರಣಗಳು* : ವಿಷ್ಟಿ, ಚತುಷ್ಪಾದ, ನಾಗ ಕಿಂಸ್ತುಘ್ನ, ಸುಕುನ.

ಕೇಂದ್ರಗಳು: ಒಂದನೆ, ನಾಲ್ಕನೆ, ಏಳನೆ, ಹತ್ತನೆ ಮನೆಗಳು.

*ಮಹರ್ಷಿಗಳು* : ಭಾರತ ದೇಶದ ಪ್ರಾಚೀನರಾದ ಮಹಾ ಋಷಿಗಳು.

ಅಶುಭ *ಗ್ರಹಗಳು* : ಕ್ಷೀಣ ಚಂದ್ರ, ಕೆಟ್ಟ ಗ್ರಹಗಳೊಡಗೂಡಿದ ಬುಧ, ಸೂರ್ಯ, ಶನಿ, ಕುಜ.

ಮೂಲತ್ರಿಕೋಣ : ಇದು ಉಚ್ಚ ಸ್ಥಾನಕ್ಕೆ ಸಮ. ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿಗಳಿಗೆ ಕ್ರಮವಾಗಿ ಸಿಂಹ, ವೃಷಭ, ಮೇಷ, ಕನ್ಯ ಧನುಸ್, ತುಲ, ಕುಂಭ ಮೂಲತ್ರಿಕೋಣಗಳು.

*ಮುಹೂರ್ತ* : ಫಲ ಜ್ಯೋತಿಷದ ಒಂದು ಮುಖ್ಯ ಶಾಖೆ. ವಿವಿಧ ಮಾನವೀಯ ಚಟುವಟಿಕೆಗಳಿಗೆ ಶುಭದಾಯಕವಾದ ಕಾಲ ನಿಷ್ಕರ್ಷೆ ಮಾಡುವುದನ್ನು ಕುರಿತದ್ದು.

*ನಕ್ಷತ್ರಗಳ ಬಗೆ*: ವಜ್ರ ಅಥವಾ ಕ್ಷಿಪ್ರ – ಭರಣಿ, ಮಖ, ಪುಬ್ಬ, ಪೂರ್ವಾಷಾಢ, ಪೂರ್ವಾಭಾದ್ರ.

*ತೀಕ್ಷ್ಣ ಅಥವಾ ಉಗ್ರ* : ಆರ್ದ್ರ, ಜ್ಯೇಷ್ಠ, ಅಶ್ಲೇಷ, ಮೂಲ. ಲಘು: ಅಶ್ವಿನಿ, ಪುಷ್ಯ, ಹಸ್ತ;

ಮೃದು : ಮೃಗಶಿರ, ಚಿತ್ತ, ಅನೂರಾಧ, ರೇವತಿ. ಸ್ಥಿರ: ರೋಹಿಣಿ, ಉತ್ತರ ಉತ್ತರಾಷಾಢ, ಉತ್ತರಾಭಾದ್ರ. ಚರ: ಪುನರ್ವಸು, ಸ್ವಾತಿ, ಶ್ರವಣ, ಧನಿಷ್ಠ, ಶತಭಿಷ.

ನಾಮ ನಕ್ಷತ್ರ : ನಾಮ ನಕ್ಷತ್ರ ಎಂದರೆ ವ್ಯಕ್ತಿಯ ಹೆಸರಿಗೆ ಅನ್ವಯವಾಗಿರುವ ನಕ್ಷತ್ರ. ಜನ್ಮ ವಿವರಗಳು ಗೊತ್ತಿಲ್ಲದಿರುವಾಗ, ಇದು ಅಗತ್ಯವಾಗುತ್ತದೆ. ತತ್ರ ನಕ್ಷತ್ರಕ್ಕೂ ನಾಲ್ಕು ಅಕ್ಷರಗಳನ್ನು ಕೊಟ್ಟಿದೆ. ಮೊದಲನೆ ಎರಡನೆ ಮೂರನೆ ನಾಲ್ಕನೆ ಪಾದ ಈ ಪ್ರಕಾರವಾಗಿ.

1. ಚು ಚೇ ಚೋ ಲಾ – ಅಶ್ವಿನಿ
2. ಲಿ ಲು ಲೇ ಲೋ – ಭರಣಿ
3. ಅ ಇ ಉ ಎ – ಕೃತ್ತಿಕ
4. ಸ ವಾ ವೀ ವೊ – ರೋಹಿಣಿ
5. ವೇ ವೋ ಕಾ ಕೇ – ಮೃಗಶಿರ
6. ಕೊ ಘಾ ಙ ಛ – ಆರ್ದ್ರ
7. ಕೇ ಕೋ ಹಾ ಹೀ – ಪುನರ್ವಸು
8. ಹೂ ಹೇ ಹೋ ಟಾ – ಪುಷ್ಯಮಿ
9. ಡೀ ಡೂ ಡೇ ಡೋ – ಆಶ್ಲೇಷ
10. ಮಾ ಮೀ ಮೂ ಮೇ – ಮಖ
11. ಮೋ ಟಾ ಟೇ ಟೂ – ಪುಬ್ಬ
12. ಟೇ ಟೋ ಪಾ ಪೀ – ಉತ್ತರ
13. ಪು ಷಾ ಣಾ ಡಾ – ಹಸ್ತ
14. ಪೇ ಪೋ ರಾ ರೀ – ಚಿತ್ತ
15. ರು ರೇ ರಾ ತಾ – ಸ್ವಾತಿ
16. ತೀ ತೂ ತೇ ತೋ – ವಿಶಾಖ
17. ನಾ ನೀ ನೂ ನೇ – ಅನೂರಾಧ
18. ನೋ ಯಾ ಯಿ ಯೂ – ಜ್ಯೇಷ್ಠ
19. ಯೇ ಯೋ ಬಾ ಬೀ – ಮೂಲ
20. ಬು ಭಾ ಭ ಢಾ – ಪೂರ್ವಾಷಾಢ
21. ಬೀ ಬೋ ಜಾ ಜೀ – ಉತ್ತರಾಷಾಢ
22. ಜು ಜೇ ಜೋ ಫ – ಶ್ರವಣ

23. ಗಾ ಗೀ ಗೋ ಗೇ – ಧನಿಷ್ಠ
24. ಗೋ ಸಾ ಸೀ ಸೂ – ಶತಭಿಷ
25. ಸೇ ಸೋ ದಾ ದೀ – ಪೂರ್ವಾಭಾದ್ರ
26. ಮ ಥ ಜ್ಞ – ಉತ್ತರಭಾದ್ರ
27. ದೇ ದೋ ಚಾ ಚೀ – ರೇವತಿ.

ವ್ಯಕ್ತಿಯ ಹೆಸರಿನ ಮೊದಲನೆ ಅಕ್ಷರದಿಂದ ಆತನ ನಾಮ ನಕ್ಷತ್ರವನ್ನು ತಿಳಿಯತಕ್ಕದು. ಉದಾಹರಣೆಗೆ, ವರಾಹ ಅಥವಾ ವಾನ್ಸ್ ಎಂಬ ಹೆಸರನ್ನು ತೆಗೆದುಕೊಳ್ಳೋಣ.

ಹೆಸರಿನ ಪ್ರಥಮಾಕ್ಷರ ವ. ಮೇಲೆ ಕೊಟ್ಟಿರುವ ಪಟ್ಟಿಯಲ್ಲಿ ವಾ ಎಂಬುದು ನಾಲ್ಕನೆ ಸಾಲಿನಲ್ಲಿ ಎರಡನೆ ಪಂಕ್ತಿಯಲ್ಲಿ ಕೊಟ್ಟಿದೆ. ಅಂದರೆ ನಕ್ಷತ್ರವು ರೋಹಿಣಿ ಎರಡನೆ ಪಾದ. ಜೇಮ್ಸ್ ಎಂಬ ಹೆಸರು ತೆಗೆದುಕೊಳ್ಳಿ. ಇಪ್ಪತ್ತೆರಡನೆ ಸಾಲಿನ ಎರಡನೆಪಂಕ್ತಿಯಲ್ಲಿ ಅದು ಕಾಣಬರುತ್ತದೆ. ಆದಕಾರಣ ನಾಮ ನಕ್ಷತ್ರವು ಶ್ರವಣ ಎರಡನೆ ಪಾದ. ಜನ್ಮರಾಶಿಯು ಮಕರ. ಒತ್ತಕ್ಷರಗಳಿದ್ದರೆ, ಆ ಪೈಕಿ ಮೊದಲ ಅಕ್ಷರವನ್ನು ಮಾತ್ರ ತೆಗೆದುಕೊಳ್ಳಬೇಕು. ಕೃಷ್ಣ – ಇದರ ಮೊದಲ ಅಕ್ಷರ ಕ. ಆದಕಾರಣ ನಾಮ ನಕ್ಷತ್ರ ಮೃಗಶಿರ ಮೂರನೇ ಪಾದ (ಐದನೆಯ ಸಾಲು ಮೂರನೆ ಪಂಕ್ತಿ).

*ಪಣಪರಗಳು* : ಎರಡನೆ, ಐದನೆ, ಎಂಟನೆ, ಹನ್ನೊಂದನೆ ಮನೆಗಳು.

*ಗ್ರಹದೃಷ್ಟಿಗಳು*: ಎಲ್ಲ ಗ್ರಹಗಳೂ ಏಳನೆ ಮನೆಯನ್ನು ಪ್ರಬಲವಾಗಿ ವೀಕ್ಷಿಸುತ್ತವೆ. ಶನಿ, ಗುರು, ಕುಜರಿಗೆ ವಿಶೇಷ ದೃಷ್ಟಿಗಳು ಉಂಟು – ಇವು ಕ್ರಮವಾಗಿ ಮೂರನ್ನೆ, ಹತ್ತನೆ ದೃಷ್ಟಿ, ಐದನೆ ಒಂಭತ್ತನೆ ದೃಷ್ಟಿ; ನಾಲ್ಕನೆ ಎಂಟನೆ ದೃಷ್ಟಿ.

*ಗ್ರಹಗಳು* : ರವಿ ಅಥವಾ ಸೂರ್ಯ, ಚಂದ್ರ, ಕುಜ ಅಥವಾ ಮಂಗಳ ಅಥವಾ ಅಂಗಾರಕ, ಬುಧ, ಗುರು ಅಥವಾ ಬೃಹಸ್ಪತಿ, ಶುಕ್ರ, ಶನಿ, ರಾಹು ಮತ್ತು ಕೇತು.

**ಗ್ರಹಗಳು ಮತ್ತು ಮನುಷ್ಯನ ದೇಹ**

ಮೇಷ – ತಲೆ
ವೃಷಭ – ಮುಖ
ಮಿಥುನ – ಕತ್ತು
ಕಟಕ – ಎದೆ

| | |
|---|---|
| ಸಿಂಹ | – ಹೊಟ್ಟೆ, ಉದರ |
| ಕನ್ಯ | – ನಡು |
| ತುಲ | – ಅಂಗಾಂಗಗಳು |
| ವೃಶ್ಚಿಕ | – ಹೊಟ್ಟೆ |
| ಧನುಸ್ | – ತೊಡೆಗಳು |
| ಮಕರ | – ಮೊಣಕಾಲು |
| ಕುಂಭ | – ಕೈಗಳು |
| ಮೀನ | – ಕಾಲುಗಳು |

*ಗ್ರಹಗಳ ಅಸ್ತಂಗತಿ :* ಸೂರ್ಯನಿಂದ ಮುಂದೆ ಕೊಟ್ಟಿರುವ ದೂರಗಳೊಳಗಿರುವ ಗ್ರಹಗಳು ಅಸ್ತವಾಗುತ್ತವೆ.

| | |
|---|---|
| ಚಂದ್ರ | $12^0$ ಒಳಗೆ |
| ಕುಜ | $17^0$ ಒಳಗೆ |
| ಬುಧ | $14^0$ ಒಳಗೆ * |
| ಗುರು | $11^0$ ಒಳಗೆ |
| ಶುಕ್ರ | $10^0$ ಒಳಗೆ * |
| ಶನಿ | $15^0$ ಒಳಗೆ |

ಸ್ತ್ರೀ ಗ್ರಹಗಳು : ಚಂದ್ರ, ಶುಕ್ರ.

*ಗ್ರಹ ಹೋರೆಗಳು:* ಪ್ರಕೃತಿಯಲ್ಲಿರುವ ಸೌರವ್ಯೂಹ ಕ್ರಮವನ್ನು ಇದು ಅವಲಂಬಿಸಿದೆ. **ಸೂರ್ಯ ಸಿದ್ಧಾಂತದ** ಪ್ರಕಾರ ಶನಿಯು ಭೂಮಿಯಿಂದ ಅತ್ಯಂತ ದೂರದಲ್ಲಿರುವ ಗ್ರಹ. ತರುವಾಯ ಗ್ರಮವಾಗಿ ಗುರು, ಕುಜ, ಸೂರ್ಯ, ಶುಕ್ರ, ಬುಧ, ಚಂದ್ರ, ಭೂಮಿ ಇರುತ್ತವೆ. ಒಂದು ದಿವಸದ ಮೊದಲ ಗಂಟೆ ಅಥವಾ ಹೋರ ಆ ದಿವಸದ ಅಧಿಪತಿಯದು. ಉಳಿದವು ಮೇಲೆ ಕೊಟ್ಟಿರುವ ಗ್ರಹಗಳ ಕ್ರಮದಲ್ಲಿ ಬರುತ್ತವೆ. ಹೇಗೆಂದರೆ ಭಾನುವಾರ, ಪ್ರಥಮ ಹೋರದ ಅಧಿಪತಿ ಸೂರ್ಯ ಅಥವಾ ಭಾನು. ಎರಡನೆ ಹೋರಾಧಿಪತಿ ಶುಕ್ರ. ಮೂರನೆಯವ ಬುಧ. ನಾಲ್ಕನೆಯವ ಚಂದ್ರ, ಐದನೆಯವ ಶನಿ, ಆರನೆಯವ ಗುರು, ಏಳನೆಯವ

---

* ಬುಧ ಶುಕ್ರನು ವಕ್ರನಾದಾಗ, ಅಂತರವು ಒಂದು ಡಿಗ್ರಿಯಷ್ಟು ಕಡಿಮೆಯಾಗುತ್ತದೆ.

ಕುಜ, ಎಂಟನೆಯವ ಸೂರ್ಯ ಹೀಗೇ ಪರ್ಯಾಯವಾಗಿ ಒಂದು ಕಡೆ ಹೋರದ ಅಧಿಪತಿ ಬುಧನಾಗುತ್ತಾನೆ. ಇಪ್ಪತ್ತೈದನೆಯ ಹೋರದ (ಸೋಮವಾರದ ಮೊದಲ ಹೋರ) ಅಧಿಪತಿ ಚಂದ್ರನಾಗುತ್ತಾನೆ. ಮುಂದೆ ಕೊಟ್ಟಿರುವ ಪಟ್ಟಿಯು ಜ್ಯೋತಿಷಾರ್ಥಿಗಳಿಗೆ ಉಪಯೋಗವಾಗುತ್ತದೆ.

| | ಭಾನುವಾರ | ಸೋಮವಾರ | ಮಂಗಳವಾರ | ಬುಧವಾರ | ಗುರುವಾರ | ಶುಕ್ರವಾರ | ಶನಿವಾರ |
|---|---|---|---|---|---|---|---|
| 1. | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
| 2. | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| 3. | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |
| 4. | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರವಿ |
| 5. | ಶನಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ |
| 6. | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ |
| 7. | ಕುಜ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ |
| 8. | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
| 9. | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| 10. | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |
| 11. | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರವಿ |
| 12. | ಶನಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ |
| 13. | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ |
| 14. | ಕುಜ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ |
| 15. | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
| 16. | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| 17. | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |
| 18. | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರವಿ |
| 19. | ಶನಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ |
| 20. | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ |
| 21. | ಕುಜ | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ |
| 22. | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
| 23. | ಶುಕ್ರ | ಶನಿ | ರವಿ | ಚಂದ್ರ | ಕುಜ | ಬುಧ | ಗುರು |
| 24. | ಬುಧ | ಗುರು | ಶುಕ್ರ | ಶನಿ | ರವಿ | ಚಂದ್ರ | ಕುಜ |

ಪುರುಷ ಗ್ರಹಗಳು : ಸೂರ್ಯ, ಕುಜ, ಗುರು

ತಟಸ್ಥ ಗ್ರಹಗಳು : ಬುಧ, ಶನಿ.

ರಾಹುಕಾಲ : ಸೂರ್ಯೋದಯವು 6 ಗಂಟೆಗಾದರೆ, ಆಗ ರಾಹು ಕಾಲವು ಕೆಳಗೆ ಕೊಟ್ಟಿರುವ ಪ್ರಕಾರ ಚಾಲ್ತಿಯಲ್ಲಿರುತ್ತದೆ.

| | | |
|---|---|---|
| ಭಾನುವಾರ | ಮಧ್ಯಾಹ್ನ 4-30 | - ಸಂಜೆ 6 ಗಂಟೆ |
| ಸೋಮವಾರ | ಬೆಳಿಗ್ಗೆ 7-30 | - 9 ಗಂಟೆ |
| ಮಂಗಳವಾರ | ಮಧ್ಯಾಹ್ನ 3-00 | - 4-30 ಗಂಟೆ |
| ಬುಧವಾರ | ಮಧ್ಯಾಹ್ನ 12-00 | - 1-30 ಗಂಟೆ |
| ಗುರುವಾರ | ಮಧ್ಯಾಹ್ನ 1-30 | - 3-00 ಗಂಟೆ |
| ಶುಕ್ರವಾರ | ಬೆಳಿಗ್ಗೆ 10-30 | - 12-00 ಗಂಟೆ |
| ಶನಿವಾರ | ಬೆಳಿಗ್ಗೆ 9-00 | -10-30 ಗಂಟೆ |

**ಷೋಡಶ ಕರ್ಮಗಳು** : ಹಿಂದುಗಳು ಆಚರಿಸಬೇಕಾದ ಜನ್ಮಪೂರ್ವ ಮತ್ತು ಜನ್ಮೋತ್ತರ ಸಂಸ್ಕಾರ ಕರ್ಮಗಳು.

**ರಾಶಿಗಳು** : ಮೇಷ, ವೃಷಭ, ಮಿಥುನ, ಕಟಕ, ಸಿಂಹ, ಕನ್ಯಾ, ತುಲ, ವೃಶ್ಚಿಕ, ಧನುಸ್, ಮಕರ, ಕುಂಭ, ಮೀನ.

**ವಾಯುತತ್ವಗಳು** : ಮಿಥುನ, ತುಲ, ಕುಂಭ.

**ಕುರುಡು ರಾಶಿಗಳು** : ಮೇಷ, ವೃಷಭ, ಸಿಂಹ ಇವು ಹಗಲು ಕುರುಡು. ಮಿಥುನ, ಕಟಕ, ಕನ್ಯೆ ರಾತ್ರಿ ಕುರುಡು.

**ಉಭಯ ರಾಶಿಗಳು** : ಮಿಥುನ, ಕನ್ಯ, ಧನುಸ್, ಮೀನ:

**ಕಿವುಡು ರಾಶಿಗಳು** : ತುಲ, ವೃಶ್ಚಿಕ, ಬೆಳಿಗ್ಗೆ ಕಿವುಡು. ಧನುಸ್, ಮಕರ ಸಂಜೆ ಕಿವುಡು. ಕಟಕ. ಕನ್ಯ ಮಧ್ಯಾಹ್ನ ಕಿವುಡು.

**ಭೂತತ್ವ ರಾಶಿಗಳು** : ವೃಷಭ, ಕನ್ಯ, ಮಕರ.

**ಅಗ್ನಿತತ್ವ ರಾಶಿಗಳು** : ಮೇಷ, ಸಿಂಹ, ಧನುಸ್.

**ಸ್ಥಿರ ರಾಶಿಗಳು** : ವೃಷಭ, ಸಿಂಹ, ವೃಶ್ಚಿಕ, ಕುಂಭ.

**ಕುಂಟು ರಾಶಿಗಳು** : ಸಂಧ್ಯಾ ಕಾಲದಲ್ಲಿ ಕುಂಭ, ಮೀನ, ರಾಶಿಗಳು ಕುಂಟಾಗುತ್ತವೆ.

**ಚರ ರಾಶಿಗಳು** : ಮೇಷ, ಕಟಕ, ತುಲ, ಮಕರ.

**ಜಲತತ್ವ ರಾಶಿಗಳು** : ಕಟಕ, ವೃಶ್ಚಿಕ, ಮೀನ.

**ವಿವಿಧ ರೀತಿಯ ತಿಥಿಗಳು** : ನಂದ–ಪಾಡ್ಯ, ಷಷ್ಠಿ, ಏಕಾದಶಿ. ಭದ್ರ – ಬಿದಿಗೆ, ಸಪ್ತಮಿ, ದ್ವಾದಸಿ. ಜಯ – ತದಿಗೆ, ಅಷ್ಟಮಿ, ತ್ರಯೋದಶಿ. ರಿಕ್ತ –

ಚೌತಿ, ನವಮಿ, ಚತುರ್ದಶಿ ಪೂರ್ಣ– ಪಂಚಮಿ, ದಶಮಿ, ಪೂರ್ಣಿಮೆ.

**ತ್ರಿದೋಷಗಳು** : ಆಯುರ್ವೇದದ ಪ್ರಕಾರ, ತ್ರಿದೋಷಗಳಾದ ವಾತ ಪಿತ್ತ ಶ್ಲೇಷ್ಮಗಳು ಸಮಧಾತುವಾಗಿರುರಾಗ ಆರೋಗ್ಯವುಂಟಾಗಿರುತ್ತದೆ.

**ತ್ರಿಕೋಣಗಳು** : ಒಂದನೆ, ಐದನೆ, ಒಂಬತ್ತನೆ ಮನೆಗಳು.

**ಉಪಚಯ** : ಲಗ್ನದಿಂದ ಮೂರನೆ, ಆರನೆ, ಹತ್ತನೆ, ಹನ್ನೊಂದನೆ ಮನೆಗಳು.

**ವೈನಾಶಿಕ** : ಜನ್ಮ ನಕ್ಷತ್ರದಿಂದ ಇಪ್ಪತ್ತೆರಡನೆ ನಕ್ಷತ್ರ. ಇದು ಧ್ವಂಸಕಾರಿ. ಎಲ್ಲ ಸತ್ಕಾರ್ಯಗಳೂ ಅದನ್ನೂ ನಿವಾರಿಸಿಕೊಳ್ಳಬೇಕು.

**ಕೆಟ್ಟ ಯೋಗಗಳು** : ಪರಿಶಿಷ್ಟ 3ರಲ್ಲಿ ಹೇಳಿರುವ ಯೋಗಗಳ ಪೈಕಿ, ಮುಂದೆ ಸೂಚಿಸಿರುವವರು ಅಶುಭ, ವ್ಯಾಘಾತ, ಪರಿಘ್, ವಜ್ರ, ವ್ಯತೀಘಾತ, ವೈಧೃತಿ, ಗಂಡ, ಅತಿಗಂಡ, ಶೂಲ, ವಿಷ್ಕಂಭ.

**ಪರಿಶಿಷ್ಟ-2**

## ನಕ್ಷತ್ರಗಳ ಪಟ್ಟಿ

| ಕ್ರಮಾಂಕ | ನಕ್ಷತ್ರನಾಮ | ಮೇಷಾದಿಯಿಂದ ಅಕ್ಷಾಂಶ (ಸ್ಫುಟ) ° | ' |
|---|---|---|---|
| 1. | ಅಶ್ವಿನಿ | 13° | 20' |
| 2. | ಭರಣಿ' | 26° | 40' |
| 3. | ಕೃತ್ತಿಕ | 40° | 00' |
| 4. | ರೋಹಿಣಿ | 53° | 20' |
| 5. | ಮೃಗಶಿರ | 66° | 40' |
| 6. | ಆರ್ದ್ರ | 80° | 00' |
| 7. | ಪುನರ್ವಸು | 93° | 20' |
| 8. | ಪುಷ್ಯಮಿ | 106° | 80' |
| 9. | ಆಶ್ಲೇಷ | 120° | 00' |
| 10. | ಮಖ | 133° | 20' |
| 11. | ಪುಬ್ಬ | 146° | 40' |
| 12. | ಉತ್ತರ | 160° | 00' |

| ಕ್ರಮಾಂಕ | ನಕ್ಷತ್ರನಾಮ | ಮೇಷಾದಿಯಿಂದ ಅಕ್ಷಾಂಶ (ಸ್ಫುಟ) ° | ' |
|---|---|---|---|
| 13. | ಹಸ್ತ | 123° | 20' |
| 14. | ಚಿತ್ತ | 186° | 40' |
| 15. | ಸ್ವಾತಿ | 200° | 00' |
| 16. | ವಿಶಾಖ | 213° | 20' |
| 17. | ಅನೂರಾಧ | 226° | 40' |
| 18. | ಜ್ಯೇಷ್ಠ | 240° | 00' |
| 19. | ಮೂಲ | 253° | 20' |
| 20. | ಪೂರ್ವಾಷಾಢ | 266° | 40' |
| 21. | ಉತ್ತರಾಷಾಢ | 280° | 00' |
| 22. | ಶ್ರವಣ | 293° | 20' |
| 23. | ಧನಿಷ್ಠ | 306° | 40' |
| 24. | ಶತಭಿಷ | 320° | 00' |
| 25. | ಪೂರ್ವಾಭಾದ್ರ | 333° | 20' |
| 26. | ಉತ್ತರಾಭಾದ್ರ | 346° | 40' |
| 27. | ರೇವತಿ | 360° | 00' |

## ಪರಿಶಿಷ್ಟ - 3

# ಯೋಗಗಳ ಪಟ್ಟಿ

| ಕ್ರಮಾಂಕ | ನಕ್ಷತ್ರನಾಮ | ಮೇಷಾದಿಯಿಂದ ಅಕ್ಷಾಂಶ (ಸ್ಫುಟ) ° | ' |
|---|---|---|---|
| 1. | ವಿಷ್ಕಂಬ | 13° | 20' |
| 2. | ಪ್ರೀತಿ | 26° | 40' |
| 3. | ಆಯುಷ್ಮಾನ್ | 40° | 00' |
| 4. | ಸೌಭಾಗ್ಯ | 53° | 20' |

| ಕ್ರಮಾಂಕ | ಯೋಗಗಳ ಪಟ್ಟಿ | ಮೇಷಾದಿಯಿಂದ ಅಕ್ಷಾಂಶ (ಸ್ಫುಟ) | |
|---|---|---|---|
| | | ° | ' |
| 5. | ಶೋಭನ | 66° | 40' |
| 6. | ಅತಿಗಂಡ | 80° | 00' |
| 7. | ಸುಕರ್ಮನ್ | 93° | 20' |
| 8. | ಧೃತಿ | 106° | 40' |
| 9. | ಶೂಲ | 120° | 00' |
| 10. | ಗಂಡ | 133° | 20' |
| 11. | ವೃದ್ಧಿ | 146° | 40' |
| 12. | ಧ್ರುವ | 160° | 00' |
| 13. | ವ್ಯಾಘಾತ | 173° | 20' |
| 14. | ಹರ್ಷಣ | 186° | 40' |
| 15. | ವಜ್ರ | 200° | 00' |
| 16. | ಸಿದ್ಧಿ | 213° | 20' |
| 17. | ವ್ಯತೀಪಾತ | 236° | 40' |
| 18. | ವರಿಯಾನ್ | 240° | 00' |
| 19. | ಪರಿಘ | 253° | 20' |
| 20. | ಶಿವ | 266° | 40' |
| 21. | ಸಿದ್ಧ | 280° | 00' |
| 22. | ಸಾಧ್ಯ | 293° | 20' |
| 23. | ಶುಭ | 306° | 40' |
| 24. | ಶುಕ್ಲ | 320° | 00' |
| 25. | ಬ್ರಹ್ಮ | 333° | 20' |
| 26. | ಇಂದ್ರ | 346° | 40' |
| 27. | ವೈಧೃತಿ | 360° | 00' |

**ವಿವರಣೆ :**

ಸೂರ್ಯ ಚಂದ್ರರ ಸ್ಫುಟ ಕೂಡಿದರೆ 281° ಆಗುತ್ತದೆನ್ನಿ. ಮೇಲಿನ ಪಟ್ಟಿಯಲ್ಲಿ 280° ರಿಂದ 293° 20' ರವರೆಗೆ ಸಿದ್ದಯೋಗವಿರುತ್ತದೆ. ಅದ್ದರಿಂದ ಈ ಯೋಗದಲ್ಲಿ 1° ಸಂಧಿಸುತ್ತದೆ.

## ಗ್ರಂಥಋಣ


ಮುಹೂರ್ತ ಚಿಂತಾಮಣಿ

ಮುಹೂರ್ತ ಮಾರ್ತಾಂಡ

ಮುಹೂರ್ತ ದರ್ಪಣ

ಮುಹೂರ್ತ ದೀಪಕ

ಕಾಲಾಮೃತ

ಉತ್ತರ ಕಾಲಾಮೃತ

ಪ್ರಶ್ನಮಾರ್ಗ

ಬೃಹತ್ ಸಂಹಿತ

ಕಾಲಪ್ರಕಾಶಿಕ

ಜಾತಕಾ ದೇಶಮಾರ್ಗ

ಮುಹೂರ್ತ ಪ್ರದರ್ಶಿನಿ

ವಿದ್ಯಾಮಾಧವೀಯಂ

ಫಲಜ್ಯೋತಿಷ – ಡಾ.ಬಿ.ವಿ.ರಾಮನ್

ಜ್ಯೋತಿಷ ಮತ್ತು ಆಧುನಿಕ ಭಾವನೆಗಳು – ಡಾ.ಬಿ.ವಿ.ರಾಮನ್

ಟೆಕ್ಸ್ಟ್ ಬುಕ್ ಆಫ್ ಅಸ್ಟ್ರಾಲಜಿ –ಡಾ. ಎ.ಜೆ. ಪಿಯರ್ಸ

ಅಸ್ಟ್ರಲಾಜಿಕಲ್ ಮಿರರ್ – ಪ್ರೊ.ಬಿ. ಸೂರ್ಯನಾರಾಯಣರಾವ್

ಅಸ್ಟ್ರೊಲಾಜಿಕಲ್ ಮಿರರ್ (ಕಿಸೆ ಮುದ್ರಣ)

ಎನ್ ಇಂಟ್ರೊಡಕ್ಷನ್ ಟು ಅಸ್ಟ್ರಾಲಜಿ–ಪ್ರೊ.ಬಿ.ಸೂರ್ಯನಾರಾಯಣರಾವ್

ಎಲೆಕ್ಷನಲ್ ಅಸ್ಟ್ರಾಲಜಿ – ವಿ.ಇ.ರಾಬ್ಸನ್

ಅಕ್ಷ ನ್ಸ್ ಆಫ್ ರೇಡಿಯೇಷನ್ ಆನ್ ಲಿವಿಂಗ್ ಸೆಲ್ಸ – ಡಿ.ಇ.ಲೀ .

ದಿ ಸೀಕ್ರೆಟ್ ಆಫ್ ಲೈಫ್ – ಜಾರ್ಜಸ್ ಲಿಖೋವಸ್ಕಿ

